# ಶ್ರೀಮದ್ವಾಲ್ಮೀಕಿ ರಾಮಾಯಣಮ್

# ಸುಂದರಕಾಂಡಃ

(ಕನ್ನಡ ಅನುವಾದ ಸಹಿತ)

ಮುನ್ನುಡಿ :

**ಡಾ|| ಡಿ. ವಿ. ಗುಂಡಪ್ಪನವರಿಂದ**


ಅನುವಾದಕರು :

**ವಿದ್ವಾನ್ ಎನ್. ರಂಗನಾಥಶರ್ಮಾ**



ಪ್ರಕಾಶಕರು :

ರಾಮಾಯಣ ಪ್ರಕಾಶನ ಸಮಿತಿ

ನರಸಿಂಹರಾಜ ಕಾಲೊನಿ, ಬೆಂಗಳೂರು—೫೬೦೦೧೯

# ಬಿನ್ನಹ

ಶ್ರೀ ನರಸಿಂಹರಾಜ ಕಾಲೊನಿಯಲ್ಲಿ ಇಪ್ಪತ್ತೈದು ವರ್ಷಗಳಿಂದ ಸತತ ವಾಗಿ ಚೈತ್ರಮಾಸದಲ್ಲಿ ಶ್ರೀರಾಮೋತ್ಸವವು ವಿಜೃಂಭಣೆಯಿಂದ ನಡೆದು ಕೊಂಡು ಬಂದಿದೆ. ಈ ವರ್ಷ ಶ್ರೀ ರಾಮೋತ್ಸವದ ರಜತಮಹೋತ್ಸವವನ್ನು ಆಚರಿಸಲಾಯಿತು. ಈ ಸಂದರ್ಭದ ಸವಿನೆನಪಿಗಾಗಿ ಶ್ರೀಮದ್ವಾಲ್ಮೀಕಿ ರಾಮಾಯಣದ ಸುಂದರಕಾಂಡವನ್ನು ಅನುವಾದ ಸಮೇತ ನಮ್ಮ ಸಂಘದಿಂದ ಬರೆಯಿಸಿ ಪ್ರಕಟಿಸಬೇಕೆಂಬ ಅಭಿಲಾಷೆಯುಂಟಾಯಿತು. ಈ ಕಾರ್ಯಕ್ಕೆ ಡಾ|| ಡಿ. ವಿ. ಗುಂಡಪ್ಪನವರ ಸಲಹೆಯನ್ನು ಕೇಳಿದಾಗ ಅವರು ತಮ್ಮ ಸಂಪೂರ್ಣ ಬೆಂಬಲವನ್ನು ನೀಡಿದುದಲ್ಲದೆ, ತಮ್ಮ ಮಾರ್ಗದರ್ಶನದಲ್ಲಿ ಈ ಗ್ರಂಥರಚನೆಗೆ ನೆರವಾಗಿರುತ್ತಾರೆ; ಮತ್ತು ವೈದುಷ್ಯಪೂರ್ಣವಾದ ಮುನ್ನುಡಿಯನ್ನೂ ಸಹ ಬರೆದುಕೊಟ್ಟು ಉಪಕಾರ ಮಾಡಿರುತ್ತಾರೆ. ಅವರಿಗೆ ನಮ್ಮ ಸಂಘದವರು ಚಿರಋಣಿಯಾಗಿದ್ದಾರೆ.

ಪ್ರಸಿದ್ಧ ವಿದ್ವಾಂಸರಾದ ಶ್ರೀ ಎನ್. ರಂಗನಾಥಶರ್ಮರು ಭಾವಾನುವಾದವನ್ನು ಬರೆದು ಗ್ರಂಥರಚನೆಯ ಕಾರ್ಯವನ್ನು ಸಾಂಗವಾಗಿ ನೆರವೇರಿಸಿ ಕೊಟ್ಟಿರುತ್ತಾರೆ. ಇವರಿಗೆ ನಮ್ಮ ಕೃತಜ್ಞತಾಪೂರ್ವಕವಾದ ವಂದನೆಗಳು.

ಇನ್ನೂ ಅನೇಕ ರೀತಿಯಲ್ಲಿ ಈ ಕಾರ್ಯಕ್ಕೆ ಸಹಾಯ ಮಾಡಿರುವ ಧರ್ಮಾಭಿಮಾನಿಗಳಿಗೆ ಸಂಘವು ಋಣಿಯಾಗಿದೆ. ಮೆ|| ಬೃಂದಾವನ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ ಸಂಸ್ಥೆಯವರು ಅಂದವಾಗಿ ಗ್ರಂಥದ ಮುದ್ರಣವನ್ನು ಮಾಡಿಕೊಟ್ಟು ಉಪಕಾರ ಮಾಡಿರುತ್ತಾರೆ. ಇವರಿಗೆ ನಮ್ಮ ವಂದನೆಗಳು.

ಈ ಗ್ರಂಥಕ್ಕೆ ಕನ್ನಡ ನಾಡಿನ ಜನತೆಯ ಪ್ರೋತ್ಸಾಹವು ಸಾಕಾದಷ್ಟು ದೊರೆಯುವುದೆಂದು ನಂಬಿದ್ದೇನೆ. ಮುಂದೆ ಬಾಲಕಾಂಡದಿಂದ ಕೊನೆಯವರೆಗೆ ರಾಮಾಯಣ ಗ್ರಂಥವನ್ನು ಸಂಪೂರ್ಣವಾಗಿ ಪ್ರಕಟಿಸಬೇಕೆಂಬ ಅಪೇಕ್ಷೆಯಿದೆ. ಶ್ರೀ ರಾಮಾನುಗ್ರಹದಿಂದ ಈ ಕಾರ್ಯವು ನೆರವೇರುವಂತಾಗಲೆನ್ನುವುದೇ ನಮ್ಮ ಹಾರೈಕೆ.

**ಎಸ್. ಎನ್. ಮೂರ್ತಿ** — ಕಾರ್ಯದರ್ಶಿ

**ಹೆಚ್. ಎಸ್. ಕೃಷ್ಣಸ್ವಾಮಿ** — ಅಧ್ಯಕ್ಷ

ಶ್ರೀರಾಮಮಂದಿರ, ಶ್ರೀ ನರಸಿಂಹರಾಜ ಕಾಲೊನಿ ಅಸೋಸಿಯೇಷನ್ (ರಿ.)

ಬೆಂಗಳೂರು
25-12-1964

ಶ್ರೀಃ

# ಶ್ರೀಮದ್ರಾಮಾಯಣ ಪಾರಾಯಣ ವಿಧಿ

ವಸಂತನವರಾತ್ರ ಮತ್ತು ಶರನ್ನವರಾತ್ರಗಳಲ್ಲಿ ಶ್ರೀಮದ್ರಾಮಾಯಣದ ಪಾರಾಯಣವು ಪ್ರಶಸ್ತ. ಆಷಾಢ, ಭಾದ್ರಪದ, ಪುಷ್ಯ ಮಾಸಗಳನ್ನೂ ಗುರುಶುಕ್ರಾಸ್ತಕಾಲವನ್ನೂ ಪರಿತ್ಯಜಿಸಿ ಯಾವಾಗಲಾದರೂ ಆರಂಭಿಸ ಬಹುದು. ನಿತ್ಯಪಾರಾಯಣಕ್ಕೆ ಈ ಕಾಲ ವಿಧಿಯು ಅನ್ವಯಿಸುವುದಿಲ್ಲ. ಸುಂದರಕಾಂಡಪಾರಾಯಣದ ವಿಧಿಗಳು ಅನೇಕವಾಗಿವೆ.

೧. **ನಿತ್ಯಪಾರಾಯಣ :** ಪ್ರತಿದಿನವೂ ಸುಂದರಕಾಂಡವನ್ನು ಮೊದಲಿನಿಂದ ಯಥಾಶಕ್ತಿ ಪಾರಾಯಣಮಾಡುವುದು. ದಿನಕ್ಕೆ ಇಷ್ಟು ಸರ್ಗಗಳೆಂಬ ನಿಯಮವಿಲ್ಲ. ಸರ್ಗದ ಮಧ್ಯದಲ್ಲಿ ಮಾತ್ರ ಪಾರಾಯಣ ವನ್ನು ನಿಲ್ಲಿಸಬಾರದು.

೨. **ಸಪ್ತಸರ್ಗೀಪಾರಾಯಣ :** ಸುಂದರಕಾಂಡದಲ್ಲಿ ೬೮ ಸರ್ಗ ಗಳಿವೆ. ದಿನಕ್ಕೆ ಏಳು ಸರ್ಗಗಳನ್ನು ಪಾರಾಯಣಮಾಡುತ್ತಾ ಹೋಗುವುದು. ಒಂಬತ್ತು ದಿನಗಳಲ್ಲಿ ೬೩ ಸರ್ಗಗಳು ಮುಗಿಯುತ್ತವೆ. ಹತ್ತನೆಯ ದಿನದಲ್ಲಿ ಕಡೆಯ ಐದು ಸರ್ಗಗಳೊಡನೆ ಮೊದಲನೆಯ ಎರಡು ಸರ್ಗಗಳನ್ನೂ ಸೇರಿಸಿ ಏಳು ಸರ್ಗಗಳನ್ನು ಪಾರಾಯಣಮಾಡುವುದು. ಹನ್ನೊಂದನೆಯ ದಿನ ಮುಂದಿನ ಏಳು ಸರ್ಗಗಳು. ಈ ಕ್ರಮದಲ್ಲಿ ಪುನರಾವೃತ್ತಿಯಿಂದ ಮಾಡುತ್ತ ಹೋದರೆ ಸುಂದರಕಾಂಡದ ಕಡೆಯ ಏಳು ಸರ್ಗಗಳ ಸರದಿ ೬೮ನೆಯ ದಿನದಲ್ಲಿ ಬರುತ್ತದೆ. ಅಲ್ಲಿಗೆ ಒಂದು ಪರ್ಯಾಯ ಸಮಾಪ್ತವಾಗುತ್ತದೆ. ಹೀಗೆ ಎಷ್ಟು ಪರ್ಯಾಯಗಳನ್ನಾದರೂ ಆಚರಿಸಬಹುದು.

೩. **ಷೋಡಶಾಹಪಾರಾಯಣ :** ಒಂದೊಂದು ದಿನವೂ ಕ್ರಮವಾಗಿ ೨-೪-೪-೪-೮-೧-೮-೧-೫-೫-೭-೬-೧-೬-೨-೪ ಸರ್ಗಗಳನ್ನು ಪಾರಾಯಣಮಾಡುತ್ತ ಹೋದರೆ, ಹದಿನಾರು ದಿನಗಳಲ್ಲಿ ೬೮ ಸರ್ಗಗಳು ಸಮಾಪ್ತವಾಗುತ್ತವೆ. "ರಾಘವೋ ವಿಜಯಂ ದದ್ಯಾತ್ ಮಮ ಸೀತಾಪತಿಃ ಪ್ರಭುಃ" ಎಂಬುದು ಈ ವಿಧಾನಕ್ಕೆ ಮೂಲಸೂತ್ರ. ಕಟಪಯಾದಿಸೂತ್ರ

ಪದ್ಧತಿಯಂತೆ ಈ ಸೂತ್ರದ ಹದಿನಾರು ಅಕ್ಷರಗಳು ಮೇಲ್ಕಂಡ ಹದಿನಾರು ಸಂಖ್ಯೆಗಳನ್ನು ಸೂಚಿಸುತ್ತವೆ. ರ–೨, ಫ–೪, ವ–೪ ಹೀಗೆ. 'ತ್' ಎಂಬ ವ್ಯಂಜನಕ್ಕೆ ಗಣನೆಯಿಲ್ಲ.

ಸರ್ವವಿಧಪಾರಾಯಣಗಳಿಗೂ ಶ್ರದ್ಧಾಭಕ್ತಿಗಳೇ ಮೂಲಸೂತ್ರ. ಇದು ತಪ್ಪಿದಲ್ಲಿ ಯಾವ ವಿಧಾನವೂ ಫಲಕಾರಿಯಾಗದು. ಬೀಜಾಕ್ಷರಗಳ ನ್ಯಾಸವು ಸುಂದರಕಾಂಡದಲ್ಲಿ ವಿಶೇಷವಾಗಿದೆಯೆಂದೂ ಆದ್ದರಿಂದ ಇದು ನಿತ್ಯಪಾರಾಯಣಕ್ಕೆ ಶ್ರೇಷ್ಠವಾದದ್ದೆಂದೂ ಆಸ್ತಿಕರು ನಂಬಿದ್ದಾರೆ.

ಬೀಜಕಾಂಡಮಿದಂ ಪ್ರೋಕ್ತಂ ಸರ್ವಪಾರಾಯಣೇಷ್ವಪಿ |
ತಸ್ಮಾತ್ ಪಾರಾಯಣಂ ಕೃತ್ವಾ ಧನ್ಯಾ ಭವತ ತತ್ತ್ವತಃ ||

ಎಂದು ಅಗಸ್ತ್ಯಸಂಹಿತೆಯಲ್ಲಿ ಹೇಳಿದೆ. ಪಾರಾಶರ್ಯೋಪಪುರಾಣದಲ್ಲಿ ಸುಂದರಕಾಂಡದ ಪಾರಾಯಣದಿಂದಾಗುವ ಪ್ರಯೋಜನಗಳನ್ನು ಹೀಗೆ ವರ್ಣಿಸಿದ್ದಾರೆ:

ತ್ರಿವರ್ಗಫಲಕಾಮೇನ ವಿಪದುತ್ತರಣೇಪ್ಸುನಾ |
ಶ್ರೀಮತ್ಸುಂದರಕಾಂಡಸ್ಯ ಪಾಠಃ ಕಾರ್ಯೋ ವಿಜಾನತಾ ||
ಶಾಂತಿಕರ್ಮಣಿ ಸರ್ವತ್ರ ತಥಾ ದುಃಸ್ವಪ್ನದರ್ಶನೇ |
ಗ್ರಹಪೀಡಾಸು ಚೋಗ್ರಾಸು ರೋಗೇಷು ವಿಷಮೇಷು ಚ ||
ಅರಣ್ಯೇ ಪ್ರಾಂತರೇ ಚಾಪಿ ಶಸ್ತ್ರಚೋರಾಗ್ನಿಪೀಡನೇ |
ಸರ್ವಾಸ್ವಾಪತ್ಸು ಘೋರಾಸು ನೈತಸ್ಮಾತ್ತಾರಕಂ ಪರಮ್ ||

ಬ್ರಹ್ಮಾಂಡಪುರಾಣದಲ್ಲಿ ಹೀಗೆ ಹೇಳಿದೆ:

ಹನುಮದ್ವಿಜಯಂ ಕಾಂಡಂ ಯಃ ಪಾರಾಯಣಮಾಚರೇತ್ |
ವಿಧಿನಾ ಸರ್ವಸಿದ್ಧಿಂ ಚ ಪ್ರಾಪ್ನೋತಿ ಚ ನ ಸಂಶಯಃ ||
ಶ್ರುತ್ವಾ ತು ಪಂಚಮಂ ಕಾಂಡಂ ಹನುಮದ್ವಿಜಯಾಂಕಿತಮ್ |
ಆಂಜನೇಯಪ್ರಸಾದೇನ ಬ್ರಹ್ಮಲೋಕಂ ಸ ಗಚ್ಛತಿ ||

ಇತ್ಯಾದಿ

**ಸೂಚನೆ:—ಗುರೂಪದೇಶವನ್ನು ಪಡೆದು ಕ್ರಮಪೂರ್ವಕವಾಗಿ ಪಾರಾಯಣವನ್ನು ಆರಂಭಿಸುವುದು ಉತ್ತಮ.**

ಆಚಮನ ಪ್ರಾಣಾಯಾಮ ಸಂಕಲ್ಪಗಳನ್ನು ಮಾಡಿ ಶ್ರೀಮದ್-ರಾಮಾಯಣ ಪುಸ್ತಕದಲ್ಲಿ ಶ್ರೀರಾಮನನ್ನು ಆವಾಹಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು. ಅನಂತರ ಮುಂದೆ ಹೇಳುವ ಶ್ಲೋಕಗಳನ್ನು ಪಠಿಸಿ ಪಾರಾಯಣವನ್ನು ಆರಂಭಿಸಬೇಕು. ಆ ದಿನದ ಪಾರಾಯಣವು ಸಮಾಪ್ತವಾದಮೇಲೆ ಪುನಃ ಪೂಜೆ ಮಾಡಬೇಕು. ಪಾರಾಯಣಕ್ರಮದಲ್ಲಿರುವ ಮೂರು ಸಂಪ್ರದಾಯಗಳನ್ನು ಕೆಳಗೆ ಬರೆದಿದೆ. ೧ನೆಯ ಸಂಪ್ರದಾಯವನ್ನು ಸಕಲರೂ ಯಾವ ಭೇದವೂ ಇಲ್ಲದೆ ಅನುಸರಿಸಬಹುದು. ಶ್ರೀವೈಷ್ಣವರೂ ಮಾಧ್ವರೂ ಅನುಸರಿಸುವ ವಿಧಾನವನ್ನು ೨ ಮತ್ತು ೩ನೆಯ ಸಂಪ್ರದಾಯ ಕ್ರಮದಲ್ಲಿ ತಿಳಿಸಿದೆ.

## ೧. ಸ್ಮಾರ್ತಸಂಪ್ರದಾಯ

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥ ೧

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಮ್ ॥ ೨

ದೋರ್ಭಿರ್ಯುಕ್ತಾ ಚತುರ್ಭಿಃ ಸ್ಫಟಿಕಮಣಿಮಯೀ-
ಮಕ್ಷಮಾಲಾಂ ದಧಾನಾ
ಹಸ್ತೇನೈಕೇನ ಪದ್ಮಂ ಸಿತಮಪಿ ಚ ಶುಕಂ ಪುಸ್ತಕಂ ಚಾಪರೇಣ ।
ಭಾಸಾ ಕುಂದೇಂದುಶಂಖಸ್ಫಟಿಕಮಣಿನಿಭಾ ಭಾಸಮಾನಾಽಸಮಾನಾ
ಸಾ ಮೇ ವಾಗ್ದೇವತೇಯಂ ನಿವಸತು ವದನೇ ಸರ್ವದಾ ಸುಪ್ರಸನ್ನಾ ॥

ಕೂಜಂತಂ ರಾಮ ರಾಮೇತಿ ಮಧುರಂ ಮಧುರಾಕ್ಷರಮ್ ।
ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಿಕೋಕಿಲಮ್ ॥ ೪

ವಾಲ್ಮೀಕೇರ್ಮುನಿಸಿಂಹಸ್ಯ ಕವಿತಾವನಚಾರಿಣಃ ।
ಶೃಣ್ವನ್ ರಾಮಕಥಾನಾದಂ ಕೋ ನ ಯಾತಿ ಪರಾಂ ಗತಿಮ್ ॥ ೫

ಯಃ ಪಿಬನ್ ಸತತಂ ರಾಮಚರಿತಾಮೃತಸಾಗರಮ್ |
ಅತೃಪ್ತಸ್ತಂ ಮುನಿಂ ವಂದೇ ಪ್ರಾಚೇತಸಮಕಲ್ಮಷಮ್ || ೬

ಗೋಷ್ಪದೀಕೃತವಾರಾಶಿಂ ಮಶಕೀಕೃತರಾಕ್ಷಸಮ್ |
ರಾಮಾಯಣಮಹಾಮಾಲಾರತ್ನಂ ವಂದೇಽನಿಲಾತ್ಮಜಮ್ || ೭

ಅಂಜನಾನಂದನಂ ವೀರಂ ಜಾನಕೀಶೋಕನಾಶನಮ್ |
ಕಪೀಶಮಕ್ಷಹಂತಾರಂ ವಂದೇ ಲಂಕಾಭಯಂಕರಮ್ || ೮

ಉಲ್ಲಂಘ್ಯ ಸಿಂಧೋಃ ಸಲಿಲಂ ಸಲೀಲಂ ಯಃ ಶೋಕವಹ್ನಿಂ
ಜನಕಾತ್ಮಜಾಯಾಃ |
ಆದಾಯ ತೇನೈವ ದದಾಹ ಲಂಕಾಂ ನಮಾಮಿ ತಂ ಪ್ರಾಂಜಲಿ-
ರಾಂಜನೇಯಮ್ || ೯

ಆಂಜನೇಯಮತಿಪಾಟಲಾನನಂ
ಕಾಂಚನಾದ್ರಿಕಮನೀಯವಿಗ್ರಹಮ್ |
ಪಾರಿಜಾತತರುಮೂಲವಾಸಿನಂ
ಭಾವಯಾಮಿ ಪವಮಾನನಂದನಮ್ || ೧೦

ಯತ್ರ ಯತ್ರ ರಘುನಾಥಕೀರ್ತನಂ
ತತ್ರ ತತ್ರ ಕೃತಮಸ್ತಕಾಂಜಲಿಮ್ |
ಬಾಷ್ಪವಾರಿಪರಿಪೂರ್ಣಲೋಚನಂ
ಮಾರುತಿಂ ನಮತ ರಾಕ್ಷಸಾಂತಕಮ್ || ೧೧

ಮನೋಜವಂ ಮಾರುತತುಲ್ಯವೇಗಂ
ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಮ್ |
ವಾತಾತ್ಮಜಂ ವಾನರಯೂಥಮುಖ್ಯಂ
ಶ್ರೀರಾಮದೂತಂ ಶಿರಸಾ ನಮಾಮಿ || ೧೨

ಯಃ ಕರ್ಣಾಂಜಲಿಸಂಪುಟೈರಹರಹಃ ಸಮ್ಯಕ್ ಪಿಬತ್ಯಾದರಾ-
ದ್ವಾಲ್ಮೀಕೇರ್ವದನಾರವಿಂದಗಲಿತಂ ರಾಮಾಯಣಾಖ್ಯಂ ಮಧು |
ಜನ್ಮವ್ಯಾಧಿಜರಾವಿಪತ್ತಿಮರಣೈರತ್ಯಂತಸೋಪದ್ರವಂ
ಸಂಸಾರಂ ಸ ವಿಹಾಯ ಗಚ್ಛತಿ ಪುಮಾನ್ ವಿಷ್ಣೋಃ
ಪದಂ ಶಾಶ್ವತಮ್ || ೧೩

ತದುಪಗತಸಮಾಸಸಂಧಿಯೋಗಂ
ಸಮಮಧುರೋಪನತಾರ್ಥವಾಕ್ಯಬದ್ಧಮ್ |
ರಘುವರಚರಿತಂ ಮುನಿಪ್ರಣೀತಂ
ದಶಶಿರಸಶ್ಚ ವಧಂ ನಿಶಾಮಯಧ್ವಮ್ || ೧೪

ವಾಲ್ಮೀಕಿಗಿರಿಸಂಭೂತಾ ರಾಮಸಾಗರಗಾಮಿನೀ |
ಪುನಾತು ಭುವನಂ ಪುಣ್ಯಾ ರಾಮಾಯಣಮಹಾನದೀ || ೧೫

ಶ್ಲೋಕಸಾರಸಮಾಕೀರ್ಣಂ ಸರ್ಗಕಲ್ಲೋಲಸಂಕುಲಮ್ |
ಕಾಂಡಗ್ರಾಹಮಹಾಮೀನಂ ವಂದೇ ರಾಮಾಯಣಾರ್ಣವಮ್ ||

ವೇದವೇದ್ಯೇ ಪರೇ ಪುಂಸಿ ಜಾತೇ ದಶರಥಾತ್ಮಜೇ |
ವೇದಃ ಪ್ರಾಚೇತಸಾದಾಸೀತ್ಸಾಕ್ಷಾದ್ರಾಮಾಯಣಾತ್ಮನಾ || ೧೭

ವೈದೇಹೀಸಹಿತಂ ಸುರದ್ರುಮತಲೇ ಹೈಮೇ ಮಹಾಮಂಟಪೇ
ಮಧ್ಯೇಪುಷ್ಪಕಮಾಸನೇ ಮಣಿಮಯೇ ವೀರಾಸನೇ ಸುಸ್ಥಿತಮ್ |
ಅಗ್ರೇ ವಾಚಯತಿ ಪ್ರಭಂಜನಸುತೇ ತತ್ತ್ವಂ ಮುನಿಭ್ಯಃ ಪರಂ
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ ರಾಮಂ ಭಜೇ ಶ್ಯಾಮಲಮ್

ವಾಮೇ ಭೂಮಿಸುತಾ ಪುರಶ್ಚ ಹನುಮಾನ್ ಪಶ್ಚಾತ್ ಸುಮಿತ್ರಾಸುತಃ
ಶತ್ರುಘ್ನೋ ಭರತಶ್ಚ ವಾಮದಲಯೋರ್ವಾಯ್ವಾದಿಕೋಣೇಷು ಚ |
ಸುಗ್ರೀವಶ್ಚ ವಿಭೀಷಣಶ್ಚ ಯುವರಾಟ್ ತಾರಾಸುತೋ ಜಾಂಬವಾನ್
ಮಧ್ಯೇ ನೀಲಸರೋಜಕೋಮಲರುಚಿಂ ರಾಮಂ ಭಜೇ ಶ್ಯಾಮಲಮ್

ನಮೋಽಸ್ತು ರಾಮಾಯ ಸಲಕ್ಷ್ಮಣಾಯ
ದೇವ್ಯೈ ಚ ತಸ್ಯೈ ಜನಕಾತ್ಮಜಾಯೈ |
ನಮೋಽಸ್ತು ರುದ್ರೇಂದ್ರಯಮಾನಿಲೇಭ್ಯೋ
ನಮೋಽಸ್ತು ಚಂದ್ರಾರ್ಕಮರುದ್ಗಣೇಭ್ಯಃ || ೨೦



ಮೇಲಿನ ಶ್ಲೋಕಗಳನ್ನು ಪಠಿಸಿದ ಮೇಲೆ ಸುಂದರಕಾಂಡ ಪಾರಾಯಣದ ಆರಂಭದಲ್ಲಿ, ಮುಂದೆ ತಿಳಿಸುವ ಪ್ರಕಾರ ಮಂತ್ರನ್ಯಾಸಾದಿಗಳನ್ನು ಮಾಡಿಕೊಳ್ಳಬೇಕು. ಹಾಗಲ್ಲದೆ ಮೇಲ್ಕಂಡ ಶ್ಲೋಕಗಳನ್ನು ಪಠಿಸಿ ಮಂತ್ರನ್ಯಾಸಾದಿಗಳಿಲ್ಲದೆ ನೇರವಾಗಿ ಪಾರಾಯಣವನ್ನಾರಂಭಿಸುವ ಪದ್ಧತಿಯೂ ಉಂಟು.

ಅಸ್ಯ ಶ್ರೀಸುಂದರಕಾಂಡಮಹಾಮಂತ್ರಸ್ಯ | ವಾಲ್ಮೀಕಿಃ ಋಷಿಃ | ಅನುಷ್ಟುಪ್ ಛಂದಃ | ಆಂಜನೇಯೋ ದೇವತಾ | ರಾಮದೂತಾಯ ಕಪಯ ಇತಿ ಬೀಜಮ್ | ನಮೋ ವಾತಾತ್ಮಜಾಯ ಇತಿ ಶಕ್ತಿಃ | ಸಮುದ್ರತಾರಕಾಯ ಇತಿ ಕೀಲಕಮ್ | ಮಮಾಭೀಷ್ಟಸಿದ್ಧ್ಯರ್ಥಂ ಸುಂದರಕಾಂಡಪಾರಾಯಣೇ ವಿನಿಯೋಗಃ | ಉದಧಿಕ್ರಮಿಣೇ ತುಭ್ಯಂ ನಮೋ ರಾಕ್ಷಸಮರ್ದಿನೇ ಅಂಗುಷ್ಠಿಕಾಭ್ಯಾಂ ನಮಃ | ಛಾಯಾಗ್ರಹ-ವಿನಾಶಾಯ ಸುರಸಾಮಾರಕಾಯ ಚ ತರ್ಜನೀಭ್ಯಾಂ ನಮಃ | ಮೈನಾಕ-ದರ್ಶಿನೇ ತುಭ್ಯಂ ಮೈನಾಕಗಿರಿಮಾನಿನೇ ಮಧ್ಯಮಾಭ್ಯಾಂ ನಮಃ | ಆಕಾಶಗಾಮಿನೇ ದೇವಮಾನಿನೇ ಸರ್ವದಾಯಿನೇ ಅನಾಮಿಕಾಭ್ಯಾಂ ನಮಃ | ವಾಯುಪುತ್ರಾಯ ಧೀರಾಯ ಲಂಕಾದರ್ಪಾಪಹಾರಿಣೇ ಕನಿಷ್ಠಿಕಾಭ್ಯಾಂ ನಮಃ | ಅಕ್ಷಹಂತ್ರೇ ನಮಸ್ತುಭ್ಯಂ ಪುಚ್ಛವಹ್ನಿಪ್ರದೀಪಿನೇ ಕರತಲಕರ-ಪೃಷ್ಠಾಭ್ಯಾಂ ನಮಃ || ಉದಧಿ........ಮರ್ದಿನೇ ಹೃದಯಾಯ ನಮಃ | ಛಾಯಾಗ್ರಹ........ಮಾರಕಾಯ ಚ ಶಿರಸೇ ಸ್ವಾಹಾ | ಮೈನಾಕ........ ಮಾನಿನೇ ಶಿಖಾಯೈ ವಷಟ್ | ಆಕಾಶ........ದಾಯಿನೇ ಕವಚಾಯ ಹುಮ್ | ವಾಯುಪುತ್ರಾಯ............ಹಾರಿಣೇ ನೇತ್ರತ್ರಯಾಯ ವೌಷಟ್ | ಅಕ್ಷಹಂತ್ರೇ........ಪ್ರದೀಪಿನೇ ಅಸ್ತ್ರಾಯ ಫಟ್ || ಅಷ್ಟ-ಮಂತ್ರಿಸುತಾನಾಂ ಚ ಗರ್ವಭಂಗಕೃತೇ ನಮಃ | ಭೂರ್ಭುವಸ್ಸುವರೋಮಿತಿ ದಿಗ್ಬಂಧಃ ||

## ಅಥ ಧ್ಯಾನಮ್

ಸರ್ವಾನಿಷ್ಟನಿವಾರಕಂ ಶುಭಕರಂ ಪಿಂಗಾಕ್ಷಮಕ್ಷಾಪಹಂ
ಸೀತಾನ್ವೇಷಣ ತತ್ಪರಂ ಕಪಿವರಂ ಕೋಟೀಂದುಸೂರ್ಯಪ್ರಭಮ್ |

ಲಂಕಾದ್ವೀಪಭಯಂಕರಂ ಸಕಲದಂ ಸುಗ್ರೀವಸಂಮಾನಿತಂ
ದೇವೇಂದ್ರಾದಿಸಮಸ್ತದೂತವಿನುತಂ ಕಾಕುತ್ಸ್ಥದೂತಂ ಭಜೇ ||

ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಮರೋಗತಾ |
ಅಜಾಡ್ಯಂ ವಾಕ್ಪಟುತ್ವಂ ಚ ಹನೂಮತ್ಸ್ಮರಣಾದ್ಭವೇತ್ || ೨೨

ಚಂದ್ರಬಿಂಬಸಮಾಕಾರಂ ವಾಂಛಿತಾರ್ಥಪ್ರದಾಯಕಮ್ |
ಹನೂಮತ್ಸೇವಿತಂ ಧ್ಯಾಯೇತ್ ಸೌಂದರೇ ಕಾಂಡ ಉತ್ತಮೇ || ೨೩

ಜಯತ್ಯತಿಬಲೋ ರಾಮೋ ಲಕ್ಷ್ಮಣಶ್ಚ ಮಹಾಬಲಃ |
ರಾಜಾ ಜಯತಿ ಸುಗ್ರೀವೋ ರಾಘವೇಣಾಭಿಪಾಲಿತಃ || ೨೪

ದಾಸೋಽಹಂ ಕೋಸಲೇಂದ್ರಸ್ಯ ರಾಮಸ್ಯಾಕ್ಲಿಷ್ಟಕರ್ಮಣಃ |
ಹನೂಮಾನ್ ಶತ್ರುಸೈನ್ಯಾನಾಂ ನಿಹಂತಾ ಮಾರುತಾತ್ಮಜಃ || ೨೫

ನ ರಾವಣಸಹಸ್ರಂ ಮೇ ಯುದ್ಧೇ ಪ್ರತಿಬಲಂ ಭವೇತ್ |
ಶಿಲಾಭಿಸ್ತು ಪ್ರಹರತಃ ಪಾದಪೈಶ್ಚ ಸಹಸ್ರಶಃ || ೨೬

ಅರ್ದಯಿತ್ವಾ ಪುರೀಂ ಲಂಕಾಮಭಿವಾದ್ಯ ಚ ಮೈಥಿಲೀಮ್ |
ಸಮೃದ್ಧಾರ್ಥೋ ಗಮಿಷ್ಯಾಮಿ ಮಿಷತಾಂ ಸರ್ವರಕ್ಷಸಾಮ್ || ೨೭

ಶ್ರೀರಾಮಚಂದ್ರಪರಬ್ರಹ್ಮಣೇ ನಮಃ

## ೨. ಶ್ರೀವೈಷ್ಣವಸಂಪ್ರದಾಯ

ಲಕ್ಷ್ಮೀನಾಥಸಮಾರಂಭಾಂ ನಾಥಯಾಮುನಮಧ್ಯಮಾಮ್ |
ಅಸ್ಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ || ೧

ಯೋ ನಿತ್ಯಮಚ್ಯುತಪದಾಂಬುಜಯುಗ್ಮರುಕ್ಮ-
ವ್ಯಾಮೋಹತಸ್ತದಿತರಾಣಿ ತೃಣಾಯ ಮೇನೇ |
ಅಸ್ಮದ್ಗುರೋರ್ಭಗವತೋಽಸ್ಯ ದಯೈಕಸಿಂಧೋಃ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ || ೨

ಮಾತಾ ಪಿತಾ ಯುವತಯಸ್ತನಯಾ ವಿಭೂತಿಃ
ಸರ್ವಂ ಯದೇವ ನಿಯಮೇನ ಮದನ್ವಯಾನಾಮ್ |

ಆದ್ಯಸ್ಯ ನಃ ಕುಲಪತೇರ್ವಕುಲಾಭಿರಾಮಂ
ಶ್ರೀಮತ್ತದಂಘ್ರಿಯುಗಲಂ ಪ್ರಣಮಾಮಿ ಮೂರ್ಧ್ನಾ ॥ ೩

ಭೂತಂ ಸರಶ್ಚ ಮಹದಾಹ್ವಯಭಟ್ಟನಾಥ-
ಶ್ರೀಭಕ್ತಿಸಾರಕುಲಶೇಖರಯೋಗಿವಾಹಾನ್ ।
ಭಕ್ತಾಂಘ್ರಿರೇಣುಪರಕಾಲಯತೀಂದ್ರಮಿಶ್ರಾನ್
ಶ್ರೀಮತ್ಪರಾಂಕುಶಮುನಿಂ ಪ್ರಣತೋಽಸ್ಮಿ ನಿತ್ಯಮ್ ॥ ೪

ಪಿತಾಮಹಸ್ಯಾಪಿ ಪಿತಾಮಹೋ ಯಃ
ಪ್ರಾಚೇತಸಾದೇಶಫಲಪ್ರದಾಯ ।
ಶ್ರೀ ಭಾಷ್ಯಕಾರೋತ್ತಮದೇಶಿಕಾಯ
ಶ್ರೀಶೈಲಪೂರ್ಣಾಯ ನಮೋ ನಮಃ ಸ್ತಾತ್ ॥ ೫

ಆಮೇಲೆ ತಮ್ಮ ಆಚಾರ್ಯಪ್ರಭೃತಿ ಶ್ರೀಮನ್ನಾರಾಯಣ ಪರ್ಯಂತವಾಗಿ ಸಾಂಪ್ರದಾಯಿಕ ಶ್ಲೋಕಗಳನ್ನು ಹೇಳಿಕೊಳ್ಳಬೇಕು. ಅನಂತರ—

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥ ೬

ಯಸ್ಯ ದ್ವಿರದವಕ್ತ್ರಾದ್ಯಾಃ ಪರಿಷದ್ಯಾಃ ಪರಃಶತಮ್ ।
ವಿಘ್ನಂ ನಿಘ್ನಂತಿ ಸತತಂ ವಿಷ್ವಕ್ಸೇನಮುಪಾಸ್ಮಹೇ ॥ ೭

ಜ್ಞಾನಾನಂದಮಯಂ ದೇವಂ ನಿರ್ಮಲಸ್ಫಟಿಕಾಕೃತಿಮ್ ।
ಆಧಾರಂ ಸರ್ವವಿದ್ಯಾನಾಂ ಹಯಗ್ರೀವಮುಪಾಸ್ಮಹೇ ॥ ೮

ಎಂದು ಪಠಿಸಿ ‘ ಕೂಜಂತಂ ರಾಮ ರಾಮೇತಿ ’ ಎಂದು ಆರಂಭಿಸಿ ಮುಂದಕ್ಕೆ ೧ ನೆಯ ಸಂಪ್ರದಾಯದಲ್ಲಿ ಹೇಳಿದ ಶ್ಲೋಕಗಳನ್ನು ಪಠಿಸಬೇಕು.

## ೩. ಮಾಧ್ವಸಂಪ್ರದಾಯ

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥ ೧

ಲಕ್ಷ್ಮೀನಾರಾಯಣಂ ವಂದೇ ತದ್ಭಕ್ತಪ್ರವರೋ ಹಿ ಯಃ |
ಶ್ರೀಮದಾನಂದತೀರ್ಥಾಖ್ಯೋ ಗುರುಸ್ತಂ ಚ ನಮಾಮ್ಯಹಮ್ || ೨

ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ |
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ || ೩

ಸರ್ವಸಿದ್ಧಿಪ್ರಶಮನಂ ಸರ್ವಸಿದ್ಧಿಕರಂ ಪರಮ್ |
ಸರ್ವಜೀವಪ್ರಣೇತಾರಂ ವಂದೇ ವಿಜಯದಂ ಹರಿಮ್ || ೪

ಸರ್ವಾಭೀಷ್ಟಪ್ರದಂ ರಾಮಂ ಸರ್ವಾರಿಷ್ಟನಿವಾರಕಮ್ |
ಜಾನಕೀಜಾನಿಮನಿಶಂ ವಂದೇ ಮದ್ಗುರುವಂದಿತಮ್ || ೫

ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ |
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ || ೬

ಭವತಿ ಯದನುಭಾವಾದೇಡಮೂಕೋऽಪಿ ವಾಗ್ಮೀ
ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ |
ಸಕಲವಚನಚೇತೋದೇವತಾ ಭಾರತೀ ಸಾ
ಮಮ ವಚಸಿ ವಿಧತ್ತಾಂ ಸಂನಿಧಿಂ ಮಾನಸೇ ಚ || ೭

ಮಿಥ್ಯಾಸಿದ್ಧಾಂತದುರ್ಧ್ವಾಂತವಿಧ್ವಂಸನವಿಚಕ್ಷಣಃ |
ಜಯತೀರ್ಥಾಖ್ಯತರಣಿರ್ಭಾಸತಾಂ ನೋ ಹೃದಂಬುಜೇ || ೮

ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ |
ಗುರುಭಾವಂ ವ್ಯಂಜಯಂತೀ ಭಾತಿ ಶ್ರೀ ಜಯತೀರ್ಥವಾಕ್ || ೯

ಅನಂತರ 'ಕೂಜಂತಂ ರಾಮರಾಮೇತಿ' ಎಂದು ಆರಂಭಿಸಿ ಮುಂದಕ್ಕೆ ೧ನೆಯ ಸಂಪ್ರದಾಯದಲ್ಲಿ ಹೇಳಿದ ಶ್ಲೋಕಗಳನ್ನು ಪಠಿಸಬೇಕು.

---

## ಪಾರಾಯಣದ ಸಮಾಪ್ತಿಯಲ್ಲಿ ಪಠಿಸುವ ಶ್ಲೋಕಗಳು

### ೧ ಸ್ಮಾರ್ತ ಸಂಪ್ರದಾಯ

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ |

ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು || ೧

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ |
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸಂತು ನಿರ್ಭಯಾಃ ||

ಅಪುತ್ರಾಃ ಪುತ್ರಿಣಃ ಸಂತು ಪುತ್ರಿಣಃ ಸಂತು ಪೌತ್ರಿಣಃ |
ಅಧನಾಃ ಸಧನಾಃ ಸಂತು ಜೀವಂತು ಶರದಾಂ ಶತಮ್ || ೩

ಚರಿತಂ ರಘುನಾಥಸ್ಯ ಶತಕೋಟಿಪ್ರವಿಸ್ತರಮ್ |
ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕನಾಶನಮ್ || ೪

ಶೃಣ್ವನ್ ರಾಮಾಯಣಂ ಭಕ್ತ್ಯಾ ಯಃ ಪಾದಂ ಪದಮೇವ ವಾ |
ಸ ಯಾತಿ ಬ್ರಹ್ಮಣಃ ಸ್ಥಾನಂ ಬ್ರಹ್ಮಣಾ ಪೂಜ್ಯತೇ ಸದಾ || ೫

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ |
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ || ೬

ಯನ್ಮಂಗಲಂ ಸಹಸ್ರಾಕ್ಷೇ ಸರ್ವದೇವನಮಸ್ಕೃತೇ |
ವೃತ್ರನಾಶೇ ಸಮಭವತ್ತತ್ತೇ ಭವತು ಮಂಗಲಮ್ || ೭

ಮಂಗಲಂ ಕೋಸಲೇಂದ್ರಾಯ ಮಹನೀಯಗುಣಾತ್ಮನೇ |
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಲಮ್ || ೮

ಯನ್ಮಂಗಲಂ ಸುಪರ್ಣಸ್ಯ ವಿನತಾಽಕಲ್ಪಯತ್ ಪುರಾ |
ಅಮೃತಂ ಪ್ರಾರ್ಥಯಾನಸ್ಯ ತತ್ತೇ ಭವತು ಮಂಗಲಮ್ || ೯

ಅಮೃತೋತ್ಪಾದನೇ ದೈತ್ಯಾನ್ ಘ್ನತೋ ವಜ್ರಧರಸ್ಯ ಯತ್ |
ಅದಿತಿರ್ಮಂಗಲಂ ಪ್ರಾದಾತ್ತತ್ತೇ ಭವತು ಮಂಗಲಮ್ || ೧೦

ತ್ರೀನ್ ವಿಕ್ರಮಾನ್ ಪ್ರಕ್ರಮತೋ ವಿಷ್ಣೋರಮಿತತೇಜಸಃ |
ಯದಾಸೀನ್ಮಂಗಲಂ ರಾಮ ತತ್ತೇ ಭವತು ಮಂಗಲಮ್ || ೧೧

ಋತವಃ ಸಾಗರಾ ದ್ವೀಪಾ ವೇದಾ ಲೋಕಾ ದಿಶಶ್ಚ ತೇ |
ಮಂಗಲಾನಿ ಮಹಾಬಾಹೋ ದಿಶಂತು ತವ ಸರ್ವದಾ || ೧೨

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ |
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ || ೧೩

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ಚ ಯದ್ಭವೇತ್ |
ತತ್ಸರ್ವಂ ಕ್ಷಮ್ಯತಾಂ ದೇವ ಶ್ರೀರಾಘವ ನಮೋಽಸ್ತು ತೇ || ೧೪

ಅನೇನ ಶ್ರೀಮದ್ರಾಮಾಯಣಪಾರಾಯಣೇನ ಭಗವಾನ್ ಸರ್ವದೇವಾತ್ಮಕಃ
ಸೀತಾಲಕ್ಷ್ಮಣಭರತಶತ್ರುಘ್ನಹನೂಮತ್ಸಮೇತಃ ಶ್ರೀರಾಮಚಂದ್ರಃ
ಸುಪ್ರೀತಃ ಸುಪ್ರಸನ್ನೋ ವರದೋ ಭವತು
ಶ್ರೀರಾಮಚಂದ್ರಾರ್ಪಣಮಸ್ತು



## ೨. ಶ್ರೀವೈಷ್ಣವಸಂಪ್ರದಾಯ

ಏವಮೇತತ್ ಪುರಾವೃತ್ತಮಾಖ್ಯಾನಂ ಭದ್ರಮಸ್ತು ವಃ |
ಪ್ರವ್ಯಾಹರತ ವಿಸ್ರಬ್ಧಂ ಬಲಂ ವಿಷ್ಣೋಃ ಪ್ರವರ್ಧತಾಮ್ || ೧

ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ |
ಯೇಷಾಮಿಂದೀವರಶ್ಯಾಮೋ ಹೃದಯೇ ಸುಪ್ರತಿಷ್ಠಿತಃ || ೨

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ |
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸಂತು ನಿರ್ಭಯಾಃ ||

ಕಾವೇರೀ ವರ್ಧತಾಂ ಕಾಲೇ ಕಾಲೇ ವರ್ಷತು ವಾಸವಃ |
ಶ್ರೀರಂಗನಾಥೋ ಜಯತು ಶ್ರೀರಂಗಶ್ರೀಶ್ಚ ವರ್ಧತಾಮ್ || ೪

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ |
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು || ೫

ಮಂಗಲಾಶಾಸನಪರೈರ್ಮದಾಚಾರ್ಯಪುರೋಗಮೈಃ |
ಸರ್ವೈಶ್ಚ ಪೂರ್ವೈರಾಚಾರ್ಯೈಃ ಸತ್ಕೃತಾಯಾಸ್ತು ಮಂಗಲಮ್ ||

## ೩. ಮಾಧ್ವಸಂಪ್ರದಾಯ

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ |
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು || ೧

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ |
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸಂತು ನಿರ್ಭಯಾಃ ||

ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ |
ಯೇಷಾಮಿಂದೀವರಶ್ಯಾಮೋ ಹೃದಯೇ ಸುಪ್ರತಿಷ್ಠಿತಃ || ೩

ಮಂಗಲಂ ಕೋಸಲೇಂದ್ರಾಯ ಮಹನೀಯಗುಣಾಬ್ಧಯೇ |
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಲಮ್ || ೪

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ |
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ || ೫

ಮಂಗಲಂ ಕೋಸಲೇಂದ್ರಾಯ ಮಹನೀಯಗುಣಾಬ್ಧಯೇ |
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಲಮ್ || ೬

ವೇದವೇದಾಂತವೇದ್ಯಾಯ ಮೇಘಶ್ಯಾಮಲಮೂರ್ತಯೇ |
ಪುಂಸಾಂ ಮೋಹನರೂಪಾಯ ಪುಣ್ಯಶ್ಲೋಕಾಯ ಮಂಗಲಮ್|| ೭

ವಿಶ್ವಾಮಿತ್ರಾಂತರಂಗಾಯ ಮಿಥಿಲಾನಗರೀಪತೇಃ |
ಭಾಗ್ಯಾನಾಂ ಪರಿಪಾಕಾಯ ಭವ್ಯರೂಪಾಯ ಮಂಗಲಮ್ || ೮

ಪಿತೃಭಕ್ತಾಯ ಸತತಂ ಭ್ರಾತೃಭಿಃ ಸಹ ಸೀತಯಾ |
ನಂದಿತಾಖಿಲಲೋಕಾಯ ರಾಮಭದ್ರಾಯ ಮಂಗಲಮ್ || ೯

ತ್ಯಕ್ತಸಾಕೇತವಾಸಾಯ ಚಿತ್ರಕೂಟವಿಹಾರಿಣೇ |
ಸೇವ್ಯಾಯ ಸರ್ವಯಮಿನಾಂ ಧೀರೋದಾರಾಯ ಮಂಗಲಮ್ ||

ಸೌಮಿತ್ರಿಣಾ ಚ ಜಾನಕ್ಯಾ ಚಾಪಬಾಣಾಸಿಧಾರಿಣೇ |
ಸಂಸೇವ್ಯಾಯ ಸದಾ ಭಕ್ತ್ಯಾ ಸ್ವಾಮಿನೇ ಮಮ ಮಂಗಲಮ್ || ೧೧

ದಂಡಕಾರಣ್ಯವಾಸಾಯ ಖಂಡಿತಾಮರಶತ್ರವೇ |
ಗೃಧ್ರರಾಜಾಯ ಭಕ್ತಾಯ ಮುಕ್ತಿದಾಯಾಸ್ತು ಮಂಗಲಮ್ || ೧೨

ಸಾದರಂ ಶಬರೀದತ್ತಫಲಾಮೂಲಭಿಲಾಷಿಣೇ |
ಸೌಲಭ್ಯಪರಿಪೂರ್ಣಾಯ ಸತ್ತ್ವೋದ್ರಿಕ್ತಾಯ ಮಂಗಲಮ್ || ೧೩

ಹನುಮತ್ಸಮವೇತಾಯ ಹರೀಶಾಭೀಷ್ಟದಾಯಿನೇ |
ವಾಲಿಪ್ರಮಥನಾಯಾಸ್ತು ಮಹಾಧೀರಾಯ ಮಂಗಲಮ್ || ೧೪

ಶ್ರೀಮತೇ ರಘುವೀರಾಯ ಸೇತೂಲ್ಲಂಘಿತಸಿಂಧವೇ |
ಜಿತರಾಕ್ಷಸರಾಜಾಯ ರಣಧೀರಾಯ ಮಂಗಲಮ್ || ೧೫

ಆಸಾದ್ಯ ನಗರೀಂ ದಿವ್ಯಾಮಭಿಷಿಕ್ತಾಯ ಸೀತಯಾ |
ರಾಜಾಧಿರಾಜರಾಜಾಯ ರಾಮಭದ್ರಾಯ ಮಂಗಲಮ್ || ೧೬

ಬ್ರಹ್ಮಾದಿದೇವಸೇವ್ಯಾಯ ಬ್ರಹ್ಮಣ್ಯಾಯ ಮಹಾತ್ಮನೇ |
ಜಾನಕೀಪ್ರಾಣನಾಥಾಯ ರಘುನಾಥಾಯ ಮಂಗಲಮ್ || ೧೭

## ಎರಡನೆಯ ಮುದ್ರಣ

ಶ್ರೀ ನರಸಿಂಹರಾಜ ಕಾಲೊನಿ ಅಸೋಸಿಯೇಷನ್, ಶ್ರೀರಾಮಮಂದಿರ —ಈ ಸಂಸ್ಥೆಯವರು ಪ್ರಥಮದಲ್ಲಿ ಪ್ರಕಟಿಸಿದ ಸುಂದರಕಾಂಡದ ಸರ್ವಸ್ವಾಮ್ಯವನ್ನೂ ರಾಮಾಯಣ ಪ್ರಕಾಶನ ಸಮಿತಿಯು ವಹಿಸಿಕೊಂಡಿತು. ಪ್ರಥಮ ಮುದ್ರಣದ ಪ್ರತಿಗಳೆಲ್ಲವೂ ಮಾರಾಟವಾದ್ದರಿಂದ ಈ ಸಮಿತಿಯು ಈಗ ದ್ವಿತೀಯ ಮುದ್ರಣವನ್ನು ಪ್ರಕಟಿಸಿದೆ. ಪಾರಾಯಣಕ್ಕೆ ಉಪಯುಕ್ತವಾಗಲೆಂದು ಶ್ರೀರಾಮಪಟ್ಟಾಭಿಷೇಕದ ಸರ್ಗವನ್ನೂ ಈ ಗ್ರಂಥದಲ್ಲಿ ಸೇರಿಸಲಾಗಿದೆ.

ಪ್ರಥಮ ಮುದ್ರಣದ ಅನುವಾದವನ್ನು ಅನುವಾದಕರೇ ಈಗ ಪರಿಷ್ಕರಿಸಿಕೊಟ್ಟಿದ್ದಾರೆ. ವಿಖ್ಯಾತ ಚಿತ್ರಕಲಾವಿದರಾದ ಶ್ರೀ ಪುರುಷೋತ್ತಮ ರಾಯರು ಹೊದಿಕೆಯ (ಜಾಕೆಟ್) ನಕ್ಷೆಯನ್ನೂ ಲಂಕಾಪರಾಭವ ಮತ್ತು ಚೂಡಾಮಣಿ ಪ್ರದಾನದ ಚಿತ್ರಗಳನ್ನೂ ಸುಂದರವಾಗಿ ಬರೆದುಕೊಟ್ಟಿದ್ದಾರೆ. ಪ್ರಭಾ ಮುದ್ರಣಾಲಯದ ಮಾಲಿಕರಾದ ಶ್ರೀ ಡಿ. ಎಸ್. ಕೃಷ್ಣಾಚಾರ್ಯರು ಈ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟಿದ್ದಾರೆ. ಇವರೆಲ್ಲರಿಗೂ ರಾಮಾಯಣ ಪ್ರಕಾಶನ ಸಮಿತಿಯು ತನ್ನ ಕೃತಜ್ಞತೆಗಳನ್ನರ್ಪಿಸುತ್ತದೆ.

18–4–1971

## ಮೂರನೆಯ ಮುದ್ರಣ

ಈ ಸಲ ಸುಂದರಕಾಂಡದ ಸಂಸ್ಕೃತಮೂಲವನ್ನು ಒತ್ತಟ್ಟಿಗೆ ಪೂರ್ಣವಾಗಿ ಮುದ್ರಿಸಿ ಕನ್ನಡ ಅನುವಾದವನ್ನು ಪ್ರತ್ಯೇಕವಾಗಿ ಕಡೆಯಲ್ಲಿ ಕೊಡಲಾಗಿದೆ. ಇದರಿಂದ ಪಾರಾಯಣ ಮಾಡತಕ್ಕವರಿಗೂ ಅನುವಾದವನ್ನು ಮಾತ್ರ ಓದತಕ್ಕವರಿಗೂ ಹೆಚ್ಚಿನ ಸೌಕರ್ಯವಾದೀತೆಂದು ನಿರೀಕ್ಷಿಸಲಾಗಿದೆ. ಅಲ್ಲದೆ ಪಾರಾಯಣಮಾಡತಕ್ಕವರಿಗೆ ಉಪಯೋಗವಾಗಲೆಂದು ಶ್ರೀರಾಮಾವತಾರ, ಸೀತಾವಿವಾಹ, ಆದಿತ್ಯಹೃದಯ, ಶ್ರೀರಾಮಪಟ್ಟಾಭಿಷೇಕ—ಈ ನಾಲ್ಕು ಪ್ರಕರಣಗಳನ್ನು ಸೇರಿಸಿದ್ದೇವೆ.

ಅನುವಾದಕರಾದ ವಿದ್ವಾನ್ ಎನ್. ರಂಗನಾಥಶರ್ಮ ಅವರು ಅನುವಾದವನ್ನು ಮತ್ತೆ ಪರಿಷ್ಕರಿಸಿಕೊಟ್ಟಿದ್ದಾರೆ. ಪ್ರಭಾ ಮುದ್ರಣಾಲಯದ ಮಾಲಿಕರಾದ ಶ್ರೀ ಡಿ. ಎಸ್. ಕೃಷ್ಣಾಚಾರ್ಯರು ಆಸಕ್ತಿವಹಿಸಿ ಸಕಾಲದಲ್ಲಿ ಮುದ್ರಿಸಿಕೊಟ್ಟಿದ್ದಾರೆ. ಇವರಿಗೆ ರಾಮಾಯಣ ಪ್ರಕಾಶನ ಸಮಿತಿಯು ವಂದನೆಗಳನ್ನರ್ಪಿಸುತ್ತದೆ.

ಬೆಂಗಳೂರು
14–12–1979

**ಡಿ. ಸಿ. ಅನಂತರಾಮಯ್ಯ**
ಕಾರ್ಯದರ್ಶಿ
**ರಾಮಾಯಣ ಪ್ರಕಾಶನ ಸಮಿತಿ**

B

# ಮುನ್ನುಡಿ

ಶ್ರೀರಾಮಾಯಣಮಾರುರ್ಹ ಧರ್ಮರತ್ನೌಘಸುಂದರಃ |
ಸುಂದರೇ ಸುಂದರಸ್ಸೋಽಯಮಂಜನಾನಂದನೋತ್ಸವಃ ||

## ಸಂದರ್ಭಸೌಂದರ್ಯ

ಸುಂದರಕಾಂಡವು ಕಥಾಸಂದರ್ಭದಿಂದ ಸುಂದರ.

ಪರಮಸುಂದರರಾದ ರಾಮಸೀತೆಯರು ವಿಯೋಗದುಃಖದಲ್ಲಿದ್ದಾಗ ಪರಸ್ಪರ ಪ್ರಿಯವಾರ್ತಾ ಸಂಧಾನದಿಂದ ಅವರಿಗೆ ಮಾನಸಿಕಸಮಾಗಮವಾದದ್ದು ಇಲ್ಲಿಯ ಕಥೆ. ಆ ಸುಂದರಸಂಧಾನಕ್ಕೆ ಸಾಧನಭೂತನಾದವನು ಆಂಜನೇಯ ಸ್ವಾಮಿ. ಆತನ ಸೌಂದರ್ಯದೌತ್ಯವೂ ದೌತ್ಯಸೌಂದರ್ಯವೂ ಇಲ್ಲಿಯ ವಸ್ತು.

ಸೌಂದರ್ಯವು ಒಂದು ರುಚಿಶಕ್ತಿ. ಒಂದಾನೊಂದು ವಸ್ತುವನ್ನು ಅಥವಾ ಸಂಗತಿಯನ್ನು ನಾವು ಕಂಡಾಗ ಅಥವಾ ನೆನಸಿಕೊಂಡಾಗ ಅದರ ಯಾವ ಸ್ವಾರಸ್ಯವು ನಮ್ಮ ಮನಸ್ಸನ್ನು ಮೃದುಮಾಡಿ ತನ್ನ ಕಡೆಗೆ ಸೆಳೆದು ಕೊಂಡು ಸ್ವಾಧೀನಮಾಡಿಕೊಳ್ಳುತ್ತದೆಯೋ—ಯಾವ ರಸಕಾಂತಿಯ ಕಾರಣ ದಿಂದ ನಮ್ಮ ಮನಸ್ಸು ಆ ಪದಾರ್ಥದಿಂದ ಹಿಂತಿರುಗದೆ ಅದರಲ್ಲಿ ತಾನು ಸೇರಿಕೊಳ್ಳಲಿಚ್ಛಿಸುತ್ತದೆಯೋ—ಆ ರುಚಿಗುಣವೇ ಅದರ ಸೌಂದರ್ಯ.

ನಾನಾ ಸೌಂದರ್ಯಗಳ ಸಮ್ಮೇಳನಸ್ಥಾನ ಸುಂದರಕಾಂಡ.

ರಾಮಾಯಣದಲ್ಲಿ ಗ್ರಂಥಿಸ್ಥಾನಗಳು ಮೂರು.

(೧) ಮೊದಲನೆಯದು ಅಯೋಧ್ಯಾಕಾಂಡದ್ದು. ರಾಮಾವತಾರ ಕಾಲ ದಿಂದ ಸಹಜವಾಗಿ ಸರಳವಾಗಿ ಸಾಗಿಬಂದ ಕಥಾತಂತುವಿಗೆ ಅಲ್ಲಿ ಕೈಕೇಯಿ ಕೈಹಾಕಿ ಗಂಟಿಕ್ಕಿ, ಅದು ನಿರೀಕ್ಷಿತವಾಗಿದ್ದಂತೆ ಸಾಗಗೊಡದೆ ಅದನ್ನು ಬೇರೆ ಕಡೆಗೆ ತಿರುಗಿಸುತ್ತಾಳೆ. ಈ ಘಟನೆ ಸುಂದರವಲ್ಲ; ಅಸುಂದರ, ವಿಷಾದಕರ.

(೨) ಎರಡನೆಯ ಗ್ರಂಥಿ ಅರಣ್ಯಕಾಂಡದ್ದು ಇಲ್ಲಿ ಕಥಾತಂತುವು ನೈಜ ಕ್ರಮದಲ್ಲಿ ಸಾಗದಂತೆ ಅಡ್ಡಿಹಾಕಿ ಅದನ್ನು ಬೇರೆಕಡೆಗೆ ತಿರುಗಿಸಿದವನು ರಾವಣಾ ಸುರ. ಅವನು ಹಾಗೆ ಮಾಡದೆಹೋಗಿದ್ದಿದ್ದರೆ ಸೀತಾರಾಮರು ಹದಿನಾಲ್ಕು

ವರ್ಷಗಳ ವನವಾಸವನ್ನು ನಿರೀಕ್ಷಿಸಿಕೊಂಡಿದ್ದಂತೆ ನಿರುಪಾಧಿಕವಾಗಿ ಮುಗಿಸಿ ಅಯೋಧ್ಯೆಗೆ ಹಿಂತಿರುಗಬಹುದಾಗಿತ್ತು. ಅದು ತಪ್ಪಿಹೋಗುವಂತೆ ಆದದ್ದು ಸುಂದರವಲ್ಲ; ಅಸುಂದರ, ಅಮಂಗಲ.

(೩) ಮೂರನೆಯ ಗ್ರಂಥಿ ಸುಂದರಕಾಂಡದ್ದು. ಅನ್ಯೋನ್ಯವಿರಹಿತರಾಗಿ, ಅನ್ಯೋನ್ಯಚಿಂತಾಕ್ರಾಂತರಾಗಿ, ಅನ್ಯೋನ್ಯ ಅಜ್ಞಾತವಾಸಿಗಳಾಗಿದ್ದ ಸೀತಾರಾಮರಿಗೆ ಅನ್ಯೋನ್ಯಪ್ರಿಯವಾರ್ತೆಯಿಂದ ಮಾನಸಿಕ ಸಮಾಗಮವನ್ನುಂಟುಮಾಡಿ ಸಾಕ್ಷಾತ್ಸಮಾಗಮಕ್ಕೆ ದಾರಿತೋರಿದ ಮಹಾನುಭಾವ ಹನುಮಂತ. ಈ ಸಂಘಟನೆ ಪರಮಸುಂದರವಾದದ್ದು.

ಆಂಜನೇಯನಿಗಿದ್ದ ಕೆಲಸ ಸುಲಭವಾದದ್ದೆ? ಅದು ಅಸಾಧ್ಯವೆನಿಸುವ ಮಟ್ಟಿಗೆ ಕಷ್ಟವಾಗಿತ್ತು. ತನ್ನ ಕಾರ್ಯಕ್ಕೆ ಬಂದ ವಿಘ್ನಗಳಿಂದ ಆಂಜನೇಯನು ಎದೆಗುಂದಿ ಹಿಂತಿರುಗಿದ್ದಿದ್ದರೆ ರಾಮಲಕ್ಷ್ಮಣರ ಶೌರ್ಯಪ್ರತಾಪಗಳು ಸಾರ್ಥಕಪಡಲು ಅವಕಾಶವೆಲ್ಲಿರುತ್ತಿತ್ತು? ಆಂಜನೇಯಮೂರ್ತಿಯ ಸ್ಥೈರ್ಯ ವಿಕ್ರಮಗಳಿಂದ ರಾಮಾವತಾರಕಾರ್ಯವು ಸಂಪೂರ್ಣವಾಗುವುದಾಯಿತು. ಲಂಕಾಪಟ್ಟಣದ ಕೋಟೆಯನ್ನು ಮೊದಲು ಭೇದಿಸಿದವನು ಹನುಮಂತ. ಯುದ್ಧಕಾಂಡದ ವಿಜಯಕ್ಕೆ ದಾರಿತೋರಿದ್ದು ಸುಂದರಕಾಂಡದಲ್ಲಿಯ ಸೌಂದರ್ಯ.

ಇದನ್ನು ಹನುಮತ್ಕಾಂಡವೆಂದೇ ಕರೆಯಬಹುದಾಗಿತ್ತಲ್ಲ!—ಎಂದರೆ, ಅಲ್ಲ; ಅದಾಗಲಾರದು. ಏಕೆಂದರೆ ಅದು ಹನುಮಂತನ ಸ್ವಭಾವಕ್ಕೆ ಒಪ್ಪದು. ಆತ ತನ್ನ ಸ್ಥಾನ ಯಾವುದೆಂಬುದನ್ನು ತಾನೇ ಗೊತ್ತುಮಾಡಿಕೊಂಡಿದ್ದವನು. ತನ್ನ ಸ್ವಾಮಿಯೊಡನೆ ತಾನು ಸಮಾನಸ್ಕಂಧನಾಗಿ ಕುಳ್ಳಿರಲು ಸಮ್ಮತಿಸಿಯಾನೆ? ಸ್ವಾಮಿಯ ಉನ್ನತಿಯ ಅಂಗೀಕಾರವೂ ತನ್ನ ನೈಚ್ಯದ ಅಂಗೀಕಾರವೂ ಆಂಜನೇಯನ ಅಂತರಂಗಸೌಂದರ್ಯದ ನೈಜಾಂಶಗಳು. ಸ್ವಾಮಿಯ ಸ್ವಾಮಿತ್ವದ ಅಂಗೀಕಾರವೇ ದಾಸನಿಗೆ ದಾಸ್ಯದಿಂದ ಉದ್ಧಾರಸಾಧನ.

ಒಂದು ಕಥೆಯುಂಟು. ಒಬ್ಬಾನೊಬ್ಬ ಮನುಷ್ಯ ಬಹುಕಾಲ ಹೊಟ್ಟೆನೋವಿನಿಂದ ನರಳುತ್ತಿದ್ದ. ಅವನಿಗೆ ಒಂದು ದಿನ ಒಬ್ಬ ವೈದ್ಯ ಕೊಟ್ಟ ಔಷಧದ ಪ್ರಭಾವದಿಂದ ಜಠರಶುದ್ಧಿಯಾಗಿ ನೋವಿಳಿಯಿತು. ಆಗ ಅವನು ಕೃತಜ್ಞತೆಯಿಂದ "ಉಸ್ಸಪ್ಪ! ರಾಮ–ರಾಮ!" ಎಂದು ದೇವರನ್ನು ನೆನೆದ. ಕೂಡಲೆ "ಯತ್ರ ಯತ್ರ ರಘುನಾಥಕೀರ್ತನಂ ತತ್ರ ತತ್ರ ಕೃತಮಸ್ತಕಾಂಜಲಿಮ್"

—ಆಂಜನೇಯ ಕಾಣಿಸಿಕೊಂಡು, ಆ ಮನುಷ್ಯನ ಕೆನ್ನೆಗೆ ಕೈ ಅಪ್ಪಳಿಸಿದ. ಆ ಮನುಷ್ಯನಿಗೆ ನೋವಾಗಲಿಲ್ಲ. ಹನುಮಂತನು ಆಶ್ಚರ್ಯಗೊಂಡು ಸಂದರ್ಭವೇನಿರಬಹುದೆಂದು ತಿಳಿಯಲು ರಾಮಸನ್ನಿಧಾನಕ್ಕೆ ಹೋದ. ಅಲ್ಲಿ ಸ್ವಾಮಿ ತನ್ನ ಕೆನ್ನೆಯಮೇಲೆ ಕೈಯಿಟ್ಟುಕೊಂಡು ಕುಳಿತಿದ್ದ.

ಹನುಮಂತ: ನನ್ನ ಸ್ವಾಮಿಗೆ ಏನಾಯಿತು ? ಕೆನ್ನೆಯಮೇಲೆ ಗಾಯವೆ ? ಹುಣ್ಣೆ ?

ರಾಮ: ನೀನು ಕೊಟ್ಟ ಪೆಟ್ಟು.

ಹನುಮಂತ: ನಾನು ಸ್ವಾಮಿಯನ್ನು ಹೊಡೆದೇನೆ ? ಅಂಥ ಪಾಪಿಯೆ ?

ರಾಮ: ಈಗ ನೀನು ನನ್ನ ಹೆಸರು ನೆನೆದವನನ್ನು ಹೊಡೆಯಲಿಲ್ಲವೆ ?

ಹನುಮಂತ: ಅಯ್ಯೋ! ಅವನು ಅಶುದ್ಧಸ್ಥಳದಲ್ಲಿದ್ದಾಗ ನನ್ನ ಸ್ವಾಮಿಯ ಪವಿತ್ರನಾಮವನ್ನು ಉಚ್ಚರಿಸಬಹುದೆ ?

ರಾಮ: ಆ ಹೆಸರು ಪವಿತ್ರವಾಗಿದ್ದರೆ ಅದು ಎಲ್ಲ ಅಶುದ್ಧಿಗಳನ್ನೂ ಶುದ್ಧಿಪಡಿಸಲಾರದೆ ?

ಹನುಮಂತ: ಅಯ್ಯೋ ನಾನು ಕಪಿಯಲ್ಲವೆ? ಕಪಿಬುದ್ಧಿ ಆ ಕ್ಷಣ ಪ್ರಬಲಿಸಿತು.

ರಾಮನು ನಕ್ಕನಂತೆ. ಹನುಮಂತನು ಅದರಲ್ಲಿ ಸೇರಿಕೊಂಡನಂತೆ.

ಇದು ಹನುಮಂತನ ಭಕ್ತಿ ಎಷ್ಟು ಆಳವಾದದ್ದು, ಎಷ್ಟು ಗಾಢವಾದದ್ದು ಎಂದು ತೋರಿಸುತ್ತದೆ. ಇಂಥವನು, ಸುಂದರಕಾಂಡವನ್ನು ವಾಲ್ಮೀಕಿಗಳು ಹನುಮತ್ಕಾಂಡವೆಂದು ಕರೆದಿದ್ದರೆ ಅವರನ್ನು ಸುಮ್ಮನೆ ಬಿಡುತ್ತಿದ್ದನೆ ? ಅದನ್ನು ಬಲ್ಲ ಜಾಗರೂಕರು ವಾಲ್ಮೀಕಿಮಹರ್ಷಿಗಳು. ಕಾವ್ಯದ ಈ ಭಾಗವನ್ನು ನಾಯಕಾಂಕಿತ ಮಾಡುವುದಕ್ಕಿಂತ ಸಂದರ್ಭಾಂಕಿತ ಮಾಡುವುದು ಲೇಸೆಂದು ಅವರಿಗನ್ನಿಸಿರಬೇಕು.

## ವ್ಯಕ್ತಿಸೌಂದರ್ಯ

ಆದರೆ ಆಂಜನೇಯನ ವ್ಯಕ್ತಿಸೌಂದರ್ಯವು ವಾಲ್ಮೀಕಿಗಳ ದೃಷ್ಟಿಯಲ್ಲಿರಲೇ ಇಲ್ಲವೆಂದು ನಾವು ವಾದಿಸಬೇಕಾದದ್ದಿಲ್ಲ. ವ್ಯಕ್ತಿಯು ಅವರ ಗಣನೆಯಲ್ಲಿ ಮುಖ್ಯವಾಗಲ್ಲದಿದ್ದರೂ ಗೌಣವಾಗಿ ಇದ್ದಿರಬಹುದು.

ಸೌಂದರ್ಯವು ದ್ವಿವಿಧವಷ್ಟೆ? ಬಹಿರಂಗದ್ದೊಂದು, ಅಂತರಂಗದ್ದೊಂದು. ಆಂಜನೇಯನ ಬಹಿರಾಕಾರದಲ್ಲಿ ಅದು ಇರಲಿಲ್ಲವೆನ್ನಲಾಗದು.

ಕಾಂಚನಾದ್ರಿಕಮನೀಯವಿಗ್ರಹಮ್ ||

—ಎಂದು ಆತನನ್ನು ವರ್ಣಿಸಿದ್ದಾರೆ. ಆತನು ಕಾಮರೂಪಿ ; ತನ್ನಿಚ್ಛೆಯಂತೆ ಅಣುವಾಗಬಲ್ಲವನು, ಬೃಹತ್ತಾಗಬಲ್ಲವನು ; ಸೌಮ್ಯತಾಳಬಲ್ಲವನು, ಘೋರತಾಳಬಲ್ಲವನು. ಅವನಿಗೆ ಸುಂದರಾಕಾರವು ದುರ್ಲಭವಾಗಿರಲಿಲ್ಲ.

ಆದರೆ "ಪುಂಸಾಂ ಮೋಹನರೂಪಾಯ" ಎನ್ನಿಸಿಕೊಂಡ ಶ್ರೀರಾಮನ ಪಕ್ಕದಲ್ಲಿ ಹನುಮಂತನ ರೂಪಾತಿಶಯದ ಪ್ರಶಂಸೆ ಯುಕ್ತವೆನಿಸದು.

ಹನುಮಂತನ ಬಲಪರಾಕ್ರಮಗಳ ವಿಷಯದಲ್ಲಿಯೂ ಪ್ರಶಂಸೆ ನ್ಯಾಯವಾದದ್ದೇ.

ಮನೋಜವಂ ಮಾರುತತುಲ್ಯವೇಗಮ್ ||

ಈ ವೀರಸಂಪತ್ತು ಮಹತ್ತರವೇ ಆದರೂ ಅದಕ್ಕಿಂತ ಪ್ರಶಂಸನೀಯವಾದದ್ದು ಆಂಜನೇಯನ ಅಂತರಂಗಸಂಪತ್ತು :

ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಮ್ ||

ಜಿತೇಂದ್ರಿಯತ್ವವೇ ಆತ್ಮಸಂಯಮ. ಆತ್ಮಸಂಯಮವೆಂದರೆ ತನ್ನನ್ನು ತಾನು ಹತೋಟಿಯಲ್ಲಿರಿಸಿಕೊಂಡಿರುವುದು; ತನ್ನ ಮನಸ್ಸನ್ನು ಸ್ವೇಚ್ಛೆಗೆ ಹೋಗದಂತೆ ಹದ್ದಿನಲ್ಲಿಡುವುದು. ಈ ಗುಣವು ಮಾರುತಿಯಲ್ಲಿ ಎರಡು ರೂಪಗಳಲ್ಲಿ ಫಲಿಸಿತು :

(೧) ಕರ್ತವ್ಯೈಕನಿಷ್ಠೆ ;

(೨) ಯುಕ್ತಾಯುಕ್ತವಿವೇಕಕ್ಕೆ ಅವಶ್ಯವಾದ ಸಮಚಿತ್ತತೆ.

ಯಾರು ಇಂದ್ರಿಯಪರವಶನೋ ಅವನಿಗೆ ಚಿತ್ತೈಕಾಗ್ರತೆ ಸಾಧ್ಯವಾಗದು, ವಿಮರ್ಶನವಿಶದತೆಯೂ ಸಾಧ್ಯವಾಗದು. ಈ ಎರಡೂ ಆಂಜನೇಯನ ಅಂತರಂಗಸಂಪತ್ತಿನ ಮುಖ್ಯಾಂಶಗಳು. ಇವೆರಡರ ಜೊತೆಗೆ ಸೇರಿದ್ದ ಮತ್ತೊಂದು ಮಹಾಗುಣವು ಔಚಿತ್ಯಪರಿಜ್ಞಾನ. ಇದು ಸಂದರ್ಭದ ಆಳವಾದ ವಿಮರ್ಶನೆಯಿಲ್ಲದೆ ಬರತಕ್ಕದ್ದಲ್ಲ. ಈ ಔಚಿತ್ಯವಿವೇಕವು ಆಂಜನೇಯ

ಮೂರ್ತಿಯ ವಾಕ್ಪ್ರಕಾರದಲ್ಲಿಯೂ ಆಕಾರಭಂಗಿಯಲ್ಲಿಯೂ ಎಲ್ಲೆಡೆಯೂ ಎದ್ದು ಕಾಣುತ್ತದೆ. ಇದು ಭಾವಸೌಂದರ್ಯ.

## ಅಂತಸ್ಸೌಂದರ್ಯ ಬಹಿಸ್ಸೌಂದರ್ಯಗಳು

ಸೌಂದರ್ಯಭೂಯಿಷ್ಠವಾದ ತನ್ನ ಕಾವ್ಯಪ್ರಪಂಚದಲ್ಲಿ ವಾಲ್ಮೀಕಿಯು ಸೌಂದರ್ಯದೌತ್ಯಕ್ಕಾಗಿ ಮನುಷ್ಯನನ್ನು ಬಿಟ್ಟು ಕಪಿಯನ್ನಾರಿಸಿಕೊಂಡದ್ದೇಕೆ? ಆತನಿಗೆ ಮನುಷ್ಯಜಾತಿಯಲ್ಲಿ ಅಷ್ಟು ಅಸಹನೆಯೆ? ಇದು ಸೋಜಿಗದ ಪ್ರಶ್ನೆ.

ಈಗ ಕಥಾ ಸಂದರ್ಭವನ್ನು ಜ್ಞಾಪಕಕ್ಕೆ ತಂದುಕೊಳ್ಳೋಣ.

ಇದು ಸೀತಾನ್ವೇಷಣದ ಪ್ರಕರಣ. ಆ ಅನ್ವೇಷಣೆ ನಾಲ್ಕು ದಿಕ್ಕುಗಳಲ್ಲಿಯೂ ನಾನಾ ವಿದಿಕ್ಕುಗಳಲ್ಲಿಯೂ ನಡೆಯಬೇಕಾಗಿತ್ತು. ದಕ್ಷಿಣಪ್ರಾಂತದಲ್ಲಿ ಅನ್ವೇಷಣ ಮಾಡುವವರು ಸಮುದ್ರವನ್ನು ದಾಟಬೇಕಾದದ್ದು ಅನಿವಾರ್ಯವಾಗಿತ್ತು. ಹೀಗೆ ಅವಶ್ಯಕರ್ತವ್ಯವಾದ ಸಮುದ್ರಲಂಘನ ಕಾರ್ಯಕ್ಕೆ ಅರ್ಹವಾದ ಪ್ರಾಣಿ ಯಾವುದು? ಮನುಷ್ಯನಂತೂ ಅಲ್ಲ.

ಶ್ರೀರಾಮನು ಮಹಾವಿಷ್ಣುವಲ್ಲವೆ? ಆತನು ಆಂಜನೇಯನಿಗಿಂತ ಹೆಚ್ಚು ಪರಾಕ್ರಮಿಯಲ್ಲವೆ? ಆತನು ತಾನೇ ಸಾಗರೋಲ್ಲಂಘನ ಮಾಡಲು ಆಗುತ್ತಿರಲಿಲ್ಲವೆ?

ಇಂಥ ಪ್ರಶ್ನೆಗಳು ಸಂಪೂರ್ಣವಾಗಿ ಅಸಂಗತಗಳು. ಮಹಾವಿಷ್ಣುವು ರಾವಣಾಸುರನು ಹುಟ್ಟದಂತೆಯೇ ಮಾಡಬಹುದಾಗಿತ್ತು. ಸೀತೆ ಎಲ್ಲಿದ್ದಾಳೆಂದು ಆ ಸರ್ವಜ್ಞನು ಯಾವ ಅನ್ವೇಷಣೆಯೂ ಇಲ್ಲದೆಯೇ ಕಂಡುಕೊಳ್ಳಬಹುದಾಗಿತ್ತು. ಇಂಥ ಬಹುದುಬಾರದುಗಳು ಇಲ್ಲಿ ಯುಕ್ತವಾಗಲಾರವು. ಇಲ್ಲಿಯದು ಒಂದು ಮಾನವಕಥಾಪ್ರಸಂಗ. ದೈವಿಕವನ್ನು ಕೂಡಿದಮಟ್ಟಿಗೂ ದೂರವಿಟ್ಟು ಮಾನವಸ್ವಭಾವವನ್ನು ಹೊರಕ್ಕೆ ತರಬೇಕೆಂಬುದು ಕವಿಯ ಆಶಯ. ಮನುಷ್ಯನೇ ಎಲ್ಲಿಯಾದರೂ ಕಾವ್ಯವಸ್ತು. ಕಾವ್ಯದಲ್ಲಿ ಮಾನುಷವು ಮುಖ್ಯ, ದೈವವು ಪ್ರಾಸಂಗಿಕ.

ಪ್ರಕೃತದಲ್ಲಿ ಮನುಷ್ಯನನ್ನು ಬಿಟ್ಟಮೇಲೆ ಸಮುದ್ರವನ್ನು ದಾಟಬಲ್ಲವು ಸಿಂಹ, ಗಜ, ವ್ಯಾಘ್ರ ಮೊದಲಾದ ಮೃಗಪ್ರಾಣಿಗಳಾಗಲಿ ಸರ್ಪ ಮೊದಲಾದ ಸರೀಸೃಪಗಳಾಗಲಿ ಅಲ್ಲ. ಶುಕ ಪಿಕಾದಿ ಪಕ್ಷಿಗಳೂ ಮಶಕ ಕೀಟಗಳೂ ಹಾರ

ಬಲ್ಲವಾದರೂ ಅವುಗಳ ಸಂಚಾರಪ್ರದೇಶವು ಬಹು ಮಿತವಾದದ್ದು. ಮಹಾ ಸಮುದ್ರವನ್ನು ಹಾರುವ ಶಕ್ತಿ ಅವಕ್ಕೆ ಇಲ್ಲ. ಹೀಗೆ ಮನುಷ್ಯನಿಗೆ ತಿಳಿದಿರುವ ಪ್ರಾಣಿವರ್ಗದಲ್ಲಿ ಹಾರುವ ಸಾಮರ್ಥ್ಯಕ್ಕೇ ಪ್ರಸಿದ್ಧವಾದದ್ದು ವಾನರವೊಂದೇ. ಆದದ್ದರಿಂದಲೇ ಅದಕ್ಕೆ ಪ್ಲವಗ, ಪ್ಲವಂಗ, ಪ್ಲವಂಗಮ ಇತ್ಯಾದಿ ಲಂಘನ ಸಾಮರ್ಥ್ಯಸೂಚಕಗಳಾದ ಹೆಸರುಗಳು. ಈ ಕಾರಣದಿಂದ ವಾಲ್ಮೀಕಿಗಳು ಸೃಷ್ಟಿಯಲ್ಲೆಲ್ಲ ವಾನರಜಾತಿಯನ್ನು ತಮ್ಮ ಸಂದರ್ಭಕ್ಕಾಗಿ ಆರಿಸಿಕೊಂಡಿರ ಬೇಕು.

ಹೀಗೆ ಕಥೆಗೆ ಕಪಿಪ್ರಸ್ತಾವವು ನಿರ್ಬಂಧವಾಗಿ ಒದಗಿಬಂದ ಬಳಿಕ ಅದನ್ನು ಒಂದು ಸುಂದರ ಪ್ರಕರಣಕ್ಕೆ ಜೋಡಿಸುವುದರಲ್ಲಿ ವಾಲ್ಮೀಕಿಗಳಿಗೆ ಅನೌಚಿತ್ಯದ ಶಂಕೆ ತೋರಿದ್ದಿರಬಹುದೆ? ಸಾಮಾನ್ಯ ಜನಕ್ಕೆ ಅಂಥ ಶಂಕೆ ತೋರುತ್ತದೆ. ಸೊಗಸಾದ ಔತಣದ ಊಟ ಬಡಿಸಲಿಕ್ಕೆ ಸೊಟ್ಟುಸೊಟ್ಟು ಕೊಳಕುಕೊಳಕೂ ಆದ ಪರಿಚಾರಕನೆ? ಪ್ರಣಯಪತ್ರವನ್ನು ಬರೆಯುವುದಕ್ಕೆ ಒರಟಾದ ಕರಡುಕಾಗದವೆ? ನಳದಮಯಂತಿಯರಿಗೆ ಪರಸ್ಪರ ವಾರ್ತಾವಾಹಿ ಗಳು ಕೆಟ್ಟ ಕುರೂಪಿಗಳಲ್ಲ; ಸುಂದರವಾದ ಹಂಸೆಗಳು. ಕಪಿಯನ್ನು ನೋಡಿ ಸೀತಾದೇವಿ ಭಯಭ್ರಾಂತಳಾದಾಳೆಂದು ಶ್ರೀರಾಮನು ಶಂಕೆಪಡುವುದು ಅಸಹಜವಲ್ಲ. ಆಕೆ ಭಯಪಟ್ಟಳೆಂದು ರಾಮಾಯಣದಲ್ಲಿಯೇ ಇದೆ. ಹೀಗೆ ವಾನರಾಕಾರದ ಅನುಚಿತತೆಯು ವಾಲ್ಮೀಕಿಗಳ ಮನಸ್ಸಿಗೆ ತೋರಿರಬೇಕೆಂದು ನಾವು ಭಾವಿಸಿದರೂ ಆ ಶಂಕೆಯನ್ನು ವಾಲ್ಮೀಕಿಗಳು ಬದಿಗಿರಿಸುವಂತೆ ಮಾಡುವ ಇನ್ನೊಂದು ಆಲೋಚನೆಯೂ ಅವರ ಮನಸ್ಸಿನಲ್ಲಿ ಇದ್ದಿರಬೇಕೆಂದು ನಾವು ಭಾವಿಸಿಕೊಳ್ಳಬೇಕಾಗುತ್ತದೆ. ಆ ಆಲೋಚನೆಯ ಮುಖ್ಯಾಂಶಗಳು ಎರಡು :

(೧) ನರಜಾತಿಯು ಯಾವ ಗುಣಗಳನ್ನು ಉತ್ಕೃಷ್ಟವೆಂದು ಎಣಿಸಿ ಕೊಂಡಿದೆಯೋ ಆ ಗುಣಗಳು ವಾನರಜಾತಿಯಲ್ಲಿ ಅಸಂಭವವಲ್ಲ —ಎಂಬುದು ವಾಲ್ಮೀಕಿಗಳ ಮೊದಲನೆಯ ಆಲೋಚನೆ.

(೨) ರೂಪ ಉತ್ಕೃಷ್ಟವಲ್ಲದಿದ್ದರೂ ಗುಣ ಉತ್ಕೃಷ್ಟವಾಗಿರುವಲ್ಲಿ ನಾವು ಆ ಗುಣವನ್ನು ನೋಡಿದಷ್ಟೂ ಆ ಕುರೂಪವು ಅಳಿಸಿಹೋಗಿ ಇಲ್ಲ ವಾಗುತ್ತದೆ—ಎಂಬುದು ವಾಲ್ಮೀಕಿಗಳ ಎರಡನೆಯ ಆಲೋಚನೆ.

ಇದನ್ನೇ ಬೇರೆ ಮಾತುಗಳಲ್ಲಿ ಸ್ಪಷ್ಟಪಡಿಸಲು ಹೀಗೆ ಹೇಳಬಹುದು: ನೀತಿಯ ಗುಣವೂ ರೂಪದ ಗುಣವೂ ಒಂದಕ್ಕೊಂದು ಹೊಂದಿಕೊಳ್ಳದಿದ್ದರೂ ನೀತಿಗುಣವು ಪ್ರಬಲಿಸಿದಂತೆಲ್ಲ ರೂಪಗುಣದ ಗಣನೆ ಇಳಿದುಹೋಗುತ್ತದೆ. ರೂಪವನ್ನು ಮಾತ್ರ ನೋಡಿ ನೀತಿಯನ್ನು ನೋಡದೆ ಒಬ್ಬ ಹೆಣ್ಣನ್ನು ಮದುವೆ ಮಾಡಿಕೊಂಡವನಿಗೆ ಆ ರೂಪದ ಮೋಹ ಬಹುಕಾಲ ಉಳಿಯಲಾರದು. ಪೂರ್ವಕಾಲದಲ್ಲಿ ಗಂಡುಹೆಣ್ಣುಗಳು ಕಿರಿಯವರಾಗಿದ್ದಾಗಲೇ ಅವರ ತಾಯಿ ತಂದೆಯರು ಅವರಿಗೆ ಮದುವೆಮಾಡಿಸುತ್ತಿದ್ದರು. ಆ ವಧೂವರರು ರೂಪಕ್ಕಾಗಿ ಮೋಹಬಿದ್ದವರೂ ಅಲ್ಲ, ನೀತಿವಿಚಾರ ನಡಸಿದವರೂ ಅಲ್ಲ. ಆದರೆ ಅವರು ಬೆಳೆದಮೇಲೆ ಆ ದಂಪತಿಗಳಲ್ಲಿ ರೂಪಸಂಪತ್ತಿಲ್ಲದಿದ್ದರೂ ಅವರಲ್ಲಿದ್ದ ನೀತಿ ಸಂಪತ್ತು ಅವರ ಅನ್ಯೋನ್ಯಪ್ರೇಮವನ್ನು ವೃದ್ಧಿಪಡಿಸುತ್ತಿತ್ತು.

ಕರ್ಮದಲ್ಲಿ ಅಕರ್ಮವನ್ನೂ ಅಕರ್ಮದಲ್ಲಿ ಕರ್ಮವನ್ನೂ ಕಾಣಲು ಕಲಿತವನು ಜ್ಞಾನಿಯೆಂದು ಗೀತೆಯಲ್ಲಿ ಉಪದೇಶವಿದೆಯಷ್ಟೆ? ಅದರಂತೆಯೇ ಸೌಂದರ್ಯದಲ್ಲಿ ಅಸೌಂದರ್ಯವನ್ನೂ ಅಸೌಂದರ್ಯದಲ್ಲಿ ಸೌಂದರ್ಯ ವನ್ನೂ ಕಾಣುವ ಅಭ್ಯಾಸವು ಒಂದು ತತ್ತ್ವಜ್ಞಾನಸಾಧನ. ಹಾಗೆಯೇ ಅಂತಸ್ಸೌಂದರ್ಯಕ್ಕೂ ಬಹಿಸ್ಸೌಂದರ್ಯಕ್ಕೂ ಇರುವ ವ್ಯತ್ಯಾಸವನ್ನು ಲಕ್ಷಿಸದೆ ಎರಡನ್ನೂ ಒಂದಾಗಿ ಪರಿಗಣಿಸುವುದನ್ನು ಅಭ್ಯಾಸಮಾಡಬೇಕು. ಅದೇ ದ್ವಂದ್ವಾತೀತನ ಲಕ್ಷಣ. ಭಗವತ್ಸ್ವರೂಪವನ್ನು ವರ್ಣಿಸುವಲ್ಲಿ ಅನೇಕ ಅಸುಂದರಭಾವಗಳನ್ನು ಸೂಚಿಸುವುದರ ತಾತ್ಪರ್ಯ ಇದು. ಗಣಪತಿ ದೇವತೆಯು ಪ್ರಣವದ ಪ್ರತೀಕ. ಪ್ರಣವಾಕ್ಷರವು ಪರಬ್ರಹ್ಮಸಂಜ್ಞೆ. ಪರಬ್ರಹ್ಮವು ಆನಂದ ಸ್ವರೂಪಿ. ಆನಂದವು ಸೌಂದರ್ಯಬೀಜ. ಹೀಗೆ ಸಕಲಸೌಂದರ್ಯಮೂಲ ವಾದ ಬ್ರಹ್ಮವಸ್ತುವಿನ ಪ್ರತೀಕಕ್ಕೆ ಕೊಟ್ಟಿರುವ ಹೆಸರುಗಳೆಂಥವು?

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ |
ಲಂಬೋದರಶ್ಚ ವಿಕಟಃ . . . . ||

ಇದೇ ಬೋಧನೋಪಾಯವನ್ನು ರುದ್ರಾಧ್ಯಾಯ ಮೊದಲಾದ ಶ್ರುತಿ ಪ್ರಕರಣಗಳಲ್ಲಿಯೂ ಕಾಣಬಹುದು.

ಈ ತತ್ತ್ವದಿಂದ ನಾವು ಆಂಜನೇಯಾವತಾರದ ಮರ್ಮವನ್ನು ಗ್ರಹಿಸ ಬೇಕಾದದ್ದು. ಅಂತಸ್ಸೌಂದರ್ಯವನ್ನು ದೃಷ್ಟಿಯಲ್ಲಿರಿಸಿಕೊಂಡು ಬಹಿರಾಕೃತಿ ಯನ್ನು ಮರೆಯಬೇಕಾದದ್ದು.

## ಒಂದು ಅನುಭವ

ಗುಣಸ್ವಾರಸ್ಯವೂ ರೂಪದೋಷವೂ ಎರಡೂ ಒಂದೆಡೆಯಿದ್ದಲ್ಲಿ ಆ ಗುಣವು ಆ ದೋಷವನ್ನು ಮರೆಯಿಸುತ್ತದೆಂಬುದಕ್ಕೆ ನಿದರ್ಶನವಾಗಿ ಶ್ರೀ ವಿ. ಎಸ್. ಶ್ರೀನಿವಾಸಶಾಸ್ತ್ರಿಗಳವರು ನನಗೆ ವರ್ಣಿಸಿದ ಒಂದು ಅನುಭವ ಜ್ಞಾಪಕಕ್ಕೆ ಬರುತ್ತದೆ. ಶಾಸ್ತ್ರಿಗಳವರು ಚಿಕ್ಕ ವಯಸ್ಸಿನಲ್ಲಿದ್ದಾಗ ತಂಜಾವೂರಿನಲ್ಲಿ ಒಬ್ಬ ದೊಡ್ಡಮನುಷ್ಯರ ಮನೆಯಲ್ಲಿ—ಬಹುಶಃ ಸರ್ ಟಿ. ಮುತ್ತುಸ್ವಾಮಿ ಅಯ್ಯರ್ ರವರ ಮನೆಯಲ್ಲಿ ಮದುವೆ ನಡೆಯಿತಂತೆ. ಆ ಕಾಲದಲ್ಲಿ ಮದುವೆ ನಾಲ್ಕೈದು ದಿವಸಗಳ ಉತ್ಸವ. ಅದರಲ್ಲೊಂದು ದಿವಸ ಸಭಾಪೂಜೆ. ಅಂದು ನರ್ತಕಿಯ ರಿಂದ ನರ್ತನ (ತಾಫಾ) ಮಾಡಿಸುವುದು ಆಗಿನ ವಾಡಿಕೆ. ಆ ದಿನದ ಸದಸ್ಸಿಗೆ ಶ್ರೀನಿವಾಸಶಾಸ್ತ್ರಿಗಳೂ ನಾಲ್ವರೈವರು ಸ್ನೇಹಿತರೂ ಹೋಗಿ ಕುಳಿತರು. ಗೊತ್ತಾಗಿದ್ದ ನರ್ತಕಿ ಅವರ ಕಣ್ಣಿಗೆ ಕಾಣಿಸಿದಳು. ಆಕೆ ಮುದುಕಿ, ರೂಪವತಿ ಯಲ್ಲ. ಆ ಯುವಕರು ತಮ್ಮತಮ್ಮೊಳಗೆ "ಈ ಮುದಿಕುಣಿತವನ್ನೇನು ನೋಡುವುದು? ನಡೀರಿ, ಹೋಗೋಣ" ಎಂದು ಮಾತನಾಡಿಕೊಂಡರಂತೆ. ಅದನ್ನು ಕೇಳಿದ ಹಿರಿಯರೊಬ್ಬರು "ಇನ್ನೂ ಸಭೆ ಪ್ರಾರಂಭವಾಗಿಲ್ಲ; ಈಗ ಎದ್ದುಹೋಗುವುದು ಮರ್ಯಾದೆಯಲ್ಲ, ಹತ್ತುನಿಮಿಷವಾದಮೇಲೆ ಹೋಗ ಬಹುದು"—ಎಂದರಂತೆ. ಅದರಂತೆ ಯುವಕರು ಕುಳಿತಿದ್ದರು. ನಾಟ್ಯ ಪ್ರಾರಂಭವಾಯಿತು. ಆಕೆ ಸಭಾವಂದನೆಮಾಡಿ ಬಳಿಕ ರಾಧಾಕೃಷ್ಣಲೀಲೆ ಯಲ್ಲಿ ರಾಧೆ ತನ್ನ ಬಳಿಗೆ ಕೃಷ್ಣ ಇನ್ನೂ ಬರಲಿಲ್ಲವಲ್ಲ!—ಎಂದು ಕಳವಳಪಟ್ಟ ಹಾಡನ್ನು ಹಾಡಿಕೊಂಡು ಅಭಿನಯ ಹಿಡಿಯಲಾರಂಭಿಸಿದಳು. ಹತ್ತು ನಿಮಿಷ ಕಳೆಯಿತು, ಇಪ್ಪತ್ತು ನಿಮಿಷವಾಯಿತು. ನಮ್ಮ ಯುವಕರು ಕದಲಲಿಲ್ಲ. ಆ ಹಿರಿಯರು "ಈಗ ಬೇಕಾದರೆ ಹೋಗಬಹುದು" ಎಂದರು. ಯುವಕರು "ನಮ್ಮನ್ನು ತಳ್ಳಿದರೂ ನಾವು ಹೋಗುವವರಲ್ಲ!" ಎಂದರು. ಆಕೆಯ ನೇತ್ರಾಭಿನಯ, ಆಕೆಯ ನಾನಾ ಮುಖಭಾವಗಳು, ಆಕೆಯ ಅಂಗಾಂಗಭಂಗಿ ಗಳು ಹಾಗೆ ಚಿತ್ತಗ್ರಾಹಿಯಾಗಿದ್ದವು.

ಗುಣವು ಅತಿಶಯವಾದಾಗ ರೂಪದ ಲೋಪವು ಲೆಕ್ಕಕ್ಕಿಲ್ಲದೆಹೋಗು ತ್ತದೆ. ಆಂಜನೇಯನ ವಾನರತ್ವವು ಮಾಯವಾಗಿ ಆತನು "ಕಾಂಚನಾದ್ರಿ ಕಮನೀಯವಿಗ್ರಹ"ನಾಗುತ್ತಾನೆ. ರೂಪನ್ಯೂನತೆಯನ್ನು ಗುಣಬಾಹುಳ್ಯವು ಜಯಿಸುತ್ತದೆ. ಕೆಲವು ದೃಷ್ಟಾಂತಗಳನ್ನು ನೋಡೋಣ.

## ಕಥಾಸಂಕ್ಷೇಪ

ಆಂಜನೇಯಮೂರ್ತಿಯ ದರ್ಶನ ನಮಗೆ ಮೊದಲು ಆಗುವುದು ಕಿಷ್ಕಿಂಧಾ ಪ್ರದೇಶದಲ್ಲಿ. ರಾಮಲಕ್ಷ್ಮಣರು ಸೀತಾದೇವಿಯನ್ನು ಹುಡುಕಿಕೊಂಡು ಕಾಡಿನಲ್ಲಿ ಅಲೆದಾಡುತ್ತ ಅಲ್ಲಿಗೆ ಬರುತ್ತಿದ್ದಾರೆ. ಸುಗ್ರೀವನು ಅವರನ್ನು ದೂರದಿಂದ ಕಂಡು, ಅವರು ತನ್ನ ಶತ್ರುವಾದ ವಾಲಿಯ ಗುಪ್ತಭಟರಿರಬೇಕೆಂದು ಊಹಿಸಿಕೊಂಡು, ಭೀತಿಪಟ್ಟು ತಲ್ಲಣಗೊಂಡಿದ್ದಾನೆ. ಆಗ ಆತನ ಪರಿವಾರದಲ್ಲಿದ್ದ ವಾಯುಪುತ್ರನು ಧೈರ್ಯಮಾಡಿ ಸುಗ್ರೀವನ ಶಂಕೆಯನ್ನು ಪರಿಹರಿಸಲು ಮುಂದೆ ಬರುತ್ತಾನೆ. ರಾಮಲಕ್ಷ್ಮಣರ ರೂಪಲಕ್ಷಣಗಳನ್ನೂ ಮುಖಕಾಂತಿಯನ್ನೂ ನೋಡಿದರೆ ಅವರು ವಾಲಿಯ ಕಡೆಯವರೆನಿಸುವುದಿಲ್ಲ; ಅವರು ಯಾರೋ ಸತ್ಪುರುಷರು, ಸ್ನೇಹಯೋಗ್ಯರಾಗಿ ಕಾಣುತ್ತಾರೆ; ಅವರ ಸ್ನೇಹದಿಂದ ನಿನಗೆ ಪ್ರಯೋಜನವೇ ಆಗಬಹುದು—ಎಂದು ಆಂಜನೇಯನು ನುಡಿದದ್ದನ್ನು ಸುಗ್ರೀವನು ಲಾಲಿಸಿ, ಆ ಆಗಂತುಕರನ್ನು ವಿಚಾರಿಸಿ ತಿಳಿದುಕೊಳ್ಳುವಂತೆ ಆಂಜನೇಯನಿಗೆ ಅನುಜ್ಞೆ ಕೊಡುತ್ತಾನೆ. ಈ ಸಂಗತಿ ಆಂಜನೇಯನ ನೈಜಸಾತ್ತ್ವಿಕತೆಗೂ ದೂರದರ್ಶಿತ್ವಕ್ಕೂ ನಿದರ್ಶನ.

ಹನುಮಂತನು ರಾಮನ ಬಳಿಗೆ ಹೋದದ್ದಾದರೂ ಹೇಗೆ? ವಾನರರೂಪದಿಂದ ಅಲ್ಲ; ಭಿಕ್ಷುರೂಪದಿಂದ. ರಾಮಲಕ್ಷ್ಮಣರು ತಾಪಸರೂಪದಲ್ಲಿದ್ದರು. ಅಂಥವರಿಗೆ ಇಷ್ಟವಾದ ವೇಷದಲ್ಲಿ ತಾನು ಅವರಿಗೆ ಕಾಣಿಸಿಕೊಂಡರೆ ಅವರು ಒಡನೆಯೇ ಪ್ರಸನ್ನರಾದಾರು. ಇದು ಆತನ ತಾತ್ಪರ್ಯ. ಅದು ದಿಟವಾಯಿತು. ಆತನು ಮಾತನ್ನು ಪ್ರಾರಂಭಿಸಿದ ರೀತಿಯಿಂದ ಶ್ರೀರಾಮಚಂದ್ರನಿಗೆ ಸಂತೋಷವಾಯಿತು. ಆತ ತುಂಬುಮನಸ್ಸಿನಿಂದ ಆಂಜನೇಯನನ್ನು ಕೊಂಡಾಡಿದ :

ಉಚ್ಚಾರಯತಿ ಕಲ್ಯಾಣೀಂ ವಾಚಂ ಹೃದಯಹಾರಿಣೀಮ್ ||

ಈಗ ಇನ್ನೊಂದು ದೃಶ್ಯಕ್ಕೆ ಹೋಗೋಣ.

ಆಂಜನೇಯನು ಸಮುದ್ರದಮೇಲೆ ಹಾರಿಹೋಗುತ್ತಿದ್ದಾನೆ. ಅವನ ತಂದೆಯಾದ ವಾಯುದೇವನ ಸ್ನೇಹಿತ ಪರ್ವತಮೂರ್ತಿ ಮೈನಾಕನು ಸಮುದ್ರದ ತಳದಲ್ಲಿ ಅಡಗಿಕೊಂಡಿದ್ದವನು ಆಂಜನೇಯನು ಕೊಂಚ ವಿಶ್ರಮಿಸಿಕೊಳ್ಳಲು

ಸ್ಥಲ ಒದಗಿಸಬೇಕೆಂದು ಮೇಲಕ್ಕೆದ್ದು ಬರುತ್ತಾನೆ. ಅದನ್ನರಿಯದ ಆಂಜನೇಯನು ಅದೇನೋ ಭೂತವಿರಬೇಕೆಂದು ಭ್ರಮಿಸಿ ಮೈನಾಕಪರ್ವತದ ಮಸ್ತಕವನ್ನು ತನ್ನ ಬಾಲದಿಂದ ಅಪ್ಪಳಿಸುತ್ತಾನೆ. ಆಗ ಮೈನಾಕನು ತಾನಾರೆಂಬುದನ್ನು ತಿಳಿಸಿದ ಬಳಿಕ ವಾಯುಪುತ್ರನು ಅಲ್ಲಿ ವಿಶ್ರಾಂತಿ ತೆಗೆದು ಕೊಳ್ಳಬಹುದಾಗಿತ್ತು. ಹಾಗೆ ಮಾಡಿದನೆ? ಇಲ್ಲ. ಆತನ ಕರ್ತವ್ಯೋತ್ಸಾಹ ದಲ್ಲಿ ವಿರಾಮಕ್ಕೆಡೆಯಿರಲಿಲ್ಲ.

ಇಂಥ ನಾಲ್ಕಾರು ಅಡ್ಡಿ ಅಪಾಯಗಳನ್ನು ಆಂಜನೇಯನು ತನ್ನ ಪರಾಕ್ರಮದಿಂದ ಎದುರಿಸಿ ದಾಟಿ ಲಂಕಾಪಟ್ಟಣವನ್ನು ಸೇರಿದ. ಅಲ್ಲಿ ಸೀತಾ ಮಾತೆಗಾಗಿ ಎಲ್ಲೆಲ್ಲೂ ಹುಡುಕಿದ. ಆಕೆಯ ರೂಪಲಕ್ಷಣಗಳ ವಿಷಯದಲ್ಲಿ ತಾನು ಮನಸ್ಸಿನಲ್ಲಿ ಧರಿಸಿದ್ದ ಪ್ರತಿಕೃತಿಯನ್ನು ಎಲ್ಲಿಯೂ ಕಾಣದೆ ಕಡೆಗೆ ರಾವಣನ ಅಂತಃಪುರಕ್ಕೆ ಬಂದ. ಅಲ್ಲಿ ಸಾವಿರಾರು ಮಂದಿ ಸುರಸುಂದರಿಯ ರನ್ನು ಕಂಡ. ಅವರಲ್ಲಿ ಯಾವ ಒಬ್ಬಾಕೆಯನ್ನಾದರೂ ಸೀತೆಯೆಂದು ಭ್ರಾಂತಿ ಪಡಬಹುದಾಗಿತ್ತಲ್ಲ! ಅಂಥಾ ಭ್ರಾಂತಿಗೆ ಆತ ಸಿಕ್ಕಲಿಲ್ಲ. ಸೀತೆ ಅಂಥಾ ಸನ್ನಿವೇಶವನ್ನು ಸಹಿಸತಕ್ಕವಳಲ್ಲವೆಂಬ ನಂಬಿಕೆ ಅವನ ಮನಸ್ಸಿನಲ್ಲಿ ಬೇರೂರಿತ್ತು. ಮಂಡೋದರಿಯನ್ನು ನೋಡಿದ. ಒಂದು ಕ್ಷಣ ಭ್ರಾಂತಿ ಪರವಶನಾದ.

ತರ್ಕಯಾಮಾಸ ಸೀತೇತಿ ರೂಪಯೌವನಸಂಪದಾ ||

ಆದರೆ ಉತ್ತರಕ್ಷಣದಲ್ಲಿಯೇ ಆ ಭ್ರಾಂತಿ ಬಿಟ್ಟಿತು :

ನ ರಾಮೇಣ ವಿಯುಕ್ತಾ ಸಾ ಸ್ವಪ್ತುಮರ್ಹತಿ ಭಾಮಿನೀ ||

ಪರಪುರುಷನೆಡೆಯಲ್ಲಿ ಮಲಗಿ ನಿದ್ದೆಹೋಗುವಂಥವಳೇ ರಾಮಪತ್ನಿ? ಎಂದಿಗೂ ಹಾಗಾಗಲಾರದು.

ಮತ್ತೆ ಹುಡುಕಲಾರಂಭಿಸಿ ಕಡೆಗೆ ಅಶೋಕವನದತ್ತ ಬಂದ. ಅಲ್ಲಿ ಕಂಡ ಕಾಣಬಯಸಿದ್ದದ್ದನ್ನು.

ಸೀತಮ್ಮನ ಸನ್ನಿಧಾನದಲ್ಲಿ ಆಂಜನೇಯನು ನಡೆದುಕೊಂಡ ನಡವಳಿಕೆಯ ಮರ್ಯಾದೆ, ಆ ಮಾತಿನ ಇಂಗಿತಜ್ಞತೆ, ವಿನಯ, ವಾತ್ಸಲ್ಯಗಳು ಹೃದಯ ಸ್ಪರ್ಶಿಗಳಾಗಿವೆ :

ಸೋಽವತೀರ್ಯ ದ್ರುಮಾತ್ತಸ್ಮಾತ್ ವಿದ್ರುಮಪ್ರತಿಮಾನನಃ |
ವಿನೀತವೇಷಃ ಕೃಪಣಃ ಪ್ರಣಿಪತ್ಯೋಪಸೃತ್ಯ ಚ |

. . . . . . . . . . . . . .

ಕಾ ನು ಪದ್ಮಪಲಾಶಾಕ್ಷಿ ಕ್ಲಿಷ್ಟಕೌಶೇಯವಾಸಿನಿ |
ದ್ರುಮಸ್ಯ ಶಾಖಾಮಾಲಂಬ್ಯ ತಿಷ್ಠಸಿ ತ್ವಮನಿಂದಿತೇ ||
ಕಿಮರ್ಥಂ ತವ ನೇತ್ರಾಭ್ಯಾಂ ವಾರಿ ಸ್ರವತಿ ಶೋಕಜಮ್ |

. . . . . . . . . . . . . .

ಸೀತಾ ತ್ವಮಸಿ ಭದ್ರಂ ತೇ ತನ್ಮಮಾಚಕ್ಷ್ವ ಪೃಚ್ಛತಃ ||

ಇದರಿಂದ ಸಂತುಷ್ಟಳಾದ ಸೀತೆ ತನ್ನ ವೃತ್ತಾಂತವನ್ನು ಹೇಳುತ್ತಾಳೆ. ಆಂಜನೇಯನು ತನ್ನ ಮಾತಿನಲ್ಲಿ ಆಕೆಗೆ ನಂಬಿಕೆ ದೃಢಪಡಬೇಕೆಂದೂ ಆಕೆ ಧೈರ್ಯಗೊಳ್ಳಬೇಕೆಂದೂ ಉದ್ದೇಶಿಸಿ,

ರಾಮನಾಮಾಂಕಿತಂ ಚೇದಂ ಪಶ್ಯ ದೇವ್ಯಂಗುಲೀಯಕಮ್ |
ಪ್ರತ್ಯಯಾರ್ಥಂ ತವಾನೀತಂ ತೇನ ದತ್ತಂ ಮಹಾತ್ಮನಾ ||

ಹೀಗೆ ಆಂಜನೇಯನು ಶ್ರೀರಾಮನ ಉಂಗುರವನ್ನು ಸೀತಾದೇವಿಗೆ ಒಪ್ಪಿಸಲು ಆಕೆ ಶ್ರೀರಾಮನಿಗೆ ಪ್ರತ್ಯುತ್ತರವಾಗಿ ಕಾಕಾಸುರವಧೆಯ ವೃತ್ತಾಂತವನ್ನು ಜ್ಞಾಪಕಕ್ಕೆ ತಂದು ಅದನ್ನು ಆಂಜನೇಯನು ರಾಮಚಂದ್ರನಿಗೆ ತಿಳಿಸತಕ್ಕದ್ದೆಂದೂ ತನ್ನ ಚೂಡಾಮಣಿಯನ್ನು ಆತನಿಗೆ ಜ್ಞಾಪಕಾರ್ಥವಾಗಿ ಕೊಡತಕ್ಕದ್ದೆಂದೂ ಹೇಳಿದಳು :

ಅಭಿಜ್ಞಾನಂ ಚ ರಾಮಸ್ಯ ದದ್ಯಾ ಹರಿಗಣೋತ್ತಮ |

. . . . . . . . . .

ಏಷ ಚೂಡಾಮಣಿರ್ದಿವ್ಯೋ ಮಯಾ ಸುಪರಿರಕ್ಷಿತಃ |
ಏತಂ ದೃಷ್ಟ್ವಾ ಪ್ರಹೃಷ್ಯಾಮಿ ವ್ಯಸನೇ ತ್ವಾಮಿವಾನಘ ||

ಆಂಜನೇಯಮೂರ್ತಿಯು ಈ ಸೀತಾಸಂದೇಶವನ್ನು ಶ್ರೀರಾಮಚಂದ್ರನಿಗೆ ಮುಟ್ಟಿಸಿ ಚೂಡಾರತ್ನವನ್ನು ಆತನಿಗೆ ಕೊಟ್ಟಾಗ ಶ್ರೀರಾಮನು ತನ್ನ ಕೃತಜ್ಞತೆಯನ್ನು ಹೀಗೆ ವ್ಯಕ್ತಪಡಿಸಿದ :

ಕೃತಂ ಹನುಮತಾ ಕಾರ್ಯಂ ಸುಮಹದ್ಭುವಿ ದುರ್ಲಭಮ್ |
ಮನಸಾಽಪಿ ಯದನ್ಯೇನ ನ ಶಕ್ಯಂ ಧರಣೀತಲೇ ||

ಎಂಥ ಸೌಭಾಗ್ಯಯೋಗ ಆಂಜನೇಯಮೂರ್ತಿಯದು ! ಈಕಡೆಯ ರಾಘವಹಸ್ತಸ್ಪರ್ಶಸೌಭಾಗ್ಯವನ್ನು ಆಕಡೆಯ ಜಾನಕಿಗೆ ಹಸ್ತಗತವಾಗಿಸಿದ್ದು ; ಆಕಡೆಯ ಜಾನಕೀಹಸ್ತಸ್ಪರ್ಶಸೌಭಾಗ್ಯವನ್ನು ಈಕಡೆಯ ರಾಘವನಿಗೆ ಹಸ್ತಗತ ಮಾಡಿಸಿದ್ದು—ಹೀಗೆ ಉಭಯಸೌಭಾಗ್ಯಗಳ ಸಂಧಿಸ್ಥಾನ ಆಂಜನೇಯ. ಮನುಷ್ಯ ಕಾಣಬಹುದಾದ ಸೌಂದರ್ಯಗಳ ಮಾತಿರಲಿ, ಅವನು ಊಹಿಸ ಬಹುದಾದ ಸೌಂದರ್ಯಗಳಲ್ಲಿ ಸಹ ಆಂಜನೇಯನ ಯೋಗಕ್ಕಿಂತ ಸುಂದರ ವಾದ್ದು ಏನಿದ್ದೀತು ?

ಅಲ್ಲಿಂದ ಮುಂದಿನ ರಾಮಕಥೆ ನಿರೀಕ್ಷಿಸಬಹುದಾದದ್ದು. ಶ್ರೀರಾಮನು

ಧರ್ಮಾತ್ಮಾ ಸತ್ಯಸಂಧಶ್ಚ . . . . . |
ಪೌರುಷೇ ಚಾಪ್ರತಿದ್ವಂದ್ವಃ . . . . . ||

—ಎಂಬುದನ್ನರಿತವರಿಗೆ ಸೇತುನಿರ್ಮಾಣವೂ ರಾವಣಸಂಹಾರವೂ ಸ್ವಾಭಾವಿಕ ಘಟನೆಗಳೇ, ಅವಶ್ಯಸಂಭಾವ್ಯಗಳೇ ಎಂಬುದು ಸ್ವತಸ್ಸಿದ್ಧವಾಗಿರುತ್ತದೆ.

ಕಿಷ್ಕಿಂಧೆಯಲ್ಲಿ ಉದಿಸಿದ ಸೌಂದರ್ಯಯೋಗಕ್ಕೆ ಅಯೋಧ್ಯೆಯಲ್ಲಿ ಕಿರೀಟಪ್ರಾಪ್ತಿ. ರಾಮಚಂದ್ರನ ಪಟ್ಟಾಭಿಷೇಕಕ್ಕಾಗಿ ಒಡ್ಡೋಲಗ ನೆರೆದಿದೆ. ಪ್ರಭುವು ಸುಗ್ರೀವ ವಿಭೀಷಣಾದಿಗಳಿಗೆ ಕೃತಜ್ಞತೆಯ ಪಾರಿತೋಷಕಗಳನ್ನು ಅನುಗ್ರಹಿಸಿದ್ದಾನೆ. ಸೀತಾದೇವಿಗೂ ಯಥೋಚಿತವಾಗಿ ಉಡುಗೊರೆ ಕೊಟ್ಟಿ ದ್ದಾಯಿತು. ಆ ದೇವಿ ತನ್ನ ಕಂಠದಲ್ಲಿದ್ದ ಮಣಿಹಾರವನ್ನು ವಾಯುಪುತ್ರನಿಗೆ ಕೊಡಲುದ್ದೇಶಿಸಿ ಭರ್ತನ ಮುಖವನ್ನು ನೋಡುತ್ತಾಳೆ. ಆಗ ಪ್ರಭು ನುಡಿದ :

ಪ್ರದೇಹಿ ಸುಭಗೇ ಹಾರಂ ಯಸ್ಯ ತುಷ್ಟಾಸಿ ಭಾಮಿನಿ |
ತೇಜೋ ಧೃತಿರ್ಯಶೋ ದಾಕ್ಷ್ಯಂ ಸಾಮರ್ಥ್ಯಂ ವಿನಯೋ ನಯಃ ||
ಪೌರುಷಂ ವಿಕ್ರಮೋ ಬುದ್ಧಿಃ ಯಸ್ಮಿನ್ನೇತಾನಿ ನಿತ್ಯದಾ |
ದದೌ ಸಾ ವಾಯುಪುತ್ರಾಯ ತಂ ಹಾರಮಸಿತೇಕ್ಷಣಾ ||

ಇಂಥಾ ಬಹುಮಾನವನ್ನು ಪಡೆದದ್ದಲ್ಲವೆ ಸುಂದರ—ಸುಂದರದಲ್ಲಿ ಸುಂದರ !

## ನಿಃಸ್ವಾರ್ಥತೆ

ಆಂಜನೇಯನ ತಂದೆಯ ಸ್ವಭಾವವನ್ನು ಛಾಂದೋಗ್ಯೋಪನಿಷತ್ತಿನ ಒಂದು ಕಥೆ ತಿಳಿಸುತ್ತದೆ. ದೇವತೆಗಳಿಗೂ ಅಸುರರಿಗೂ ಆಗಾಗ ಯುದ್ಧವಾಗು

ತ್ತಿತ್ತಷ್ಟೆ? ಸಲಸಲವೂ ದೇವತೆಗಳು ಪೆಟ್ಟುತಿಂದು ಸೋಲುತ್ತಿದ್ದರು. ಅವರು ಹಾಗೆ ಕುಗ್ಗಿದ್ದಾಗ ಒಂದು ಸಾರಿ ತಮ್ಮ ತಂದೆ ಪ್ರಜಾಪತಿಯಲ್ಲಿ ಮೊರೆಯಿಟ್ಟು ಕೊಂಡು ಉಪಾಯವನ್ನು ಬೇಡಿದರು. ಪ್ರಜಾಪತಿಯು ಅವರಿಗೆ ಉದ್ಗೀಥದ ಉಪಾಸನೆಯು ಜಯಕಾರಕವೆಂದು ಉಪದೇಶಿಸಿದ. ಉದ್ಗೀಥವೆಂದರೆ ಪರಬ್ರಹ್ಮ ಧ್ಯಾನ. ಆ ಉಪದೇಶವನ್ನು ದೇವತೆಗಳು ಅಂಗೀಕರಿಸಿ, ತಮ್ಮಲ್ಲಿ ಮುಖ್ಯರಾದ ಇಂದ್ರಿಯದೇವತೆಗಳನ್ನು ಒಬ್ಬರಾದ ಬಳಿಕ ಒಬ್ಬರಂತೆ ಉಪಾಸನೆಗೆ ನಿಯಮಿಸಿ ದರು. ವಾಗಿಂದ್ರಿಯವನ್ನು ಬೇಡಿದರು. ಆ ದೇವತೆ ಉದ್ಗೀಥದಿಂದ ಮಹಿಮೆ ಪಡೆಯಿತು. ಅದರಿಂದ ಶುಭಶಬ್ದಗಳು ಹೊರಟವು. ಎಲ್ಲರೂ ಸಂತೋಷಿಸಿ ದರು. ವಾಕ್ಕು ಆಗ "ಅಹಾ! ನಾನು ಎಂಥಾ ಮಹಾಕಾರ್ಯವನ್ನು ಮಾಡಿದೆ!" ಎಂದುಕೊಂಡಿತು. ಆ ಕ್ಷಣದಲ್ಲಿ ಪಾಪ ಅದನ್ನು ಹೊಕ್ಕಿತು. ಅದು ರಾಕ್ಷಸರ ಹೊಡೆತಕ್ಕೆ ಅವಕಾಶವಾಯಿತು. ದೇವತೆಗಳು ಚಕ್ಷುರಿಂದ್ರಿಯ ವನ್ನು ಉದ್ಗೀಥಕ್ಕೆ ನಿಯಮಿಸಿದರು. ಅದು ನಾನಾ ಶೋಭನರೂಪಗಳನ್ನು ತೋರಿಸಿತು. ಎಲ್ಲರೂ ಸಂತೋಷಪಟ್ಟರು. ಚಕ್ಷುಸ್ಸು "ಅಹಾ! ನಾನು ಎಂಥಾ ಮಹಾಕಾರ್ಯವನ್ನು ಮಾಡಿದೆ!" ಎಂದುಕೊಂಡಿತು. ಆಗ ಪಾಪ ಪ್ರವೇಶಿಸಿತು. ಮತ್ತೆ ಅಸುರರು ಪ್ರಬಲಿಸಿ ಬಂದರು. ಹೀಗೆಯೇ ಮಿಕ್ಕ ಎಲ್ಲ ಇಂದ್ರಿಯಾಭಿಮಾನಿ ದೇವತೆಗಳ ಪಾಡೂ ಆಯಿತು. ಕಡೆಗೆ ದೇವತೆಗಳು ವಾಯುವನ್ನು ಕುರಿತು "ನೀನು ಉದ್ಗೀಥೋಪಾಸನೆ ಮಾಡು" ಎಂದು ಬೇಡಿ ಕೊಂಡರು. ವಾಯುದೇವನಾದರೋ ಯಾವ ಇಂದ್ರಿಯಕ್ಕೂ ಅಂಟಿಕೊಳ್ಳದೆ ಕೇವಲ ಪ್ರಾಣರೂಪದಲ್ಲಿರುವವನು. ಅವನನ್ನು ಅಹಂತಾಪಾಪವು ಸೋಕದು. ಇಂದ್ರಿಯಗಳಿಗೆ ಸ್ವಸುಖಸ್ವಲಾಭಗಳ ಚಿಂತೆ ಇರುವಂತೆ ವಾಯುದೇವನಿಗಿಲ್ಲ. ಆತನು ನಿಃಸ್ವಾರ್ಥಿ; ಕೇವಲ ಕರ್ತವ್ಯತಾಭಾವದಿಂದ ಕೆಲಸ ಮಾಡತಕ್ಕವನು. ಆದದ್ದರಿಂದ ವಾಯುದೇವನು ಮಾಡಿದ ಉದ್ಗೀಥೋಪಾಸನೆ ಪಾಪಸ್ಪರ್ಶವಿಲ್ಲದೆ ನಡೆದು ರಾಕ್ಷಸರನ್ನು ಜಯಿಸಲು ಸಮರ್ಥವಾಯಿತು. ಈ ವಾಯುದೇವ ಸ್ವಭಾವವು ವಾಯುಪುತ್ರನಿಗೂ ಬಂದಿತ್ತು.

ಈಗ ಪರಿಸಮಾಪನದೃಶ್ಯ. ಶ್ರೀರಾಮಚಂದ್ರನು ಪಟ್ಟಾಭಿಷೇಕಾನಂತರ ಅಯೋಧ್ಯೆಯಲ್ಲಿ ರಾಜ್ಯ ನಡೆಸುತ್ತಿದ್ದಾನೆ: ಹತಶತ್ರುವಾಗಿ, ಕೃತಕೃತ್ಯನಾಗಿ, ನಿಶ್ಚಿಂತನಾಗಿ ಉಪಶಾಂತನಾಗಿದ್ದಾನೆ. ರಾಜ್ಯವು ಸುಖಶಾಂತಿಸೌಭಾಗ್ಯಗಳಿಂದ

ಸಮೃದ್ಧವಾಗಿದೆ. ಈಗ ಶ್ರೀರಾಮನು ಕಾಲ ಕಳೆಯುವುದು ಹೇಗೆ? ಅದು ಹೀಗೆ: ಮಹರ್ಷಿಗಳು ಸಭೆ ನೆರೆದಿದ್ದಾರೆ. ಅವರ ನಡುವೆ ಶ್ರೀರಾಮಚಂದ್ರನು ಸೀತಾಸಹಿತನಾಗಿ ಭದ್ರಾಸನದಲ್ಲಿ ಸುಖಾಸೀನನಾಗಿದ್ದಾನೆ. ಎಡಬಲಗಳಲ್ಲಿ ತಮ್ಮಂದಿರೂ ಬಂಧುಮಿತ್ರರೂ ಕುಳಿತಿದ್ದಾರೆ. ಋಷಿಮುನಿಗಳು ರಾಮಮುಖ ದಿಂದ ಪರತತ್ತ್ವವನ್ನು ತಿಳಿದುಕೊಳ್ಳಬೇಕೆಂದು ಕುತೂಹಲಿಗಳಾಗಿದ್ದಾರೆ. ಮುಂದುಗಡೆ ಆಂಜನೇಯನು ಕುಳಿತು ಶ್ರುತಿವಾಕ್ಯಗಳನ್ನು ಹೇಳುತ್ತಿದ್ದಾನೆ. ಸ್ವಾಮಿ ವ್ಯಾಖ್ಯಾನಮಾಡುತ್ತಿದ್ದಾನೆ.

ಅಗ್ರೇ ವಾಚಯತಿ ಪ್ರಭಂಜನಸುತೇ ತತ್ತ್ವಂ ಮುನಿಭ್ಯಃ ಪರಮ್ |
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ ರಾಮಂ ಭಜೇ ಶ್ಯಾಮಲಮ್ ||

ಎಂಥ ಮನೋಹರವಾದ ಸನ್ನಿವೇಶ! ಇದಲ್ಲವೇ ಜೀವನಸೌಂದರ್ಯದ ಶಿಖರಾಗ್ರ!

ಈ ಚಿತ್ರದ ಸೌಂದರ್ಯವನ್ನು ಕಾಣಬಲ್ಲ ಜನ ನಮ್ಮಲ್ಲಿ ಇನ್ನೂ ಇದ್ದಾರೆಂದು ನಾನು ನಂಬಿದ್ದೇನೆ. ಅಂಥವರು ಈ ಸುಂದರಕಾಂಡ ಗ್ರಂಥ ವನ್ನು ಆದರದಿಂದ ಬರಮಾಡಿಕೊಳ್ಳುವರು.

ಸುಂದರಕಾಂಡದ ನಿತ್ಯಪಾರಾಯಣಸಂಪ್ರದಾಯವು ನಮ್ಮ ದೇಶದಲ್ಲಿ ಬಹುಕಾಲದಿಂದ ಬಂದದ್ದು. ಮನಸ್ಸನ್ನು ದಿಕ್ಕುಗೆಡಿಸಿರುವ ಈ ನಮ್ಮ ಕಾಲ ದಲ್ಲಿಯೂ ಸುಂದರಕಾಂಡಪಾರಾಯಣನಿಷ್ಠರು ಇದ್ದಾರೆಂಬುದು ನಮ್ಮ ದೇಶದ ಭವಿಷ್ಯಚ್ಛುಭಕ್ಕೆ ಭರವಸೆಯಾಗಿದೆ.

## ಹನುಮದ್ವಿಲಾಸ

ಕನ್ನಡದಲ್ಲಿ ತಿಪ್ಪಣಾರ್ಯನೆಂಬ ಕವಿ ಸುಂದರಕಾಂಡ ಕಥಾಸಾರವನ್ನು ಹನುಮದ್ವಿಲಾಸವೆಂಬ ಕಾವ್ಯದಲ್ಲಿ ಮನೋಹರವಾಗಿ ರೂಪಗೊಳಿಸಿದ್ದಾನೆ. ಅದರಲ್ಲಿಯ ಪದ್ಯಗಳೂ ಹಾಡುಗಳೂ ಹೃದಯಸ್ಪರ್ಶಿಯಾಗಿವೆ. ಆನಂದ ಭೈರವಿ, ಮಧ್ಯಮಾವತಿ, ಮೋಹನ ಮೊದಲಾದ ಸುಂದರ ರಾಗಗಳಲ್ಲಿ ಆ ಗೀತ ಗಳು ಹಾಡತಕ್ಕುವಾಗಿವೆ. ಕನ್ನಡ ಜನದ ಗಾನಾಭಿರುಚಿ ಅನ್ಯಾನುಕರಣ ವ್ಯಾಮೋಹಕ್ಕೆ ಸಿಕ್ಕುವ ಮುನ್ನ—ಈಗ್ಗೆ ಐವತ್ತರವತ್ತು ವರ್ಷಗಳ ಹಿಂದಿನ ವರೆಗೆ—ಹನುಮದ್ವಿಲಾಸವನ್ನು ಹಾಡುವವರು ವಿರಳರಾಗಿರಲಿಲ್ಲ. ನನ್ನ ಬಂಧು

ವರ್ಗದಲ್ಲಿ ಕೆಲವು ವರ್ಷಗಳ ಹಿಂದಿನವರೆಗೆ ಹನುಮದ್ವಿಲಾಸವು ಪಾರಾಯಣ ಗ್ರಂಥವಾಗಿತ್ತು. ಶನಿವಾರ ಸಂಜೆ ದೇವರಿಗೆ ಮಂಗಳಾರತಿ ಮಾಡಿ ಹನುಮ-ದ್ವಿಲಾಸವನ್ನು ಹಾಡಿ, ಕೇಳಿ, ನೈವೇದ್ಯ ಫಲಾಹಾರದಿಂದ ತೃಪ್ತರಾಗಿ ನೇಮ ದಿಂದಿರುತ್ತಿದ್ದರು. ಅಂಥಾ ಜನ ಈಗ ಕಡಮೆಯಾಗುತ್ತಿದ್ದಾರೆ—ನಮ್ಮ ನವ ನಾಗರಿಕತೆಯ ಮಹಿಮೆಯಿಂದ. ಇದು ಸುಂದರವಲ್ಲ. ಆ ಭಕ್ತಿಶ್ರದ್ಧೆಗಳು ಜೀವನದಲ್ಲಿ ಸುಂದರ.

## ಕೃತಜ್ಞತೆ

ಇನ್ನು ನಾನು ಹೇಳಲು ಉಳಿದಿರುವ ಮಾತು ಸಂತೃಪ್ತಿ ಕೃತಜ್ಞತೆಗಳದು.

ಸುಂದರಕಾಂಡವನ್ನು ಸುಂದರವಾಗಿ—ಬೆಲೆ ಕೊಟ್ಟು ಕೊಳ್ಳುವ ದೃಷ್ಟಿ ಯಿಂದಲೂ ಸುಂದರವಾಗಿ—ಪ್ರಕಟಪಡಿಸಬೇಕೆಂಬ ಉದ್ದೇಶವನ್ನು ಬೆಂಗಳೂರು ನರಸಿಂಹರಾಜ ಕಾಲೊನಿಯ ಶ್ರೀರಾಮಮಂದಿರ ಸಂಘದ ಪರವಾಗಿ ಮಿತ್ರರು ಶ್ರೀ ಡಿ. ಸಿ. ಅನಂತರಾಮಯ್ಯನವರು ತಿಳಿಸಿದಾಗ ನನಗೆ ತುಂಬ ಆನಂದ ವಾಯಿತು. ಇಂಥಾ ಗ್ರಂಥದ ಆವಶ್ಯಕತೆ ಕನ್ನಡ ಜನಕ್ಕೆ ತೀವ್ರವಾಗಿದೆ. ಶ್ರೀರಾಮಮಂದಿರದವರು ಇದಕ್ಕೆ ಮನಸ್ಸುಕೊಟ್ಟದ್ದು ಅಭಿನಂದನೀಯವಾಗಿದೆ. ಶ್ರೀ ಅನಂತರಾಮಯ್ಯನವರು ಗ್ರಂಥದ ಬರಹದ ಪ್ರತಿಯನ್ನು ತಯಾರು ಮಾಡುವುದು, ಕರಡುಪ್ರತಿಗಳನ್ನು ತಿದ್ದುವುದು—ಮೊದಲಾದ ಎಲ್ಲ ಕಾರ್ಯಾಂಶ ಗಳಲ್ಲಿಯೂ ಶ್ರದ್ಧಾಭಕ್ತಿಗಳಿಂದ ಶ್ರಮಪಟ್ಟಿದ್ದಾರೆ.

ಈ ದಿವ್ಯಗ್ರಂಥಕ್ಕೆ ಕನ್ನಡದಲ್ಲಿ ಭಾವಾನುವಾದ ಬರೆದು ಗ್ರಂಥವನ್ನು ಸಂಪಾದಿಸಿಕೊಡುವ ಕಾರ್ಯವನ್ನು ವಿದ್ವಾನ್ ಎನ್. ರಂಗನಾಥಶರ್ಮಾ ಅವರು ವಹಿಸಿಕೊಳ್ಳಬೇಕೆಂಬುದು ಅವರನ್ನು ನಾನು ಬೇಡಿದಾಗ ಅವರು ಒಪ್ಪಿಕೊಂಡದ್ದು ನನಗೆ ಮತ್ತೊಂದು ಆನಂದ. ಶ್ರೀ ರಂಗನಾಥಶರ್ಮರವರು ಸಂಸ್ಕೃತವ್ಯಾಕರಣಶಾಸ್ತ್ರದಲ್ಲಿ ಆಳವೂ ವಿಶಾಲವೂ ಆಗಿ ಪ್ರಮಾಣವತ್ತಾಗಿರುವ ಪಾಂಡಿತ್ಯವನ್ನು ಸಂಪಾದಿಸಿರುವವರು. ಅವರ ಕನ್ನಡಭಾಷಾವಿದ್ವತ್ತೂ ಅಂಥಾದ್ದು. ಸಾಹಿತ್ಯದಲ್ಲಿ ಅವರು ಸಹೃದಯರಾಗಿ ಶೋಧನಶೀಲರಾಗಿ ಕಾವ್ಯಮರ್ಮವನ್ನು ಕಂಡು ತೋರಿಸಬಲ್ಲವರು. ಅವರು ಸದಾಚಾರನಿಷ್ಠರು, ಸರಳರು. ಒಂದು ಮಹಾಕಾವ್ಯದ ಅಂತರಂಗವನ್ನು ಅನುಭವದಿಂದ ತಿಳಿಸ

ಬೇಕಾದರೆ ಯಾವ ಮನಃಪ್ರಸಾದವೂ ತತ್ತ್ವನಿಷ್ಠೆಯೂ ಪ್ರಥಮಸಿದ್ಧತೆಗಳೋ ಆವೆರಡನ್ನೂ ಅವರಲ್ಲಿ ನಾನು ಕಂಡಿದ್ದೇನೆ. ಅವರು ತಮಗೊಪ್ಪಿಸಿದ ಕಾರ್ಯವನ್ನು ಸೊಗಸಾಗುವಂತೆ ನಿರ್ವಹಿಸಿದ್ದಾರೆಂದು ನಾನು ಕೃತಜ್ಞನಾಗಿದ್ದೇನೆ. ಅವರ ಅನುವಾದವನ್ನು ಅನೇಕ ಭಾಗಗಳಲ್ಲಿ ನೋಡಿದ್ದೇನೆ. ಪದಶೈಲಿ ಲಲಿತವಾಗಿ ಕಾಂತಿವೀರ್ಯವಿಶಿಷ್ಟವಾಗಿ ಸುಂದರಕಾಂಡಕ್ಕೆ ಒಪ್ಪುವಂಥ ಶೈಲಿಯಿಂದ ಸುಂದರವಾಗಿದೆ. ಮೂಲದ ಸ್ವಾರಸ್ಯವು ಸಾಧ್ಯವಾದಷ್ಟು ಪೂರ್ಣವಾಗಿ ಕನ್ನಡಕ್ಕೆ ಬಂದಿದೆ. ಸಂಸ್ಕೃತಮೂಲದ ಕಡೆಗೆ ಕಣ್ಣು ತಿರುಗಿಸದೆ ಬರಿಯ ಕನ್ನಡ ವಚನಗ್ರಂಥವನ್ನೇ ಧಾರೆಯಾಗಿ ಓದಿದರೂ ಓದುಗರಿಗೆ ಸಂತೃಪ್ತಿಯಾಗುವಂತಿದೆ. ಕನ್ನಡವನ್ನೋದುತ್ತ ಓದುತ್ತ ನಡುನಡುವೆ ಮೂಲವನ್ನೂ ಅಷ್ಟಿಷ್ಟು ನೋಡುವವರು ಸಂಸ್ಕೃತದ ಪರಿಚಯವನ್ನೂ ಸಂಪಾದಿಸಿಕೊಂಡಂತಾಗುತ್ತದೆ.

ರಾಮಾಯಣಪ್ರಚಾರ ಒಂದು ಪುಣ್ಯಕಾರ್ಯ. ಆ ಪುಣ್ಯವನ್ನು ಶ್ರೀ ರಾಮಮಂದಿರದ ಅಧಿಕಾರಿಗಳು ಸಂಪಾದಿಸಿಕೊಂಡಿದ್ದಾರೆ. ಅವರೊಡನೆ ಹೀಗೆ ಲವಲೇಶವಾಗಿ ಸೇರಿಕೊಳ್ಳುವ ಆವಕಾಶವನ್ನು ಅವರು ನನ್ನ ಮಿತ್ರರು ಶ್ರೀ ಡಿ. ಸಿ. ಅನಂತರಾಮಯ್ಯನವರ ಮುಖಾಂತರ ನನಗೆ ಒದಗಿಸಿಕೊಟ್ಟಿದ್ದಾರೆ. ಶ್ರೀರಾಮಕೀರ್ತಿವಿಸ್ತರಕಾರ್ಯದಲ್ಲಿ ಸೇರಿದವರಿಗೆಲ್ಲ ಶ್ರೀಮದಾಂಜನೇಯ ಸ್ವಾಮಿಯ ಅನುಗ್ರಹವುಂಟೆಂದು ನಾನು ನಂಬಿದ್ದೇನೆ.

ಸರ್ವಲೋಕಶರಣ್ಯಾಯ ಸತ್ಯಧರ್ಮೈಕಮೂರ್ತಯೇ |
ಹನೂಮದ್ದಾತ್ಯತೃಪ್ತಾಯ ಸೀತಾರಾಮಾಯ ಮಂಗಲಮ್ ||

—ಡಿ. ವಿ. ಜಿ.

# ನಿವೇದನೆ

ಒಂದು ಕಾವ್ಯದ ಭಾವವನ್ನು ಇನ್ನೊಂದು ಭಾಷೆಯಲ್ಲಿ ಅನುವಾದಿಸುವುದು ದುಷ್ಕರ. ವಾಲ್ಮೀಕಿಮಹರ್ಷಿಗಳಂತಹ ರಸಸಿದ್ಧ ಕವೀಶ್ವರರ ಮಹಾಕಾವ್ಯದಲ್ಲಿ ಭಾವ ಇದೇ—ಇಷ್ಟೇ ಎಂದು ಹೇಳುವುದು ಸಾಹಸವೇ ಸರಿ. ಅವರ ವಾಗ್ವಿಲಾಸದ ಮರ್ಮವನ್ನು ಸರಿಯಾಗಿ ತಿಳಿಯುವ ಶಕ್ತಿ ನನಗೆ ಇಲ್ಲ. ತಿಳಿದುಕೊಂಡಷ್ಟನ್ನು ವಿವರಿಸಲು, ಶಬ್ದಗಳನ್ನು ಹದವರಿತು ವಾಕ್ಯದಲ್ಲಿ ವಿನ್ಯಾಸ ಮಾಡುವ ಜಾಣ್ಮೆಯೂ ಇಲ್ಲ. ಆದರೂ ಪೂಜ್ಯರಾದ ಶ್ರೀ ಡಿ. ವಿ. ಗುಂಡಪ್ಪನವರ ಆದೇಶಕ್ಕೆ ಕಟ್ಟುಬಿದ್ದು ಈ ಸುಂದರಕಾಂಡದ ಕನ್ನಡ ಅನುವಾದದ ಕಾರ್ಯದಲ್ಲಿ ನಾನು ಕೈಹಾಕಿದೆನು.

ಈ ಅನುವಾದದ ಅನೇಕ ಭಾಗಗಳನ್ನು ಒದಿಹೇಳಿ ಶ್ರೀ ಡಿ. ವಿ. ಜಿ. ಯವರಿಂದ ಯುಕ್ತವಾದ ಮಾರ್ಗದರ್ಶನವನ್ನು ಪಡೆದಿದ್ದೇನೆ. ಕ್ಲಿಷ್ಟವಾದ ಸಂದರ್ಭಗಳಲ್ಲಿ ಅನುವಾದಿಸಬೇಕಾದ ರೀತಿನೀತಿಗಳನ್ನು ತಿಳಿಯಹೇಳಿ ಅವರು ನನಗೆ ದಾರಿತೋರಿಸಿದ್ದಾರೆ. ಅವರ ಆಶೀರ್ವಾದ ಪ್ರೋತ್ಸಾಹಗಳಿಲ್ಲದೆ ನನ್ನಿಂದ ಈ ಕಾರ್ಯ ಸಾಧ್ಯವಾಗುತ್ತಿರಲಿಲ್ಲ. ಈ ಕಾರ್ಯವನ್ನು ನನ್ನಿಂದ ಸಾಗಿಸಿಕೊಟ್ಟಿದ್ದಕ್ಕಾಗಿ ನಾನು ಶ್ರೀ ಡಿ. ವಿ. ಗುಂಡಪ್ಪನವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ನರಸಿಂಹರಾಜ ಕಾಲೊನಿ ಶ್ರೀರಾಮಮಂದಿರದ ಅಸೋಸಿಯೇಷನ್ನಿನ ಅಧ್ಯಕ್ಷರಾದ ಶ್ರೀ ಹೆಚ್. ಎಸ್. ಕೃಷ್ಣಸ್ವಾಮಿಯವರೂ, ಅಸೋಸಿಯೇಷನ್ನಿನ ಎಲ್ಲ ಸದಸ್ಯರೂ ಈ ಕಾರ್ಯಕ್ಕೆ ಪ್ರೋತ್ಸಾಹವನ್ನೂ ಬೇಕಾದ ಸೌಕರ್ಯವನ್ನೂ ನನಗೆ ಕಲ್ಪಿಸಿಕೊಟ್ಟಿದ್ದಾರೆ. ಉಪಾಧ್ಯಕ್ಷರಾದ ಶ್ರೀ ಡಿ. ಸಿ. ಅನಂತರಾಮಯ್ಯನವರು ಸುಂದರಕಾಂಡದ ಶ್ಲೋಕಗಳನ್ನು ಕನ್ನಡ ಲಿಪಿಯಲ್ಲಿ ಬರೆದು ಮುದ್ರಣಕ್ಕೆ ಸಿದ್ಧಪಡಿಸಿಕೊಟ್ಟಿದ್ದಾರೆ. ಶ್ರೀ ಡಿ. ಸಿ. ಅನಂತರಾಮಯ್ಯನವರು ಮತ್ತು ಕಾರ್ಯದರ್ಶಿಗಳಾದ ಶ್ರೀ ಎಸ್. ಎನ್. ಮೂರ್ತಿಗಳು ಈ ಗ್ರಂಥದ ಮುದ್ರಣ ಮತ್ತು ಪ್ರಕಟನೆಗಳಿಗಾಗಿ ಶ್ರದ್ಧಾಸಕ್ತಿಗಳಿಂದ ವಿಶೇಷವಾಗಿ ದುಡಿದಿದ್ದಾರೆ. ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಶ್ರೀ ಎನ್. ವೆಂಕಟಾಚಲಪತಿಗಳೂ ನನಗೆ ಅನೇಕ ವಿಧದಲ್ಲಿ ಸಹಾಯಮಾಡಿದ್ದಾರೆ. ಇವರೆಲ್ಲರ ಉಪಕಾರವನ್ನೂ ನಾನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.

ಈ ಸುಂದರಕಾಂಡವನ್ನು ಕನ್ನಡಕ್ಕೆ ಅನುವಾದಿಸುವಾಗ ಮಹಾ ಮಹೋಪಾಧ್ಯಾಯ ಶ್ರೀ ಎಸ್. ಕುಪ್ಪುಸ್ವಾಮಿ ಶಾಸ್ತ್ರಿಗಳಿಂದ ಕೂಡಿದ ಸಮಿತಿಯು ಪರಿಷ್ಕರಿಸಿ ಮದ್ರಾಸಿನಿಂದ ಪ್ರಕಟಿಸಿರುವ ಶ್ರೀಮದ್ರಾಮಾಯಣ ವನ್ನು ಆದರ್ಶವಾಗಿ ಇಟ್ಟುಕೊಳ್ಳಲಾಗಿದೆ. ಪ್ರಸಿದ್ಧ ವ್ಯಾಖ್ಯಾನಗಳಾದ ತಿಲಕ, ಗೋವಿಂದರಾಜೀಯ, ಶಿರೋಮಣಿಗಳಿಂದಲೂ ಶ್ರೀ ದೇವಶಿಖಾಮಣಿ ಅಳಸಿಂಗರಾಚಾರ್ಯರ ಕನ್ನಡ ರಾಮಾಯಣದಿಂದಲೂ ನಾನು ಪ್ರಯೋಜನ ವನ್ನು ಪಡೆದಿದ್ದೇನೆ. ನನಗೆ ಸಮಂಜಸವೆನಿಸಿದ ತಾತ್ಪರ್ಯವನ್ನು ಈ ಎಲ್ಲಾ ಗ್ರಂಥಗಳಿಂದಲೂ ಗ್ರಹಿಸಿದ್ದೇನೆ. ಕೆಲವು ಕಡೆ ಇವೆಲ್ಲವನ್ನೂ ಮೀರಿ ನನಗೆ ಸರಿಯೆನಿಸಿದ ತಾತ್ಪರ್ಯವನ್ನು ಬರೆದಿದ್ದೇನೆ.

ಸಂಸ್ಕೃತಮೂಲವು ಯಾರಿಗೆ ಅರ್ಥವಾಗದೋ, ಅವರಿಗೋಸ್ಕರ ಈ ಅನುವಾದ. ಇದರಲ್ಲಿ ಕಥೆಯ ಓಟಕ್ಕೆ ಅಡ್ಡಿಯಾಗದಂತೆ ಸಾಧ್ಯವಾದಷ್ಟು ಪ್ರಯತ್ನಮಾಡಿದೆ. ಕನ್ನಡ ಭಾಷೆಯ ಶೈಲಿಯೇ ಬೇರೆ. ಆದ್ದರಿಂದ ಅನುವಾದದ ಶೈಲಿಯು ಮೂಲದ ಕ್ರಮವನ್ನು ಅನುಸರಿಸಿಲ್ಲ. ಕರ್ತರಿ ಕರ್ಮಣಿ ಪ್ರಯೋಗ ಗಳಲ್ಲಿ ಮೂಲಕ್ಕೂ ಅನುವಾದಕ್ಕೂ ಭೇದ ಉಂಟು. ಹೆಚ್ಚಿನ ಅರ್ಥಪುಷ್ಟಿ ಇಲ್ಲವೆಂದು ನಾನು ಭಾವಿಸಿರುವ ಕೆಲವು ವಿಶೇಷಣಗಳನ್ನು ಅನುವಾದದಲ್ಲಿ ಸೇರಿಸಿಲ್ಲ. ಒಟ್ಟಿನಲ್ಲಿ ಇದು ತಾತ್ಪರ್ಯದ ಅನುವಾದ; ಪರಿವರ್ತನೆಯಲ್ಲ. ಯಾವ ಶ್ಲೋಕಗಳ ಅನುವಾದವೆಂಬುದನ್ನು ಅದರ ಮುಂದೆ ಕಂಸಗಳಲ್ಲಿ ತೋರಿ ಸಿದೆ. ವಾಕ್ಯವು ಅಪೂರ್ಣವಾಗುತ್ತದೆಯೆಂಬ ದೃಷ್ಟಿಯಿಂದ ಕೆಲವು ಕಡೆ ಸಂಖ್ಯಾನಿಯಮವನ್ನು ಪಾಲಿಸಿಲ್ಲ. ಅಲ್ಲಿ ಅನುವಾದವು ಮೂಲದ ಅರ್ಧ ಶ್ಲೋಕದಷ್ಟು ಹಿಂದಿನದೋ ಅಥವಾ ಮುಂದಿನದೋ ಆಗಿರಬಹುದು.

ಇದು ಸುಂದರಕಾಂಡವೆಂದು ಪ್ರಸಿದ್ಧವಾಗಲು ಕಾರಣವನ್ನು ಅನೇಕ ವಿಧವಾಗಿ ಊಹಿಸುತ್ತಾರೆ:

೧. ರಾಮಾಯಣ ಸುಂದರವಾದ ಕಾವ್ಯ. ಅದರಲ್ಲಿಯೂ ಈ ಕಾಂಡವು ಬಹು ಸುಂದರವಾಗಿದೆ. ಸಮುದ್ರಲಂಘನ, ರಾವಣನ ಅಂತಃಪುರ, ಸೀತಾ ದೇವಿಯ ವಿರಹಾವಸ್ಥೆ, ಹನುಮಂತನಿಗೆ ಉದಯಿಸಿದ ವಿವಿಧ ಭಾವನೆಗಳು, ದೇವಿಯ ಸಂಭಾಷಣೆ, ಅಂಗುಲೀಯಕಪ್ರದಾನ, ಚೂಡಾಮಣಿಯ ಅರ್ಪಣೆ, ಈ ಎಲ್ಲಾ ಸನ್ನಿವೇಶಗಳಲ್ಲಿಯೂ ಹನುಮಂತನ ಧೀರೋದಾತ್ತವಾದ ವರ್ತನೆ–

ಇವು ಅತ್ಯಂತ ರಮಣೀಯವಾಗಿವೆ. ಶ್ರೀ ಡಿ.ವಿ.ಜಿ.ಯವರು ಮುನ್ನುಡಿಯಲ್ಲಿ ನುಡಿದಂತೆ 'ಸುಂದರೇ ಸುಂದರಃ ಸೋಽಯಮುಂಜನಾನಂದನೋತ್ಸವಃ'. ಆದ್ದರಿಂದ ಸುಂದರಕಾಂಡ ಎಂಬುದು ಅನ್ವರ್ಥವಾಗಿದೆ.

೨. ಸುಂದರಕಾಂಡದಲ್ಲಿ ಹನುಮಂತನೇ ಮುಖ್ಯಪಾತ್ರ. ಈ ಕಾಂಡವನ್ನು ಹನುಮದ್ವಿಜಯಕಾಂಡವೆಂದು ಪುರಾಣಗಳಲ್ಲಿ ಕರೆದಿದ್ದಾರೆ. ಹನುಮಂತನಿಗೆ ಸುಂದರ ಎಂಬ ಹೆಸರುಂಟು. ಶಬ್ದಕಲ್ಪದ್ರುಮ ಎಂಬ ನಿಘಂಟಿನಲ್ಲಿ 'ಸುಂದರಃ ಕಪಿಮುಖ್ಯೇಸ್ಯಾತ್ ಕಾಮೇ ಚ ಮಣಿಸೂರ್ಯಯೋಃ' ಎಂದು ಉದಾಹರಿಸಿದೆ. ಆಂಜನೇಯಾಷ್ಟೋತ್ತರಶತನಾಮಾವಳಿಯಲ್ಲಿ 'ದ್ವಿಭುಜಃ ಸುಂದರಃ ಶೂರಃ ಶಿಷ್ಟೇಷ್ಟಃ ಶಿಷ್ಟಪಾಲಕಃ' ಎಂದು ಪಾಠವಿದೆ. ಆದ್ದರಿಂದ ಹನುಮತ್-ಕಾಂಡ ಎಂಬ ಅರ್ಥದಲ್ಲಿ ಸುಂದರಕಾಂಡ ಎಂದು ಪ್ರಸಿದ್ಧಿಯಾಗಿರಬಹುದು.

೩. ಸಂಖ್ಯೆಗಳನ್ನು ಸೂಚಿಸುವುದಕ್ಕೆ ಕಟಪಯಾದಿಸೂತ್ರಪದ್ಧತಿ ಎಂಬ ಒಂದು ಕ್ರಮವಿದೆ. ಅದರ ಪ್ರಕಾರ ಸುಂದರಶಬ್ದವು ೭೦೮೨ ಎಂಬ ಸಂಖ್ಯೆಯನ್ನು ಸೂಚಿಸುತ್ತದೆ. ಅನಂತರ 'ಅಂಕಾನಾಂ ವಾಮತೋ ಗತಿಃ' ಎಂಬ ವ್ಯವಸ್ಥೆಯಿಂದ ಸಂಖ್ಯೆಯು ೨೮೦೭ ಎಂದು ನಿರ್ಣೀತವಾಗುತ್ತದೆ. ಇದು ಸುಂದರಕಾಂಡದ ಶ್ಲೋಕಗಳ ಸಂಖ್ಯೆ. ಈಗ ಸುಮಾರು ೬೦ ಶ್ಲೋಕಗಳು ಹೆಚ್ಚಾಗಿ ದೊರೆಯುತ್ತವೆ. ಅವು ಪ್ರಕ್ಷಿಪ್ತವಾದವುಗಳೆಂದು ಹೇಳಬೇಕು.

ಆದರೆ ಬಾಲಕಾಂಡ ಮೊದಲಾದ ಇತರ ಕಾಂಡಗಳಲ್ಲಿ ಈ ಮೂರನೆಯ ಊಹೆಯಂತೆ ಸಂಖ್ಯಾ ಸೂಚನೆಯು ಹೊಂದುವುದಿಲ್ಲ. ವಾಲ್ಮೀಕಿಮುನಿಗಳು ಹನುಮಂತನನ್ನು ಸುಂದರನೆಂದು ಕರೆದಿಲ್ಲ. ಆದ್ದರಿಂದ ಮೊದಲನೆಯ ಊಹೆಯೇ ಸಮಂಜಸವೆಂದು ತೋರುತ್ತದೆ.

ರಾಮಾಯಣದಿಂದ ಆಗುವ ಬಹುವಿಧ ಪ್ರಯೋಜನಗಳಲ್ಲಿ ಇವು ಕೆಲವು :

೧. ರಾಮಾಯಣವು ಉತ್ತಮೋತ್ತಮವಾದ ಮಹಾಕಾವ್ಯ. ಇದರಲ್ಲಿ ಇರುವ ರಸಮಯಸಂದರ್ಭಗಳು ಮನುಷ್ಯನನ್ನು ಭಾವನಾಪ್ರಪಂಚಕ್ಕೆ ಕರೆದೊಯ್ದು ತಲ್ಲೀನತೆಯನ್ನುಂಟುಮಾಡಿ ಆನಂದದಲ್ಲಿ ಮುಳುಗಿಸುತ್ತವೆ. ಇದೇ ಕಾವ್ಯಾನಂದ. ಇದು ಲೌಕಿಕಸುಖವನ್ನೆಲ್ಲಾ ಮೀರಿಸಿದ್ದು. ಈ ಆನಂದವು ನಮಗೆ ಅನಾಯಾಸವಾಗಿ ದೊರೆಯುತ್ತದೆ.

೨. ವಾಲ್ಮೀಕಿ ಮುನಿಗಳು ಚಿತ್ರಿಸಿದ ನೀತಿ ನಿಲುವು ನಡವಳಿಕೆಗಳು ನಮ್ಮ ಅಂತರಂಗದ ಮೇಲೆ ಮಹತ್ತರವಾದ ಪ್ರಭಾವವನ್ನು ಬೀರುತ್ತವೆ. ಧರ್ಮಬೋಧೆ, ಹಿತೋಪದೇಶಗಳು ಸಕ್ಕರೆಯಲ್ಲಿ ಹುದುಗಿಸಿದ ಔಷಧದಂತೆ ಅಂತರಂಗವನ್ನು ಪ್ರವೇಶಿಸಿ ಕಾಮಕ್ರೋಧಾದಿ ಮನೋರೋಗಗಳನ್ನು ಗುಣ ಪಡಿಸುತ್ತವೆ. ನೂರಾರು ಶಾಸ್ತ್ರಗ್ರಂಥಗಳಿಂದ, ಸಾವಿರಾರು ಉಪನ್ಯಾಸಗಳಿಂದ, ಗುರುಹಿರಿಯರ ಅನೇಕ ಕಟ್ಟಾಜ್ಞೆಗಳಿಂದ ಆಗದ ಪ್ರಯೋಜನವು ದೊರಕಿ ನಮಗೆ ಅರಿವಿಲ್ಲದಂತೆ ನಮ್ಮ ಅಂತಃಕರಣವು ಪರಿಶುದ್ಧವಾಗುತ್ತ ಹೋಗುವುದು.

೩. ರಾಮಾಯಣದ ಪಾರಾಯಣದಿಂದ ನಾನಾ ಬಗೆಯ ಸಾಂಸಾರಿಕ ಕಷ್ಟಗಳು ನೀಗುತ್ತವೆಯೆಂದೂ ಭಗವಂತನ ಅನುಗ್ರಹಕ್ಕೆ ಪಾತ್ರರಾಗು ತ್ತೇವೆಂದೂ ಆಸ್ತಿಕರು ದೃಢವಾಗಿ ನಂಬಿದ್ದಾರೆ.

ಸುಂದರಕಾಂಡದ ಈ ಕನ್ನಡ ಅನುವಾದವು ಮೂಲಗ್ರಂಥದಲ್ಲಿ ಶ್ರದ್ಧಾ ಭಕ್ತಿಗಳಿಂದ ಹೆಚ್ಚಿಸಲು ಸಹಾಯಕವಾದರೆ ನಾನು ಕೃತಾರ್ಥನೆಂದು ಭಾವಿಸು ತ್ತೇನೆ.

ನರಸಿಂಹರಾಜ ಕಾಲೊನಿ ಶ್ರೀರಾಮಮಂದಿರ ಅಸೋಸಿಯೇಷನ್ನಿನವರು ಆದರ್ಶವೂ ಸ್ತುತ್ಯವೂ ಆದ ಪ್ರಕಟನ ಕಾರ್ಯವನ್ನು ಕೈಗೊಂಡು ಸುಂದರಕಾಂಡ ವನ್ನು ಕನ್ನಡಿಗರಿಗೆ ಒದಗಿಸಿಕೊಟ್ಟಿದ್ದಾರೆ. ಮುಂದೆ ಶ್ರೀಮದ್ರಾಮಾಯಣದ ಇತರ ಕಾಂಡಗಳನ್ನು ಪ್ರಕಟಿಸಲು ಅವರಿಗೆ ಮಹಾಜನರಿಂದ ತಕ್ಕ ಪ್ರೋತ್ಸಾಹವೂ ಸೌಕರ್ಯವೂ ದೊರಕಲೆಂದೂ ಶ್ರೀಮದ್ರಾಮಾಯಣವನ್ನು ಸಂಪೂರ್ಣವಾಗಿ ಪ್ರಕಟಿಸಿ ಶ್ರೀರಾಮಚಂದ್ರನ ಅನುಗ್ರಹಕ್ಕೆ ಪಾತ್ರರಾಗಲೆಂದೂ ಹಾರೈಸುತ್ತೇನೆ.

ಬೆಂಗಳೂರು
25–12–1964

ಎನ್. ರಂಗನಾಥಶರ್ಮಾ

# ಅನುಕ್ರಮಣಿಕೆ

---

## ರಾಮಾಯಣ ಪ್ರಕಾಶನ ಸಮಿತಿ ಸದಸ್ಯರು



ಹೃದಯಾಬ್ಜೇ ಸ್ಥಿರಭಾವಂ ಮಂಜುಲರೂಪಂ ಮಹೋಜ್ಜ್ವಲಂ ಧಾಮ ।
ಹಸ್ತಾಬ್ಜೇ ಪಶ್ಯಂತಂ ಧನ್ಯಂ ಕಲಯೇಽಞ್ಜನಾತನಯಮ್ ॥

|| ಶ್ರೀಃ ||

# || ಶ್ರೀಮದ್ವಾಲ್ಮೀಕಿ ರಾಮಾಯಣಮ್ ||

## ಸುಂದರಕಾಂಡಃ

### ಪ್ರಥಮಃ ಸರ್ಗಃ

#### ಸಾಗರಲಂಘನಮ್

ತತೋ ರಾವಣನೀತಾಯಾಃ ಸೀತಾಯಾಃ ಶತ್ರುಕರ್ಶನಃ ।
ಇಯೇಷ ಪದಮನ್ವೇಷ್ಟುಂ ಚಾರಣಾಚರಿತೇ ಪಥಿ ॥ ೧

ದುಷ್ಕರಂ ನಿಷ್ಪ್ರತಿದ್ವಂದ್ವಂ ಚಿಕೀರ್ಷನ್ ಕರ್ಮ ವಾನರಃ ।
ಸಮುದಗ್ರಶಿರೋಗ್ರೀವೋ ಗವಾಂ ಪತಿರಿವಾಬಭೌ ॥ ೨

ಅಥ ವೈದೂರ್ಯವರ್ಣೇಷು ಶಾದ್ವಲೇಷು ಮಹಾಬಲಃ ।
ಧೀರಃ ಸಲಿಲಕಲ್ಪೇಷು ವಿಚಚಾರ ಯಥಾಸುಖಮ್ ॥ ೩

ದ್ವಿಜಾನ್ ವಿತ್ರಾಸಯನ್ ಧೀಮಾನುರಸಾ ಪಾದಪಾನ್ ಹರನ್ ।
ಮೃಗಾಂಶ್ಚ ಸುಬಹೂನ್ನಿಘ್ನನ್ ಪ್ರವೃದ್ಧ ಇವ ಕೇಸರೀ ॥ ೪

ನೀಲಲೋಹಿತಮಾಂಜಿಷ್ಠಪತ್ರವರ್ಣೈಃ ಸಿತಾಸಿತೈಃ ।
ಸ್ವಭಾವವಿಹಿತೈಶ್ಚಿತ್ರೈರ್ಧಾತುಭಿಃ ಸಮಲಂಕೃತಮ್ ॥ ೫

ಕಾಮರೂಪಿಭಿರಾವಿಷ್ಟಮಭೀಕ್ಷ್ಣಂ ಸಪರಿಚ್ಛದೈಃ ।
ಯಕ್ಷಕಿನ್ನರಗಂಧರ್ವೈರ್ದೇವಕಲ್ಪೈಶ್ಚ ಪನ್ನಗೈಃ ॥ ೬

ಸ ತಸ್ಯ ಗಿರಿವರ್ಯಸ್ಯ ತಲೇ ನಾಗವರಾಯುತೇ ।
ತಿಷ್ಠನ್ ಕಪಿವರಸ್ತತ್ರ ಹ್ರದೇ ನಾಗ ಇವಾಬಭೌ ॥ ೭

ಸ ಸೂರ್ಯಾಯ ಮಹೇಂದ್ರಾಯ ಪವನಾಯ ಸ್ವಯಂಭುವೇ ।
ಭೂತೇಭ್ಯಶ್ಚಾಂಜಲಿಂ ಕೃತ್ವಾ ಚಕಾರ ಗಮನೇ ಮತಿಮ್ ॥ ೮

ಅಂಜಲಿಂ ಪ್ರಾಙ್ಮುಖಃ ಕುರ್ವನ್ ಪವನಾಯಾತ್ಮಯೋನಯೇ ।
ತತೋ ಹಿ ವವೃಧೇ ಗಂತುಂ ದಕ್ಷಿಣೋ ದಕ್ಷಿಣಾಂ ದಿಶಮ್ ॥ ೯

ಪ್ಲವಂಗಪ್ರವರೈರ್ದೃಷ್ಟಃ ಪ್ಲವನೇ ಕೃತನಿಶ್ಚಯಃ ।
ವವೃಧೇ ರಾಮವೃದ್ಧ್ಯರ್ಥಂ ಸಮುದ್ರ ಇವ ಪರ್ವಸು ॥ ೧೦

ನಿಷ್ಪ್ರಮಾಣಶರೀರಃ ಸನ್ ಲಿಲಂಘಯಿಷುರರ್ಣವಮ್ ।
ಬಾಹುಭ್ಯಾಂ ಪೀಡಯಾಮಾಸ ಚರಣಾಭ್ಯಾಂ ಚ ಪರ್ವತಮ್ ॥ ೧೧

ಸ ಚಚಾಲಾಚಲಶ್ಚಾಪಿ ಮುಹೂರ್ತಂ ಕಪಿಪೀಡಿತಃ ।
ತರೂಣಾಂ ಪುಷ್ಪಿತಾಗ್ರಾಣಾಂ ಸರ್ವಂ ಪುಷ್ಪಮಶಾತಯತ್ ॥ ೧೨

ತೇನ ಪಾದಪಮುಕ್ತೇನ ಪುಷ್ಪೌಘೇಣ ಸುಗಂಧಿನಾ ।
ಸರ್ವತಃ ಸಂವೃತಃ ಶೈಲೋ ಬಭೌ ಪುಷ್ಪಮಯೋ ಯಥಾ ॥ ೧೩

ತೇನ ಚೋತ್ತಮವೀರ್ಯೇಣ ಪೀಡ್ಯಮಾನಃ ಸ ಪರ್ವತಃ ।
ಸಲಿಲಂ ಸಂಪ್ರಸುಸ್ರಾವ ಮದಂ ಮತ್ತ ಇವ ದ್ವಿಪಃ ॥ ೧೪

ಪೀಡ್ಯಮಾನಸ್ತು ಬಲಿನಾ ಮಹೇಂದ್ರಸ್ತೇನ ಪರ್ವತಃ ।
ರೀತೀರ್ನಿರ್ವರ್ತಯಾಮಾಸ ಕಾಂಚನಾಂಜನರಾಜತೀಃ ॥ ೧೫

ಮುಮೋಚ ಚ ಶಿಲಾಃ ಶೈಲೋ ವಿಶಾಲಾಃ ಸಮನಃಶಿಲಾಃ ।
ಮಧ್ಯಮೇನಾರ್ಚಿಷಾ ಜುಷ್ಟೋ ಧೂಮರಾಜೀರಿವಾನಲಃ ॥ ೧೬

ಗಿರಿಣಾ ಪೀಡ್ಯಮಾನೇನ ಪೀಡ್ಯಮಾನಾನಿ ಸರ್ವತಃ ।
ಗುಹಾವಿಷ್ಟಾನಿ ಭೂತಾನಿ ವಿನೇದುರ್ವಿಕೃತೈಃ ಸ್ವರೈಃ ॥ ೧೭

ಸ ಮಹಾಸತ್ತ್ವಸಂನಾದಃ ಶೈಲಪೀಡಾನಿಮಿತ್ತಜಃ ।
ಪೃಥಿವೀಂ ಪೂರಯಾಮಾಸ ದಿಶಶ್ಚೋಪವನಾನಿ ಚ ॥ ೧೮

ಶಿರೋಭಿಃ ಪೃಥುಭಿಃ ಸರ್ಪಾ ವ್ಯಕ್ತಸ್ವಸ್ತಿಕಲಕ್ಷಣೈಃ ।
ವಮಂತಃ ಪಾವಕಂ ಘೋರಂ ದದಂಶುರ್ದಶನೈಃ ಶಿಲಾಃ ॥ ೧೯

ತಾಸ್ತದಾ ಸವಿಷೈರ್ದಷ್ಟಾಃ ಕುಪಿತೈಸ್ತೈರ್ಮಹಾಶಿಲಾಃ ।
ಜಜ್ವಲುಃ ಪಾವಕೋದ್ದೀಪ್ತಾ ಬಿಭಿದುಶ್ಚ ಸಹಸ್ರಧಾ ॥ ೨೦

ಯಾನಿ ಚೌಷಧಜಾಲಾನಿ ತಸ್ಮಿನ್ ಜಾತಾನಿ ಪರ್ವತೇ ।
ವಿಷಘ್ನಾನ್ಯಪಿ ನಾಗಾನಾಂ ನ ಶೇಕುಃ ಶಮಿತುಂ ವಿಷಮ್ ॥ ೨೧

ಭಿದ್ಯತೇಽಯಂ ಗಿರಿರ್ಭೂತೈರಿತಿ ಮತ್ವಾ ತಪಸ್ವಿನಃ ।
ತ್ರಸ್ತಾ ವಿದ್ಯಾಧರಾಸ್ತಸ್ಮಾದುತ್ಪೇತುಃ ಸ್ತ್ರೀಗಣೈಃ ಸಹ ॥ ೨೨

ಪಾನಭೂಮಿಗತಂ ಹಿತ್ವಾ ಹೈಮಮಾಸವಭಾಜನಮ್ ।
ಪಾತ್ರಾಣಿ ಚ ಮಹಾರ್ಹಾಣಿ ಕರಕಾಂಶ್ಚ ಹಿರಣ್ಮಯಾನ್ ॥ ೨೩

ಲೇಹ್ಯಾನುಚ್ಚಾವಚಾನ್ ಭಕ್ಷ್ಯಾನ್ ಮಾಂಸಾನಿ ವಿವಿಧಾನಿ ಚ ।
ಆರ್ಷಭಾಣಿ ಚ ಚರ್ಮಾಣಿ ಖಡ್ಗಾಂಶ್ಚ ಕನಕತ್ಸರೂನ್ ॥ ೨೪

ಕೃತಕಂಠಗುಣಾಃ ಕ್ಷೀಬಾ ರಕ್ತಮಾಲ್ಯಾನುಲೇಪನಾಃ ।
ರಕ್ತಾಕ್ಷಾಃ ಪುಷ್ಕರಾಕ್ಷಾಶ್ಚ ಗಗನಂ ಪ್ರತಿಪೇದಿರೇ ॥ ೨೫

ಹಾರನೂಪುರಕೇಯೂರಪಾರಿಹಾರ್ಯಧರಾಃ ಸ್ತ್ರಿಯಃ ।
ವಿಸ್ಮಿತಾಃ ಸಸ್ಮಿತಾಸ್ತಸ್ಥುರಾಕಾಶೇ ರಮಣೈಃ ಸಹ ॥ ೨೬

ದರ್ಶಯಂತೋ ಮಹಾವಿದ್ಯಾಂ ವಿದ್ಯಾಧರಮಹರ್ಷಯಃ ।
ಸಪ್ರಿಯಾಸ್ತಸ್ಥುರಾಕಾಶೇ ವೀಕ್ಷಾಂಚಕ್ರುಶ್ಚ ಪರ್ವತಮ್ ॥ ೨೭

ಶುಶ್ರುವುಶ್ಚ ತದಾ ಶಬ್ದಮೃಷೀಣಾಂ ಭಾವಿತಾತ್ಮನಾಮ್ ।
ಚಾರಣಾನಾಂ ಚ ಸಿದ್ಧಾನಾಂ ಸ್ಥಿತಾನಾಂ ವಿಮಲೇಽಂಬರೇ ॥ ೨೮

ಏಷ ಪರ್ವತಸಂಕಾಶೋ ಹನೂಮಾನ್ ಮಾರುತಾತ್ಮಜಃ ।
ತಿತೀರ್ಷತಿ ಮಹಾವೇಗಃ ಸಾಗರಂ ಮಕರಾಲಯಮ್ ॥ ೨೯

ರಾಮಾರ್ಥಂ ವಾನರಾರ್ಥಂ ಚ ಚಿಕೀರ್ಷನ್ ಕರ್ಮ ದುಷ್ಕರಮ್ ।
ಸಮುದ್ರಸ್ಯ ಪರಂ ಪಾರಂ ದುಷ್ಪ್ರಾಪಂ ಪ್ರಾಪ್ತುಮಿಚ್ಛತಿ ॥ ೩೦

ಇತಿ ವಿದ್ಯಾಧರಾಃ ಶ್ರುತ್ವಾ ವಚಸ್ತೇಷಾಂ ತಪಸ್ವಿನಾಮ್ ।
ತಮಪ್ರಮೇಯಂ ದದೃಶುಃ ಪರ್ವತೇ ವಾನರರ್ಷಭಮ್ ॥ ೩೧

ದುಧುವೇ ಚ ಸ ರೋಮಾಣಿ ಚಕಂಪೇ ಚಾಚಲೋಪಮಃ ।
ನನಾದ ಸುಮಹಾನಾದಂ ಸ ಮಹಾನಿವ ತೋಯದಃ ॥ ೩೨

ಆನುಪೂರ್ವ್ಯೇಣ ವೃತ್ತಂ ಚ ಲಾಂಗೂಲಂ ರೋಮಭಿಶ್ಚಿತಮ್ ।
ಉತ್ಪತಿಷ್ಯನ್ ವಿಚಿಕ್ಷೇಪ ಪಕ್ಷಿರಾಜ ಇವೋರಗಮ್ ॥ ೩೩

ತಸ್ಯ ಲಾಂಗೂಲಮಾವಿದ್ಧಮಾತ್ತವೇಗಸ್ಯ ಪೃಷ್ಠತಃ ।
ದದೃಶೇ ಗರುಡೇನೇವ ಹ್ರಿಯಮಾಣೋ ಮಹೋರಗಃ ॥ ೩೪

ಬಾಹೂ ಸಂಸ್ತಂಭಯಾಮಾಸ ಮಹಾಪರಿಘಸನ್ನಿಭೌ ।
ಸಸಾದ ಚ ಕಪಿಃ ಕಟ್ಯಾಂ ಚರಣೌ ಸಂಚುಕೋಚ ಚ ॥ ೩೫

ಸಂಹೃತ್ಯ ಚ ಭುಜೌ ಶ್ರೀಮಾಂಸ್ತಥೈವ ಚ ಶಿರೋಧರಾಮ್ ।
ತೇಜಃ ಸತ್ತ್ವಂ ತಥಾ ವೀರ್ಯಮಾವಿವೇಶ ಸ ವೀರ್ಯವಾನ್ ॥

ಮಾರ್ಗಮಾಲೋಕಯನ್ ದೂರಾದೂರ್ಧ್ವಂ ಪ್ರಣಿಹಿತೇಕ್ಷಣಃ ।
ರುರೋಧ ಹೃದಯೇ ಪ್ರಾಣಾನಾಕಾಶಮವಲೋಕಯನ್ ॥ ೩೭

ಪದ್ಭ್ಯಾಂ ದೃಢಮವಸ್ಥಾನಂ ಕೃತ್ವಾ ಸ ಕಪಿಕುಂಜರಃ ।
ನಿಕುಂಚ್ಯ ಕರ್ಣೌ ಹನುಮಾನುತ್ಪತಿಷ್ಯನ್ ಮಹಾಬಲಃ ॥ ೩೮

ವಾನರಾನ್ ವಾನರಶ್ರೇಷ್ಠ ಇದಂ ವಚನಮಬ್ರವೀತ್ ।
ಯಥಾ ರಾಘವನಿರ್ಮುಕ್ತಃ ಶರಃ ಶ್ವಸನವಿಕ್ರಮಃ ॥ ೩೯

ಗಚ್ಛೇತ್ತದ್ವದ್ಗಮಿಷ್ಯಾಮಿ ಲಂಕಾಂ ರಾವಣಪಾಲಿತಾಮ್ ।
ನ ಹಿ ದ್ರಕ್ಷ್ಯಾಮಿ ಯದಿ ತಾಂ ಲಂಕಾಯಾಂ ಜನಕಾತ್ಮಜಾಮ್ ॥

ಅನೇನೈವ ಹಿ ವೇಗೇನ ಗಮಿಷ್ಯಾಮಿ ಸುರಾಲಯಮ್ ।
ಯದಿ ವಾ ತ್ರಿದಿವೇ ಸೀತಾಂ ನ ದ್ರಕ್ಷ್ಯಾಮಿ ಕೃತಶ್ರಮಃ ॥ ೪೧

ಬದ್ಧ್ವಾ ರಾಕ್ಷಸರಾಜಾನಮಾನಯಿಷ್ಯಾಮಿ ರಾವಣಮ್ ।
ಸರ್ವಥಾ ಕೃತಕಾರ್ಯೋಽಹಮೇಷ್ಯಾಮಿ ಸಹ ಸೀತಯಾ ॥ ೪೨

ಆನಯಿಷ್ಯಾಮಿ ವಾ ಲಂಕಾಂ ಸಮುತ್ಪಾಟ್ಯ ಸರಾವಣಾಮ್ ।
ಏವಮುಕ್ತ್ವಾ ತು ಹನುಮಾನ್ ವಾನರಾನ್ ವಾನರೋತ್ತಮಃ ॥

ಉತ್ಪಪಾತಾಥ ವೇಗೇನ ವೇಗವಾನವಿಚಾರಯನ್ ।
ಸುಪರ್ಣಮಿವ ಚಾತ್ಮಾನಂ ಮೇನೇ ಸ ಕಪಿಕುಂಜರಃ ॥ ೪೪

ಸಮುತ್ಪತತಿ ತಸ್ಮಿಂಸ್ತು ವೇಗಾತ್ತೇ ನಗರೋಹಿಣಃ |
ಸಂಹೃತ್ಯ ವಿಟಪಾನ್ ಸರ್ವಾನ್ ಸಮುತ್ಪೇತುಃ ಸಮಂತತಃ || ೪೫

ಸ ಮತ್ತಕೋಯಷ್ಟಿಭಕಾನ್ ಪಾದಪಾನ್ ಪುಷ್ಪಶಾಲಿನಃ |
ಉದ್ವಹನ್ನೂರುವೇಗೇನ ಜಗಾಮ ವಿಮಲೇಽಂಬರೇ || ೪೬

ಊರುವೇಗೋದ್ಧತಾ ವೃಕ್ಷಾ ಮುಹೂರ್ತಂ ಕಪಿಮನ್ವಯುಃ |
ಪ್ರಸ್ಥಿತಂ ದೀರ್ಘಮಧ್ವಾನಂ ಸ್ವಬಂಧುಮಿವ ಬಾಂಧವಾಃ || ೪೭

ತದೂರುವೇಗೋನ್ಮಥಿತಾಃ ಸಾಲಾಶ್ಚಾನ್ಯೇ ನಗೋತ್ತಮಾಃ |
ಅನುಜಗ್ಮುರ್ಹನೂಮಂತಂ ಸೈನ್ಯಾ ಇವ ಮಹೀಪತಿಮ್ || ೪೮

ಸುಪುಷ್ಪಿತಾಗ್ರೈರ್ಬಹುಭಿಃ ಪಾದಪೈರನ್ವಿತಃ ಕಪಿಃ |
ಹನೂಮಾನ್ ಪರ್ವತಾಕಾರೋ ಬಭೂವಾದ್ಭುತದರ್ಶನಃ || ೪೯

ಸಾರವಂತೋಽಥ ಯೇ ವೃಕ್ಷಾ ನ್ಯಮಜ್ಜನ್ ಲವಣಾಂಭಸಿ |
ಭಯಾದಿವ ಮಹೇಂದ್ರಸ್ಯ ಪರ್ವತಾ ವರುಣಾಲಯೇ || ೫೦

ಸ ನಾನಾಕುಸುಮೈಃ ಕೀರ್ಣಃ ಕಪಿಃ ಸಾಂಕುರಕೋರಕೈಃ |
ಶುಶುಭೇ ಮೇಘಸಂಕಾಶಃ ಖದ್ಯೋತೈರಿವ ಪರ್ವತಃ || ೫೧

ವಿಮುಕ್ತಾಸ್ತಸ್ಯ ವೇಗೇನ ಮುಕ್ತ್ವಾ ಪುಷ್ಪಾಣಿ ತೇ ದ್ರುಮಾಃ |
ಅವಶೀರ್ಯಂತ ಸಲಿಲೇ ನಿವೃತ್ತಾಃ ಸುಹೃದೋ ಯಥಾ || ೫೨

ಲಘುತ್ವೇನೋಪಪನ್ನಂ ತದ್ವಿಚಿತ್ರಂ ಸಾಗರೇಽಪತತ್ |
ದ್ರುಮಾಣಾಂ ವಿವಿಧಂ ಪುಷ್ಪಂ ಕಪಿವಾಯುಸಮೀರಿತಮ್ || ೫೩

ಪುಷ್ಪೌಘೇಣಾನುವಿದ್ಧೇನ ನಾನಾವರ್ಣೇನ ವಾನರಃ |
ಬಭೌ ಮೇಘ ಇವೋದ್ಯನ್ ವೈ ವಿದ್ಯುದ್ಗಣವಿಭೂಷಿತಃ || ೫೪

ತಸ್ಯ ವೇಗಸಮಾಧೂತೈಃ ಪುಷ್ಪೈಸ್ತೋಯಮದೃಶ್ಯತ |
ತಾರಾಭಿರಭಿರಾಮಾಭಿರುದಿತಾಭಿರಿವಾಂಬರಮ್ || ೫೫

ತಸ್ಯಾಂಬರಗತೌ ಬಾಹೂ ದದೃಶಾತೇ ಪ್ರಸಾರಿತೌ |
ಪರ್ವತಾಗ್ರಾದ್ವಿನಿಷ್ಕ್ರಾಂತೌ ಪಂಚಾಸ್ಯಾವಿವ ಪನ್ನಗೌ || ೫೬

ಪಿಬನ್ನಿವ ಬಭೌ ಶ್ರೀಮಾನ್ ಸೋರ್ಮಿಮಾಲಂ ಮಹಾರ್ಣವಮ್
ಪಿಪಾಸುರಿವ ಚಾಕಾಶಂ ದದೃಶೇ ಸ ಮಹಾಕಪಿಃ ॥ ೫೭

ತಸ್ಯ ವಿದ್ಯುತ್ಪ್ರಭಾಕಾರೇ ವಾಯುಮಾರ್ಗಾನುಸಾರಿಣಃ ।
ನಯನೇ ಸಂಪ್ರಕಾಶೇತೇ ಪರ್ವತಸ್ಥಾವಿವಾನಲೌ ॥ ೫೮

ಪಿಂಗೇ ಪಿಂಗಾಕ್ಷಮುಖ್ಯಸ್ಯ ಬೃಹತೀ ಪರಿಮಂಡಲೇ ।
ಚಕ್ಷುಷೀ ಸಂಪ್ರಕಾಶೇತೇ ಚಂದ್ರಸೂರ್ಯಾವಿವೋದಿತೌ ॥ ೫೯

ಮುಖಂ ನಾಸಿಕಯಾ ತಸ್ಯ ತಾಮ್ರಯಾ ತಾಮ್ರಮಾಬಭೌ ।
ಸಂಧ್ಯಯಾ ಸಮಭಿಸ್ಪೃಷ್ಟಂ ಯಥಾ ಸೂರ್ಯಸ್ಯ ಮಂಡಲಮ್ ॥

ಲಾಂಗೂಲಂ ಚ ಸಮಾವಿದ್ಧಂ ಪ್ಲವಮಾನಸ್ಯ ಶೋಭತೇ ।
ಅಂಬರೇ ವಾಯುಪುತ್ರಸ್ಯ ಶಕ್ರಧ್ವಜ ಇವೋಚ್ಛ್ರಿತಃ ॥ ೬೧

ಲಾಂಗೂಲಚಕ್ರೇಣ ಮಹಾನ್ ಶುಕ್ಲದಂಷ್ಟ್ರೋಽನಿಲಾತ್ಮಜಃ ।
ವ್ಯರೋಚತ ಮಹಾಪ್ರಾಜ್ಞಃ ಪರಿವೇಷೀವ ಭಾಸ್ಕರಃ ॥ ೬೨

ಸ್ಫಿಗ್ದೇಶೇನಾಭಿತಾಮ್ರೇಣ ರರಾಜ ಸ ಮಹಾಕಪಿಃ ।
ಮಹತಾ ದಾರಿತೇನೇವ ಗಿರಿರ್ಗೈರಿಕಧಾತುನಾ ॥ ೬೩

ತಸ್ಯ ವಾನರಸಿಂಹಸ್ಯ ಪ್ಲವಮಾನಸ್ಯ ಸಾಗರಮ್ ।
ಕಕ್ಷಾಂತರಗತೋ ವಾಯುರ್ಜೀಮೂತ ಇವ ಗರ್ಜತಿ ॥ ೬೪

ಖೇ ಯಥಾ ನಿಪತಂತ್ಯುಲ್ಕಾ ಹ್ಯುತ್ತರಾಂತಾದ್ವಿನಿಃಸೃತಾಃ ।
ದೃಶ್ಯತೇ ಸಾನುಬಂಧಾ ಚ ತಥಾ ಸ ಕಪಿಕುಂಜರಃ ॥ ೬೫

ಪತತ್ಪತಂಗಸಂಕಾಶೋ ವ್ಯಾಯತಃ ಶುಶುಭೇ ಕಪಿಃ ।
ಪ್ರವೃದ್ಧ ಇವ ಮಾತಂಗಃ ಕಕ್ಷ್ಯಯಾ ಬಧ್ಯಮಾನಯಾ ॥ ೬೬

ಉಪರಿಷ್ಟಾಚ್ಛರೀರೇಣ ಚ್ಛಾಯಯಾ ಚಾವಗಾಢಯಾ ।
ಸಾಗರೇ ಮಾರುತಾವಿಷ್ಟಾ ನೌರಿವಾಸೀತ್ತದಾ ಕಪಿಃ ॥ ೬೭

ಯಂ ಯಂ ದೇಶಂ ಸಮುದ್ರಸ್ಯ ಜಗಾಮ ಸ ಮಹಾಕಪಿಃ ।
ಸ ಸ ತಸ್ಯೋರುವೇಗೇನ ಸೋನ್ಮಾದ ಇವ ಲಕ್ಷ್ಯತೇ ॥ ೬೮

ಸಾಗರಸ್ಯೋರ್ಮಿಜಾಲಾನಾಮುರಸಾ ಶೈಲವರ್ಷ್ಮಣಾ ।
ಅಭಿಘ್ನಂಸ್ತು ಮಹಾವೇಗಃ ಪುಪ್ಲುವೇ ಸ ಮಹಾಕಪಿಃ ॥ ೬೯

ಕಪಿವಾತಶ್ಚ ಬಲವಾನ್ ಮೇಘವಾತಶ್ಚ ನಿಃಸೃತಃ ।
ಸಾಗರಂ ಭೀಮನಿರ್ಘೋಷಂ ಕಂಪಯಾಮಾಸತುರ್ಭೃಶಮ್ ॥

ವಿಕರ್ಷನ್ನೂರ್ಮಿಜಾಲಾನಿ ಬೃಹಂತಿ ಲವಣಾಂಭಸಃ ।
ಪುಪ್ಲುವೇ ಕಪಿಶಾರ್ದೂಲೋ ವಿಕಿರನ್ನಿವ ರೋದಸೀ ॥ ೭೧

ಮೇರುಮಂದರಸಂಕಾಶಾನುದ್ಗತಾನ್ ಸ ಮಹಾರ್ಣವೇ ।
ಅತ್ಯಕ್ರಾಮನ್ಮಹಾವೇಗಸ್ತರಂಗಾನ್ ಗಣಯನ್ನಿವ ॥ ೭೨

ತಸ್ಯ ವೇಗಸಮುದ್ಧೂತಂ ಜಲಂ ಸಜಲದಂ ತದಾ ।
ಅಂಬರಸ್ಥಂ ವಿಬಭ್ರಾಜ ಶಾರದಾಭ್ರಮಿವಾತತಮ್ ॥ ೭೩

ತಿಮಿನಕ್ರಝಷಾಃ ಕೂರ್ಮಾ ದೃಶ್ಯಂತೇ ವಿವೃತಾಸ್ತದಾ ।
ವಸ್ತ್ರಾಪಕರ್ಷಣೇನೇವ ಶರೀರಾಣಿ ಶರೀರಿಣಾಮ್ ॥ ೭೪

ಪ್ಲವಮಾನಂ ಸಮೀಕ್ಷ್ಯಾಥ ಭುಜಂಗಾಃ ಸಾಗರಾಲಯಾಃ ।
ವ್ಯೋಮ್ನಿ ತಂ ಕಪಿಶಾರ್ದೂಲಂ ಸುಪರ್ಣ ಇತಿ ಮೇನಿರೇ ॥ ೭೫

ದಶಯೋಜನವಿಸ್ತೀರ್ಣಾ ತ್ರಿಂಶದ್ಯೋಜನಮಾಯತಾ ।
ಛಾಯಾ ವಾನರಸಿಂಹಸ್ಯ ಜಲೇ ಚಾರುತರಾಭವತ್ ॥ ೭೬

ಶ್ವೇತಾಭ್ರಘನರಾಜೀವ ವಾಯುಪುತ್ರಾನುಗಾಮಿನೀ ।
ತಸ್ಯ ಸಾ ಶುಶುಭೇ ಛಾಯಾ ವಿತತಾ ಲವಣಾಂಭಸಿ ॥ ೭೭

ಶುಶುಭೇ ಸ ಮಹಾತೇಜಾ ಮಹಾಕಾಯೋ ಮಹಾಕಪಿಃ ।
ವಾಯುಮಾರ್ಗೇ ನಿರಾಲಂಬೇ ಪಕ್ಷವಾನಿವ ಪರ್ವತಃ ॥ ೭೮

ಯೇನಾಸೌ ಯಾತಿ ಬಲವಾನ್ ವೇಗೇನ ಕಪಿಕುಂಜರಃ ।
ತೇನ ಮಾರ್ಗೇಣ ಸಹಸಾ ದ್ರೋಣೀಕೃತ ಇವಾರ್ಣವಃ ॥ ೭೯

ಆಪಾತೇ ಪಕ್ಷಿಸಂಘಾನಾಂ ಪಕ್ಷಿರಾಜ ಇವಾಬಭೌ ।
ಹನೂಮಾನ್ ಮೇಘಜಾಲಾನಿ ಪ್ರಕರ್ಷನ್ ಮಾರುತೋ ಯಥಾ ॥

ಪ್ರವಿಶನ್ನಭ್ರಜಾಲಾನಿ ನಿಷ್ಪತಂಶ್ಚ ಪುನಃ ಪುನಃ ।
ಪ್ರಚ್ಛನ್ನಶ್ಚ ಪ್ರಕಾಶಶ್ಚ ಚಂದ್ರಮಾ ಇವ ಲಕ್ಷ್ಯತೇ ॥ ೮೧

ಪಾಂಡರಾರುಣವರ್ಣಾನಿ ನೀಲಮಾಂಜಿಷ್ಠಕಾನಿ ಚ ।
ಕಪಿನಾ ಕೃಷ್ಯಮಾಣಾನಿ ಮಹಾಭ್ರಾಣಿ ಚಕಾಶಿರೇ ॥ ೮೨

ಪ್ಲವಮಾನಂ ತು ತಂ ದೃಷ್ಟ್ವಾ ಪ್ಲವಗಂ ತ್ವರಿತಂ ತದಾ ।
ವವೃಷುಃ ಪುಷ್ಪವರ್ಷಾಣಿ ದೇವಗಂಧರ್ವಚಾರಣಾಃ ॥ ೮೩

ತತಾಪ ನ ಹಿ ತಂ ಸೂರ್ಯಃ ಪ್ಲವಂತಂ ವಾನರೇಶ್ವರಮ್ ।
ಸಿಷೇವೇ ಚ ತದಾ ವಾಯೂ ರಾಮಕಾರ್ಯಾರ್ಥಸಿದ್ಧಯೇ ॥ ೮೪

ಋಷಯಸ್ತುಷ್ಟುವುಶ್ಚೈನಂ ಪ್ಲವಮಾನಂ ವಿಹಾಯಸಾ ।
ಜಗುಶ್ಚ ದೇವಗಂಧರ್ವಾಃ ಪ್ರಶಂಸಂತೋ ಮಹೌಜಸಮ್ ॥ ೮೫

ನಾಗಾಶ್ಚ ತುಷ್ಟುವುರ್ಯಕ್ಷಾ ರಕ್ಷಾಂಸಿ ವಿಬುಧಾಃ ಖಗಾಃ ।
ಪ್ರೇಕ್ಷ್ಯಾಕಾಶೇ ಕಪಿವರಂ ಸಹಸಾ ವಿಹತಕ್ಲಮಮ್ ॥ ೮೬

ತಸ್ಮಿನ್ ಪ್ಲವಗಶಾರ್ದೂಲೇ ಪ್ಲವಮಾನೇ ಹನೂಮತಿ ।
ಇಕ್ಷ್ವಾಕುಕುಲಮಾನಾರ್ಥೀ ಚಿಂತಯಾಮಾಸ ಸಾಗರಃ ॥ ೮೭

ಸಾಹಾಯ್ಯಂ ವಾನರೇಂದ್ರಸ್ಯ ಯದಿ ನಾಹಂ ಹನೂಮತಃ ।
ಕರಿಷ್ಯಾಮಿ ಭವಿಷ್ಯಾಮಿ ಸರ್ವವಾಚ್ಯೋ ವಿವಕ್ಷತಾಮ್ ॥ ೮೮

ಅಹಮಿಕ್ಷ್ವಾಕುನಾಥೇನ ಸಗರೇಣ ವಿವರ್ಧಿತಃ ।
ಇಕ್ಷ್ವಾಕುಸಚಿವಶ್ಚಾಯಂ ನಾವಸೀದಿತುಮರ್ಹತಿ ॥ ೮೯

ತಥಾ ಮಯಾ ವಿಧಾತವ್ಯಂ ವಿಶ್ರಮೇತ ಯಥಾ ಕಪಿಃ ।
ಶೇಷಂ ಚ ಮಯಿ ವಿಶ್ರಾಂತಃ ಸುಖೇನಾತಿಪತಿಷ್ಯತಿ ॥ ೯೦

ಇತಿ ಕೃತ್ವಾ ಮತಿಂ ಸಾಧ್ವೀಂ ಸಮುದ್ರಶ್ಛನ್ನಮಂಭಸಿ ।
ಹಿರಣ್ಯನಾಭಂ ಮೈನಾಕಮುವಾಚ ಗಿರಿಸತ್ತಮಮ್ ॥ ೯೧

ತ್ವಮಿಹಾಸುರಸಂಘಾನಾಂ ಪಾತಾಲತಲವಾಸಿನಾಮ್ ।
ದೇವರಾಜ್ಞಾ ಗಿರಿಶ್ರೇಷ್ಠ ಪರಿಘಃ ಸಂನಿವೇಶಿತಃ ॥ ೯೨

ತ್ವಮೇಷಾಂ ಜಾತವೀರ್ಯಾಣಾಂ ಪುನರೇವೋತ್ಪತಿಷ್ಯತಾಮ್ ।
ಪಾತಾಲಸ್ಯಾಪ್ರಮೇಯಸ್ಯ ದ್ವಾರಮಾವೃತ್ಯ ತಿಷ್ಠಸಿ ॥ ೯೩

ತಿರ್ಯಗೂರ್ಧ್ವಮಧಶ್ಚೈವ ಶಕ್ತಿಸ್ತೇ ಶೈಲ ವರ್ಧಿತುಮ್ ।
ತಸ್ಮಾತ್ ಸಂಚೋದಯಾಮಿ ತ್ವಾಮುತ್ತಿಷ್ಠ ನಗಸತ್ತಮ ॥ ೯೪

ಸ ಏಷ ಕಪಿಶಾರ್ದೂಲಸ್ತ್ವಾಮುಪೈಷ್ಯತಿ ವೀರ್ಯವಾನ್ ।
ಹನೂಮಾನ್ ರಾಮಕಾರ್ಯಾರ್ಥಂ ಭೀಮಕರ್ಮಾ ಖಮಾಪ್ಲುತಃ

ಅಸ್ಯ ಸಾಹ್ಯಂ ಮಯಾ ಕಾರ್ಯಮಿಕ್ಷ್ವಾಕುಹಿತವರ್ತಿನಃ ।
ಮಮ ಹೀಕ್ಷ್ವಾಕವಃ ಪೂಜ್ಯಾಃ ಪರಂ ಪೂಜ್ಯತಮಾಸ್ತವ ॥ ೯೬

ಕುರು ಸಾಚಿವ್ಯಮಸ್ಮಾಕಂ ನ ನಃ ಕಾರ್ಯಮತಿಕ್ರಮೇತ್ ।
ಕರ್ತವ್ಯಮಕೃತಂ ಕಾರ್ಯಂ ಸತಾಂ ಮನ್ಯುಮುದೀರಯೇತ್ ॥ ೯೭

ಸಲಿಲಾದೂರ್ಧ್ವಮುತ್ತಿಷ್ಠ ತಿಷ್ಠತ್ವೇಷ ಕಪಿಸ್ತ್ವಯಿ ।
ಅಸ್ಮಾಕಮತಿಥಿಶ್ಚೈವ ಪೂಜ್ಯಶ್ಚ ಪ್ಲವತಾಂ ವರಃ ॥ ೯೮

ಚಾಮೀಕರಮಹಾನಾಭ ದೇವಗಂಧರ್ವಸೇವಿತ ।
ಹನೂಮಾಂಸ್ತ್ವಯಿ ವಿಶ್ರಾಂತಸ್ತತಃ ಶೇಷಂ ಗಮಿಷ್ಯತಿ ॥ ೯೯

ಕಾಕುತ್ಸ್ಥಸ್ಯಾನೃಶಂಸ್ಯಂ ಚ ಮೈಥಿಲ್ಯಾಶ್ಚ ವಿವಾಸನಮ್ ।
ಶ್ರಮಂ ಚ ಪ್ಲವಗೇಂದ್ರಸ್ಯ ಸಮೀಕ್ಷ್ಯೋತ್ಥಾತುಮರ್ಹಸಿ ॥ ೧೦೦

ಹಿರಣ್ಯನಾಭೋ ಮೈನಾಕೋ ನಿಶಮ್ಯ ಲವಣಾಂಭಸಃ ।
ಉತ್ಪಪಾತ ಜಲಾತ್ತೂರ್ಣಂ ಮಹಾದ್ರುಮಲತಾಯುತಃ ॥ ೧೦೧

ಸ ಸಾಗರಜಲಂ ಭಿತ್ವಾ ಬಭೂವಾಭ್ಯುತ್ಥಿತಸ್ತದಾ ।
ಯಥಾ ಜಲಧರಂ ಭಿತ್ವಾ ದೀಪ್ತರಶ್ಮಿರ್ದಿವಾಕರಃ ॥ ೧೦೨

ಸ ಮಹಾತ್ಮಾ ಮುಹೂರ್ತೇನ ಪರ್ವತಃ ಸಲಿಲಾವೃತಃ ।
ದರ್ಶಯಾಮಾಸ ಶೃಂಗಾಣಿ ಸಾಗರೇಣ ನಿಯೋಜಿತಃ ॥ ೧೦೩

ಶಾತಕುಂಭಮಯೈಃ ಶೃಂಗೈಃ ಸಕಿಂನರಮಹೋರಗೈಃ ।
ಆದಿತ್ಯೋದಯಸಂಕಾಶೈರಾಲಿಖದ್ಭಿರಿವಾಂಬರಮ್ ॥ ೧೦೪

ಯಥಾ ಚ ಸ ಮಹಾಬಾಹುರ್ಮಾಂ ತಾರಯತಿ ರಾಘವಃ ।
ಅಸ್ಮಾದ್ದುಃಖಾಂಬುಸಂರೋಧಾತ್ತ್ವಂ ಸಮಾಧಾತುಮರ್ಹಸಿ ॥ ೪೨

ಇಮಂ ಚ ತೀವ್ರಂ ಮಮ ಶೋಕವೇಗಂ
ರಕ್ಷೋಭಿರೇಭಿಃ ಪರಿಭರ್ತ್ಸನಂ ಚ ।
ಬ್ರೂಯಾಸ್ತು ರಾಮಸ್ಯ ಗತಃ ಸಮೀಪಂ
ಶಿವಶ್ಚ ತೇಽಧ್ವಾಸ್ತು ಹರಿಪ್ರವೀರ ॥ ೪೩

ಏತತ್ತವಾರ್ಯಾ ನೃಪರಾಜಸಿಂಹ
ಸೀತಾ ವಚಃ ಪ್ರಾಹ ವಿಷಾದಪೂರ್ವಮ್ ।
ಏತಚ್ಚ ಬುದ್ಧ್ವಾ ಗದಿತಂ ಮಯಾ ತ್ವಂ
ಶ್ರದ್ಧತ್ಸ್ವ ಸೀತಾಂ ಕುಶಲಾಂ ಸಮಗ್ರಾಮ್ ॥ ೪೪

ಇತಿ ಶ್ರೀಮದ್ರಾಮಾಯಣೇ ಸುಂದರಕಾಂಡೇ ಸಪ್ತಷಷ್ಟಿತಮಃ ಸರ್ಗಃ



## ಅಷ್ಟಷಷ್ಟಿತಮಃ ಸರ್ಗಃ

### ಹನೂಮತ್ಸಮಾಶ್ವಾಸವಚನಾನುವಾದಃ

ಅಥಾಹಮುತ್ತರಂ ದೇವ್ಯಾ ಪುನರುಕ್ತಃ ಸಸಂಭ್ರಮಃ ।
ತವ ಸ್ನೇಹಾನ್ನರವ್ಯಾಘ್ರ ಸೌಹಾರ್ದಾದನುಮಾನ್ಯ ವೈ ॥ ೧

ಏವಂ ಬಹುವಿಧಂ ವಾಚ್ಯೋ ರಾಮೋ ದಾಶರಥಿಸ್ತ್ವಯಾ ।
ಯಥಾ ಮಾಮಾಪ್ನುಯಾಚ್ಛೀಘ್ರಂ ಹತ್ವಾ ರಾವಣಮಾಹವೇ ॥

ಯದಿ ವಾ ಮನ್ಯಸೇ ವೀರ ವಸೈಕಾಹಮರಿಂದಮ ।
ಕಸ್ಮಿಂಶ್ಚಿತ್ ಸಂವೃತೇ ದೇಶೇ ವಿಶ್ರಾಂತಃ ಶ್ವೋ ಗಮಿಷ್ಯಸಿ ॥ ೩

ಮಮ ಚಾಪ್ಯಲ್ಪಭಾಗ್ಯಾಯಾಃ ಸಾಂನಿಧ್ಯಾತ್ತವ ವಾನರ ।
ಅಸ್ಯ ಶೋಕವಿಪಾಕಸ್ಯ ಮುಹೂರ್ತಂ ಸ್ಯಾದ್ವಿಮೋಕ್ಷಣಮ್ ॥ ೪

ಗತೇ ಹಿ ತ್ವಯಿ ವಿಕ್ರಾಂತೇ ಪುನರಾಗಮನಾಯ ವೈ ।
ಪ್ರಾಣಾನಾಮಪಿ ಸಂದೇಹೋ ಮಮ ಸ್ಯಾನ್ನಾತ್ರ ಸಂಶಯಃ ॥ ೫

ತವಾದರ್ಶನಜಃ ಶೋಕೋ ಭೂಯೋ ಮಾಂ ಪರಿತಾಪಯೇತ್ ।
ದುಃಖಾದ್ದುಃಖಪರಾಭೂತಾಂ ದುರ್ಗತಾಂ ದುಃಖಭಾಗಿನೀಮ್ ॥

ಅಯಂ ಚ ವೀರ ಸಂದೇಹಸ್ತಿಷ್ಠತೀವ ಮಮಾಗ್ರತಃ ।
ಸುಮಹಾಂಸ್ತ್ವತ್ಸಹಾಯೇಷು ಹರ್ಯೃಕ್ಷೇಷು ಹರೀಶ್ವರ ॥ ೭

ಕಥಂ ನು ಖಲು ದುಷ್ಪಾರಂ ತರಿಷ್ಯಂತಿ ಮಹೋದಧಿಮ್ ।
ತಾನಿ ಹರ್ಯೃಕ್ಷಸೈನ್ಯಾನಿ ತೌ ವಾ ನರವರಾತ್ಮಜೌ ॥ ೮

ತ್ರಯಾಣಾಮೇವ ಭೂತಾನಾಂ ಸಾಗರಸ್ಯಾಸ್ಯ ಲಂಘನೇ ।
ಶಕ್ತಿಃ ಸ್ಯಾದ್ವೈನತೇಯಸ್ಯ ವಾಯೋರ್ವಾ ತವ ವಾನಘ ॥ ೯

ತದಸ್ಮಿನ್ ಕಾರ್ಯನಿರ್ಯೋಗೇ ವೀರೈವಂ ದುರತಿಕ್ರಮೇ ।
ಕಿಂ ಪಶ್ಯಸಿ ಸಮಾಧಾನಂ ತ್ವಂ ಹಿ ಕಾರ್ಯವಿದಾಂ ವರಃ ॥ ೧೦

ಕಾಮಮಸ್ಯ ತ್ವಮೇವೈಕಃ ಕಾರ್ಯಸ್ಯ ಪರಿಸಾಧನೇ ।
ಪರ್ಯಾಪ್ತಃ ಪರವೀರಘ್ನ ಯಶಸ್ಯಸ್ತೇ ಬಲೋದಯಃ ॥ ೧೧

ಬಲೈಃ ಸಮಗ್ರೈರ್ಯದಿ ಮಾಂ ಹತ್ವಾ ರಾವಣಮಾಹವೇ ।
ವಿಜಯೀ ಸ್ವಾಂ ಪುರೀಂ ರಾಮೋ ನಯೇತ್ತತ್ ಸ್ಯಾದ್ಯಶಸ್ಕರಮ್

ಯಥಾಹಂ ತಸ್ಯ ವೀರಸ್ಯ ವನಾದುಪಧಿನಾ ಹೃತಾ ।
ರಕ್ಷಸಾ ತದ್ಭಯಾದೇವ ತಥಾ ನಾರ್ಹತಿ ರಾಘವಃ ॥ ೧೩

ಬಲೈಸ್ತು ಸಂಕುಲಾಂ ಕೃತ್ವಾ ಲಂಕಾಂ ಪರಬಲಾರ್ದನಃ ।
ಮಾಂ ನಯೇದ್ಯದಿ ಕಾಕುತ್ಸ್ಥಸ್ತತ್ತಸ್ಯ ಸದೃಶಂ ಭವೇತ್ ॥ ೧೪

ತದ್ಯಥಾ ತಸ್ಯ ವಿಕ್ರಾಂತಮನುರೂಪಂ ಮಹಾತ್ಮನಃ ।
ಭವತ್ಯಾಹವಶೂರಸ್ಯ ತಥಾ ತ್ವಮುಪಪಾದಯ ॥ ೧೫

ತದರ್ಥೋಪಹಿತಂ ವಾಕ್ಯಂ ಪ್ರಶ್ರಿತಂ ಹೇತುಸಂಹಿತಮ್ ।
ನಿಶಮ್ಯಾಹಂ ತತಃ ಶೇಷಂ ವಾಕ್ಯಮುತ್ತರಮಬ್ರವಮ್ ॥ ೧೬

ದೇವಿ ಹರ್ಯೃಕ್ಷಸೈನ್ಯಾನಾಮೀಶ್ವರಃ ಪ್ಲವತಾಂ ವರಃ ।
ಸುಗ್ರೀವಃ ಸತ್ತ್ವಸಂಪನ್ನಸ್ತವಾರ್ಥೇ ಕೃತನಿಶ್ಚಯಃ ॥ ೧೭

ತಸ್ಯ ವಿಕ್ರಮಸಂಪನ್ನಾಃ ಸತ್ತ್ವವಂತೋ ಮಹಾಬಲಾಃ ।
ಮನಃಸಂಕಲ್ಪಸಂಪಾತಾ ನಿದೇಶೇ ಹರಯಃ ಸ್ಥಿತಾಃ ॥ ೧೮

ಯೇಷಾಂ ನೋಪರಿ ನಾಧಸ್ತಾನ್ನ ತಿರ್ಯಕ್ ಸಜ್ಜತೇ ಗತಿಃ ।
ನ ಚ ಕರ್ಮಸು ಸೀದಂತಿ ಮಹತ್ಸ್ವಮಿತತೇಜಸಃ ॥ ೧೯

ಅಸಕೃತ್ತೈರ್ಮಹಾಭಾಗೈರ್ವಾನರೈರ್ಬಲದರ್ಪಿತೈಃ ।
ಪ್ರದಕ್ಷಿಣೀಕೃತಾ ಭೂಮಿರ್ವಾಯುಮಾರ್ಗಾನುಸಾರಿಭಿಃ ॥ ೨೦

ಮದ್ವಿಶಿಷ್ಟಾಶ್ಚ ತುಲ್ಯಾಶ್ಚ ಸಂತಿ ತತ್ರ ವನೌಕಸಃ ।
ಮತ್ತಃ ಪ್ರತ್ಯವರಃ ಕಶ್ಚಿನ್ನಾಸ್ತಿ ಸುಗ್ರೀವಸಂನಿಧೌ ॥ ೨೧

ಅಹಂ ತಾವದಿಹ ಪ್ರಾಪ್ತಃ ಕಿಂ ಪುನಸ್ತೇ ಮಹಾಬಲಾಃ ।
ನ ಹಿ ಪ್ರಕೃಷ್ಟಾಃ ಪ್ರೇಷ್ಯಂತೇ ಪ್ರೇಷ್ಯಂತೇ ಹೀತರೇ ಜನಾಃ ॥ ೨೨

ತದಲಂ ಪರಿತಾಪೇನ ದೇವಿ ಮನ್ಯುರ್ವ್ಯಪೈತು ತೇ ।
ಏಕೋತ್ಪಾತೇನ ತೇ ಲಂಕಾಮೇಷ್ಯಂತಿ ಹರಿಯೂಥಪಾಃ ॥ ೨೩

ಮಮ ಪೃಷ್ಠಗತೌ ತೌ ಚ ಚಂದ್ರಸೂರ್ಯಾವಿವೋದಿತೌ ।
ತ್ವತ್ಸಕಾಶಂ ಮಹಾಭಾಗೇ ನೃಸಿಂಹಾವಾಗಮಿಷ್ಯತಃ ॥ ೨೪

ಅರಿಘ್ನಂ ಸಿಂಹಸಂಕಾಶಂ ಕ್ಷಿಪ್ರಂ ದ್ರಕ್ಷ್ಯಸಿ ರಾಘವಮ್ ।
ಲಕ್ಷ್ಮಣಂ ಚ ಧನುಷ್ಪಾಣಿಂ ಲಂಕಾದ್ವಾರಮುಪಸ್ಥಿತಮ್ ॥ ೨೫

ನಖದಂಷ್ಟ್ರಾಯುಧಾನ್ ವೀರಾನ್ ಸಿಂಹಶಾರ್ದೂಲವಿಕ್ರಮಾನ್ ।
ವಾನರಾನ್ ವಾರಣೇಂದ್ರಾಭಾನ್ ಕ್ಷಿಪ್ರಂ ದ್ರಕ್ಷ್ಯಸಿ ಸಂಗತಾನ್ ॥

ಶೈಲಾಂಬುದನಿಕಾಶಾನಾಂ ಲಂಕಾಮಲಯಸಾನುಷು ।
ನರ್ದತಾಂ ಕಪಿಮುಖ್ಯಾನಾಮಚಿರಾಚ್ಛ್ರೋಷ್ಯಸಿ ಸ್ವನಮ್ ॥ ೨೭

ನಿವೃತ್ತವನವಾಸಂ ಚ ತ್ವಯಾ ಸಾರ್ಧಮರಿಂದಮಮ್ ।
ಅಭಿಷಿಕ್ತಮಯೋಧ್ಯಾಯಾಂ ಕ್ಷಿಪ್ರಂ ದ್ರಕ್ಷ್ಯಸಿ ರಾಘವಮ್ ॥ ೨೮

ತತೋ ಮಯಾ ವಾಗ್ಭಿರದೀನಭಾಷಿಣಾ
ಶಿವಾಭಿರಿಷ್ಟಾಭಿರಭಿಪ್ರಸಾದಿತಾ ।
ಜಗಾಮ ಶಾಂತಿಂ ಮಮ ಮೈಥಿಲಾತ್ಮಜಾ
ತವಾಪಿ ಶೋಕೇನ ತದಾಭಿಪೀಡಿತಾ ॥ ೨೯

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ ಚತುರ್ವಿಂಶತಿ ಸಹಸ್ರಿಕಾಯಾಂ ಸಂಹಿತಾಯಾಂ ಸುಂದರಕಾಂಡೇ ಅಷ್ಟಷಷ್ಟಿತಮಃ ಸರ್ಗಃ

## ಶ್ರೀಮದ್ವಾಲ್ಮೀಕಿರಾಮಾಯಣೇ ಸುಂದರಕಾಂಡಃ
## ಸಂಪೂರ್ಣಃ

---

## ಯುದ್ಧಕಾಂಡೇ ಪ್ರಥಮಃ ಶ್ಲೋಕಃ

*

ಶ್ರುತ್ವಾ ಹನುಮತೋ ವಾಕ್ಯಂ ಯಥಾವದಭಿಭಾಷಿತಮ್ ।
ರಾಮಃ ಪ್ರೀತಿಸಮಾಯುಕ್ತೋ ವಾಕ್ಯಮುತ್ತರಮಬ್ರವೀತ್ ॥

* * *

ಚಂದ್ರಬಿಂಬಸಮಾಕಾರಂ ವಾಂಛಿತಾರ್ಥಪ್ರದಾಯಕಮ್ ।
ಹನೂಮತ್ಸೇವಿತಂ ಧ್ಯಾಯೇತ್ ಸೌಂದರೇ ಕಾಂಡ ಉತ್ತಮೇ ॥

---

# ಶ್ರೀರಾಮಾವತಾರಃ

ನಿರ್ವೃತ್ತೇ ತು ಕ್ರತೌ ತಸ್ಮಿನ್ ಹಯಮೇಧೇ ಮಹಾತ್ಮನಃ ।
ಪ್ರತಿಗೃಹ್ಯ ಸುರಾ ಭಾಗಾನ್ ಪ್ರತಿಜಗ್ಮುರ್ಯಥಾಗತಮ್ ॥ ೧

ಸಮಾಪ್ತದೀಕ್ಷಾನಿಯಮಃ ಪತ್ನೀಗಣಸಮನ್ವಿತಃ ।
ಪ್ರವಿವೇಶ ಪುರೀಂ ರಾಜಾ ಸಭೃತ್ಯಬಲವಾಹನಃ ॥ ೨

ಯಥಾರ್ಹಂ ಪೂಜಿತಾಸ್ತೇನ ರಾಜ್ಞಾ ವೈ ಪೃಥಿವೀಶ್ವರಾಃ ।
ಮುದಿತಾಃ ಪ್ರಯಯುರ್ದೇಶಾನ್ ಪ್ರಣಮ್ಯ ಮುನಿಪುಂಗವಮ್ ॥

ಶ್ರೀಮತಾಂ ಗಚ್ಛತಾಂ ತೇಷಾಂ ಸ್ವಪುರಾಣಿ ಪುರಾತ್ತತಃ ।
ಬಲಾನಿ ರಾಜ್ಞಾಂ ಶುಭ್ರಾಣಿ ಪ್ರಹೃಷ್ಟಾನಿ ಚಕಾಶಿರೇ ॥ ೪

ಗತೇಷು ಪೃಥಿವೀಶೇಷು ರಾಜಾ ದಶರಥಸ್ತದಾ ।
ಪ್ರವಿವೇಶ ಪುರೀಂ ಶ್ರೀಮಾನ್ ಪುರಸ್ಕೃತ್ಯ ದ್ವಿಜೋತ್ತಮಾನ್ ॥ ೫

ಶಾಂತಯಾ ಪ್ರಯಯೌ ಸಾರ್ಧಮೃಷ್ಯಶೃಂಗಃ ಸುಪೂಜಿತಃ ।
ಅನ್ವೀಯಮಾನೋ ರಾಜ್ಞಾಥ ಸಾನುಯಾತ್ರೇಣ ಧೀಮತಾ ॥ ೬

ಏವಂ ವಿಸೃಜ್ಯ ತಾನ್ ಸರ್ವಾನ್ ರಾಜಾ ಸಂಪೂರ್ಣಮಾನಸಃ ।
ಉವಾಸ ಸುಖಿತಸ್ತತ್ರ ಪುತ್ರೋತ್ಪತ್ತಿಂ ವಿಚಿಂತಯನ್ ॥ ೭

ತತೋ ಯಜ್ಞೇ ಸಮಾಪ್ತೇ ತು ಋತೂನಾಂ ಷಟ್ ಸಮತ್ಯಯುಃ ।
ತತಶ್ಚ ದ್ವಾದಶೇ ಮಾಸೇ ಚೈತ್ರೇ ನಾವಮಿಕೇ ತಿಥೌ ॥ ೮

ನಕ್ಷತ್ರೇಽದಿತಿದೈವತ್ಯೇ ಸ್ವೋಚ್ಚಸಂಸ್ಥೇಷು ಪಂಚಸು ।
ಗ್ರಹೇಷು ಕರ್ಕಟೇ ಲಗ್ನೇ ವಾಕ್ಪತಾವಿಂದುನಾ ಸಹ ॥ ೯

ಪ್ರೋದ್ಯಮಾನೇ ಜಗನ್ನಾಥಂ ಸರ್ವಲೋಕನಮಸ್ಕೃತಮ್ ।
ಕೌಸಲ್ಯಾಜನಯದ್ರಾಮಂ ಸರ್ವಲಕ್ಷಣಸಂಯುತಮ್ ॥ ೧೦

ವಿಷ್ಣೋರರ್ಧಂ ಮಹಾಭಾಗಂ ಪುತ್ರಮೈಕ್ಷ್ವಾಕವರ್ಧನಮ್ ।
ಕೌಸಲ್ಯಾ ಶುಶುಭೇ ತೇನ ಪುತ್ರೇಣಾಮಿತತೇಜಸಾ ॥ ೧೧

ಯಥಾ ವರೇಣ ದೇವಾನಾಮದಿತಿರ್ವಜ್ರಪಾಣಿನಾ ।
ಭರತೋ ನಾಮ ಕೈಕೇಯ್ಯಾಂ ಜಜ್ಞೇ ಸತ್ಯಪರಾಕ್ರಮಃ ॥ ೧೨

ಸಾಕ್ಷಾದ್ವಿಷ್ಣೋಶ್ಚತುರ್ಭಾಗಃ ಸರ್ವೈಃ ಸಮುದಿತೋ ಗುಣೈಃ ।
ಅಥಲಕ್ಷ್ಮಣಶತ್ರುಘ್ನೌ ಸುಮಿತ್ರಾಜನಯತ್ ಸುತೌ ॥ ೧೩

ಸರ್ವಾಸ್ತ್ರಕುಶಲೌ ವೀರೌ ವಿಷ್ಣೋರರ್ಧಸಮನ್ವಿತೌ ।
ಪುಷ್ಯೇ ಜಾತಸ್ತು ಭರತೋ ಮೀನಲಗ್ನೇ ಪ್ರಸನ್ನಧೀಃ ॥ ೧೪

ಸಾರ್ಪೇ ಜಾತೌ ಚ ಸೌಮಿತ್ರೀ ಕುಲೀರೇಽಭ್ಯುದಿತೇ ರವೌ ।
ರಾಜ್ಞಃ ಪುತ್ರಾ ಮಹಾತ್ಮಾನಶ್ಚತ್ವಾರೋ ಜಜ್ಞಿರೇ ಪೃಥಕ್ ॥ ೧೫

ಗುಣವಂತೋಽನುರೂಪಾಶ್ಚ ರುಚ್ಯಾ ಪ್ರೋಷ್ಠಪದೋಪಮಾಃ ।
ಜಗುಃ ಕಲಂ ಚ ಗಂಧರ್ವಾ ನನೃತುಶ್ಚಾಪ್ಸರೋಗಣಾಃ ॥ ೧೬

ದೇವದುಂದುಭಯೋ ನೇದುಃ ಪುಷ್ಪವೃಷ್ಟಿಶ್ಚ ಖಾಚ್ಚ್ಯುತಾ ।
ಉತ್ಸವಶ್ಚ ಮಹಾನಾಸೀದಯೋಧ್ಯಾಯಾಂ ಜನಾಕುಲಃ ॥ ೧೭

ರಥ್ಯಾಶ್ಚ ಜನಸಂಬಾಧಾ ನಟನರ್ತಕಸಂಕುಲಾಃ ।
ಗಾಯನೈಶ್ಚ ವಿರಾವಿಣ್ಯೋ ವಾದನೈಶ್ಚ ತಥಾಪರೈಃ ॥ ೧೮

ವಿರೇಜುರ್ವಿಪುಲಾಸ್ತತ್ರ ಸರ್ವರತ್ನಸಮನ್ವಿತಾಃ ।
ಪ್ರದೇಯಾಂಶ್ಚ ದದೌ ರಾಜಾ ಸೂತಮಾಗಧವಂದಿನಾಮ್ ॥ ೧೯

ಬ್ರಾಹ್ಮಣೇಭ್ಯೋ ದದೌ ವಿತ್ತಂ ಗೋಧನಾನಿ ಸಹಸ್ರಶಃ ।
ಅತೀತ್ಯೈಕಾದಶಾಹಂ ತು ನಾಮಕರ್ಮ ತಥಾಕರೋತ್ ॥ ೨೦

ಜ್ಯೇಷ್ಠಂ ರಾಮಂ ಮಹಾತ್ಮಾನಂ ಭರತಂ ಕೈಕಯೀಸುತಮ್ ।
ಸೌಮಿತ್ರಿಂ ಲಕ್ಷ್ಮಣಮಿತಿ ಶತ್ರುಘ್ನಮಪರಂ ತಥಾ ॥ ೨೧

ವಸಿಷ್ಠಃ ಪರಮಪ್ರೀತೋ ನಾಮಾನಿ ಕೃತವಾಂಸ್ತದಾ ।
ಬ್ರಾಹ್ಮಣಾನ್ ಭೋಜಯಾಮಾಸ ಪೌರಾನ್ ಜಾನಪದಾನಪಿ ॥

ಅದದಾದ್ಬ್ರಾಹ್ಮಣಾನಾಂ ಚ ರತ್ನೌಘಮಮಿತಂ ಬಹು ।
ತೇಷಾಂ ಜನ್ಮಕ್ರಿಯಾದೀನಿ ಸರ್ವಕರ್ಮಾಣ್ಯಕಾರಯತ್ ॥ ೨೩

ತೇಷಾಂ ಕೇತುರಿವ ಜ್ಯೇಷ್ಠೋ ರಾಮೋ ರತಿಕರಃ ಪಿತುಃ ।
ಬಭೂವ ಭೂಯೋ ಭೂತಾನಾಂ ಸ್ವಯಂಭೂರಿವ ಸಂಮತಃ ॥ ೨೪

ಸರ್ವೇ ವೇದವಿದಃ ಶೂರಾಃ ಸರ್ವೇ ಲೋಕಹಿತೇ ರತಾಃ ।
ಸರ್ವೇ ಜ್ಞಾನೋಪಸಂಪನ್ನಾಃ ಸರ್ವೇ ಸಮುದಿತಾ ಗುಣೈಃ ॥ ೨೫

ತೇಷಾಮಪಿ ಮಹಾತೇಜಾ ರಾಮಃ ಸತ್ಯಪರಾಕ್ರಮಃ ।
ಇಷ್ಟಃ ಸರ್ವಸ್ಯ ಲೋಕಸ್ಯ ಶಶಾಂಕ ಇವ ನಿರ್ಮಲಃ ॥ ೨೬

ಗಜಸ್ಕಂಧೇಽಶ್ವಪೃಷ್ಠೇ ಚ ರಥಚರ್ಯಾಸು ಸಂಮತಃ ।
ಧನುರ್ವೇದೇ ಚ ನಿರತಃ ಪಿತೃಶುಶ್ರೂಷಣೇ ರತಃ ॥ ೨೭

ಬಾಲ್ಯಾತ್ ಪ್ರಭೃತಿ ಸುಸ್ನಿಗ್ಧೋ ಲಕ್ಷ್ಮಣೋ ಲಕ್ಷ್ಮಿವರ್ಧನಃ ।
ರಾಮಸ್ಯ ಲೋಕರಾಮಸ್ಯ ಭ್ರಾತುರ್ಜ್ಯೇಷ್ಠಸ್ಯ ನಿತ್ಯಶಃ ॥ ೨೮

ಸರ್ವಪ್ರಿಯಕರಸ್ತಸ್ಯ ರಾಮಸ್ಯಾಪಿ ಶರೀರತಃ ।
ಲಕ್ಷ್ಮಣೋ ಲಕ್ಷ್ಮಿಸಂಪನ್ನೋ ಬಹಿಃಪ್ರಾಣ ಇವಾಪರಃ ॥ ೨೯

ನ ಚ ತೇನ ವಿನಾ ನಿದ್ರಾಂ ಲಭತೇ ಪುರುಷೋತ್ತಮಃ ।
ಮೃಷ್ಟಮನ್ನಮುಪಾನೀತಮಶ್ನಾತಿ ನ ಹಿ ತಂ ವಿನಾ ॥ ೩೦

ಯದಾ ಹಿ ಹಯಮಾರೂಢೋ ಮೃಗಯಾಂ ಯಾತಿ ರಾಘವಃ ।
ತದೈನಂ ಪೃಷ್ಠತೋಽಭ್ಯೇತಿ ಸಧನುಃ ಪರಿಪಾಲಯನ್ ॥ ೩೧

ಭರತಸ್ಯಾಪಿ ಶತ್ರುಘ್ನೋ ಲಕ್ಷ್ಮಣಾವರಜೋ ಹಿ ಸಃ ।
ಪ್ರಾಣೈಃ ಪ್ರಿಯತರೋ ನಿತ್ಯಂ ತಸ್ಯ ಚಾಸೀತ್ತಥಾ ಪ್ರಿಯಃ ॥ ೩೨

ಸ ಚತುರ್ಭಿರ್ಮಹಾಭಾಗೈಃ ಪುತ್ರೈರ್ದಶರಥಃ ಪ್ರಿಯೈಃ ।
ಬಭೂವ ಪರಮಪ್ರೀತೋ ದೇವೈರಿವ ಪಿತಾಮಹಃ ॥ ೩೩

ತೇ ಯದಾ ಜ್ಞಾನಸಂಪನ್ನಾಃ ಸರ್ವೇ ಸಮುದಿತಾ ಗುಣೈಃ ।
ಹ್ರೀಮಂತಃ ಕೀರ್ತಿಮಂತಶ್ಚ ಸರ್ವಜ್ಞಾ ದೀರ್ಘದರ್ಶಿನಃ ॥ ೩೪

ತೇಷಾಮೇವಂ ಪ್ರಭಾವಾಣಾಂ ಸರ್ವೇಷಾಂ ದೀಪ್ತತೇಜಸಾಮ್ ।
ಪಿತಾ ದಶರಥೋ ಹೃಷ್ಟೋ ಬ್ರಹ್ಮಾ ಲೋಕಾಧಿಪೋ ಯಥಾ ॥

ತೇ ಚಾಪಿ ಮನುಜವ್ಯಾಘ್ರಾ ವೈದಿಕಾಧ್ಯಯನೇ ರತಾಃ ।
ಪಿತೃಶುಶ್ರೂಷಣರತಾ ಧನುರ್ವೇದೇ ಚ ನಿಷ್ಠಿತಾಃ ॥ ೩೬

ಅಥ ರಾಜಾ ದಶರಥಸ್ತೇಷಾಂ ದಾರಕ್ರಿಯಾಂ ಪ್ರತಿ ।
ಚಿಂತಯಾಮಾಸ ಧರ್ಮಾತ್ಮಾ ಸೋಪಾಧ್ಯಾಯಃ ಸಬಾಂಧವಃ ॥

ತಸ್ಯ ಚಿಂತಯಮಾನಸ್ಯ ಮಂತ್ರಿಮಧ್ಯೇ ಮಹಾತ್ಮನಃ ।
ಅಭ್ಯಾಗಚ್ಛನ್ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ ॥ ೩೮

ಸ ರಾಜ್ಞೋ ದರ್ಶನಾಕಾಂಕ್ಷೀ ದ್ವಾರಾಧ್ಯಕ್ಷಾನುವಾಚ ಹ ।
ಶೀಘ್ರಮಾಖ್ಯಾತ ಮಾಂ ಪ್ರಾಪ್ತಂ ಕೌಶಿಕಂ ಗಾಧಿನಃ ಸುತಮ್ ॥

ತಚ್ಛ್ರುತ್ವಾ ವಚನಂ ತ್ರಾಸಾದ್ರಾಜ್ಞೋ ವೇಶ್ಮ ಪ್ರದುದ್ರುವುಃ ।
ಸಂಭ್ರಾಂತಮನಸಃ ಸರ್ವೇ ತೇನ ವಾಕ್ಯೇನ ಚೋದಿತಾಃ ॥ ೪೦

ತೇ ಗತ್ವಾ ರಾಜಭವನಂ ವಿಶ್ವಾಮಿತ್ರಮೃಷಿಂ ತದಾ ।
ಪ್ರಾಪ್ತಮಾವೇದಯಾಮಾಸುರ್ನೃಪಾಯೇಕ್ಷ್ವಾಕವೇ ತದಾ ॥ ೪೧

ತೇಷಾಂ ತದ್ವಚನಂ ಶ್ರುತ್ವಾ ಸಪುರೋಧಾಃ ಸಮಾಹಿತಃ ।
ಪ್ರತ್ಯುಜ್ಜಗಾಮ ತಂ ಹೃಷ್ಟೋ ಬ್ರಹ್ಮಾಣಮಿವ ವಾಸವಃ ॥ ೪೨

ತಂ ದೃಷ್ಟ್ವಾ ಜ್ವಲಿತಂ ದೀಪ್ತ್ಯಾ ತಾಪಸಂ ಸಂಶಿತವ್ರತಮ್ ।
ಪ್ರಹೃಷ್ಟವದನೋ ರಾಜಾ ತತೋಽರ್ಘ್ಯಮುಪಹಾರಯತ್ ॥ ೪೩

ಸ ರಾಜ್ಞಃ ಪ್ರತಿಗೃಹ್ಯಾರ್ಘ್ಯಂ ಶಾಸ್ತ್ರದೃಷ್ಟೇನ ಕರ್ಮಣಾ ।
ಕುಶಲಂ ಚಾವ್ಯಯಂ ಚೈವ ಪರ್ಯಪೃಚ್ಛನ್ನರಾಧಿಪಮ್ ॥ ೪೪

ಪುರೇ ಕೋಶೇ ಜನಪದೇ ಬಾಂಧವೇಷು ಸುಹೃತ್ಸು ಚ ।
ಕುಶಲಂ ಕೌಶಿಕೋ ರಾಜ್ಞಃ ಪರ್ಯಪೃಚ್ಛತ್ ಸುಧಾರ್ಮಿಕಃ ॥

ಅಪಿ ತೇ ಸಂನತಾಃ ಸರ್ವೇ ಸಾಮಂತಾ ರಿಪವೋ ಜಿತಾಃ ।
ದೈವಂ ಚ ಮಾನುಷಂ ಚಾಪಿ ಕರ್ಮ ತೇ ಸಾಧ್ವನುಷ್ಠಿತಮ್ ॥

ವಸಿಷ್ಠಂ ಚ ಸಮಾಗಮ್ಯ ಕುಶಲಂ ಮುನಿಪುಂಗವಃ ।
ಋಷೀಂಶ್ಚಾನ್ಯಾನ್ ಯಥಾನ್ಯಾಯಂ ಮಹಾಭಾಗಾನುವಾಚ ಹ ॥

ತೇ ಸರ್ವೇ ಹೃಷ್ಟಮನಸಸ್ತಸ್ಯ ರಾಜ್ಞೋ ನಿವೇಶನಮ್ ।
ವಿವಿಶುಃ ಪೂಜಿತಾಸ್ತತ್ರ ನಿಷೇದುಶ್ಚ ಯಥಾರ್ಹತಃ ॥ ೪೮

ಅಥ ಹೃಷ್ಟಮನಾ ರಾಜಾ ವಿಶ್ವಾಮಿತ್ರಂ ಮಹಾಮುನಿಮ್ ।
ಉವಾಚ ಪರಮೋದಾರೋ ಹೃಷ್ಟಸ್ತಮಭಿಪೂಜಯನ್ ॥ ೪೯

ಯಥಾಮೃತಸ್ಯ ಸಂಪ್ರಾಪ್ತಿರ್ಯಥಾ ವರ್ಷಮನೂದಕೇ ।
ಯಥಾ ಸದೃಶದಾರೇಷು ಪುತ್ರಜನ್ಮಾಪ್ರಜಸ್ಯ ಚ ॥ ೫೦

ಪ್ರಣಷ್ಟಸ್ಯ ಯಥಾ ಲಾಭೋ ಯಥಾ ಹರ್ಷೋ ಮಹೋದಯೇ ।
ತಥೈವಾಗಮನಂ ಮನ್ಯೇ ಸ್ವಾಗತಂ ತೇ ಮಹಾಮುನೇ ॥ ೫೧

ಕಂ ಚ ತೇ ಪರಮಂ ಕಾಮಂ ಕರೋಮಿ ಕಿಮು ಹರ್ಷಿತಃ ।
ಪಾತ್ರಭೂತೋಽಸಿ ಮೇ ಬ್ರಹ್ಮನ್ ದಿಷ್ಟ್ಯಾ ಪ್ರಾಪ್ತೋಽಸಿ ಧಾರ್ಮಿಕ

ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಮ್ ।
ಪೂರ್ವಂ ರಾಜರ್ಷಿಶಬ್ದೇನ ತಪಸಾ ದ್ಯೋತಿತಪ್ರಭಃ ॥ ೫೩

ಬ್ರಹ್ಮರ್ಷಿತ್ವಮನುಪ್ರಾಪ್ತಃ ಪೂಜ್ಯೋಽಸಿ ಬಹುಧಾ ಮಯಾ ।
ತದದ್ಭುತಮಿದಂ ಬ್ರಹ್ಮನ್ ಪವಿತ್ರಂ ಪರಮಂ ಮಮ ॥ ೫೪

ಶುಭಕ್ಷೇತ್ರಗತಶ್ಚಾಹಂ ತವ ಸಂದರ್ಶನಾತ್ ಪ್ರಭೋ ।
ಬ್ರೂಹಿ ಯತ್ ಪ್ರಾರ್ಥಿತಂ ತುಭ್ಯಂ ಕಾರ್ಯಮಾಗಮನಂ ಪ್ರತಿ॥

ಇಚ್ಛಾಮ್ಯನುಗೃಹೀತೋಽಹಂ ತ್ವದರ್ಥಪರಿವೃದ್ಧಯೇ ।
ಕಾರ್ಯಸ್ಯ ನ ವಿಮರ್ಶಂ ಚ ಗಂತುಮರ್ಹಸಿ ಕೌಶಿಕ ॥ ೫೬

ಕರ್ತಾ ಚಾಹಮಶೇಷೇಣ ದೈವತಂ ಹಿ ಭವಾನ್ ಮಮ ।
ಮಮ ಚಾಯಮನುಪ್ರಾಪ್ತೋ ಮಹಾನಭ್ಯುದಯೋ ದ್ವಿಜ ॥ ೫೭

ತವಾಗಮನಜಃ ಕೃತ್ಸ್ನೋ ಧರ್ಮಶ್ಚಾನುತ್ತಮೋ ಮಮ ॥

ಇತಿ ಹೃದಯಸುಖಂ ನಿಶಮ್ಯ ವಾಕ್ಯಂ
ಶ್ರುತಿಸುಖಮಾತ್ಮವತಾ ವಿನೀತಮುಕ್ತಮ್ ।
ಪ್ರಥಿತಗುಣಯಶಾ ಗುಣೈರ್ವಿಶಿಷ್ಟಃ
ಪರಮಋಷಿಃ ಪರಮಂ ಜಗಾಮ ಹರ್ಷಮ್ ॥ ೫೮



ಯಸ್ಮಿಂಸ್ತು ದಿವಸೇ ರಾಜಾ ಚಕ್ರೇ ಗೋದಾನಮುತ್ತಮಮ್ ।
ತಸ್ಮಿಂಸ್ತು ದಿವಸೇ ಶೂರೋ ಯುಧಾಜಿತ್ ಸಮುಪೇಯಿವಾನ್ ॥

ಪುತ್ರಃ ಕೇಕಯರಾಜಸ್ಯ ಸಾಕ್ಷಾದ್ಭರತಮಾತುಲಃ ।
ದೃಷ್ಟ್ವಾ ಪೃಷ್ಟ್ವಾ ಚ ಕುಶಲಂ ರಾಜಾನಮಿದಮಬ್ರವೀತ್ ॥ ೨

ಕೇಕಯಾಧಿಪತೀ ರಾಜಾ ಸ್ನೇಹಾತ್ ಕುಶಲಮಬ್ರವೀತ್ ।
ಯೇಷಾಂ ಕುಶಲಕಾಮೋಽಸಿ ತೇಷಾಂ ಸಂಪ್ರತ್ಯನಾಮಯಮ್ ॥

ಸ್ವಸ್ರೀಯಂ ಮಮ ರಾಜೇಂದ್ರ ದ್ರಷ್ಟುಕಾಮೋ ಮಹೀಪತಿಃ ।
ತದರ್ಥಮುಪಯಾತೋಽಹಮಯೋಧ್ಯಾಂ ರಘುನಂದನ ॥ ೪

ಶ್ರುತ್ವಾ ತ್ವಹಮಯೋಧ್ಯಾಯಾಂ ವಿವಾಹಾರ್ಥಂ ತವಾತ್ಮಜಾನ್ ।
ಮಿಥಿಲಾಮುಪಯಾತಾಂಸ್ತು ತ್ವಯಾ ಸಹ ಮಹೀಪತೇ ॥ ೫

ತ್ವರಯಾಭ್ಯುಪಯಾತೋಽಹಂ ದ್ರಷ್ಟುಕಾಮಃ ಸ್ವಸುಃ ಸುತಮ್ ।
ಅಥ ರಾಜಾ ದಶರಥಃ ಪ್ರಿಯಾತಿಥಿಮುಪಸ್ಥಿತಮ್ ॥ ೬

ದೃಷ್ಟ್ವಾ ಪರಮಸತ್ಕಾರೈಃ ಪೂಜನಾರ್ಹಮಪೂಜಯತ್ ।
ತತಸ್ತಾಮುಷಿತೋ ರಾತ್ರಿಂ ಸಹ ಪುತ್ರೈರ್ಮಹಾತ್ಮಭಿಃ ॥ ೭

ಪ್ರಭಾತೇ ಪುನರುತ್ಥಾಯ ಕೃತ್ವಾ ಕರ್ಮಾಣಿ ಕರ್ಮವಿತ್ ।
ಋಷೀಂಸ್ತದಾ ಪುರಸ್ಕೃತ್ಯ ಯಜ್ಞವಾಟಮುಪಾಗಮತ್ ॥ ೮

ಯುಕ್ತೇ ಮುಹೂರ್ತೇ ವಿಜಯೇ ಸರ್ವಾಭರಣಭೂಷಿತೈಃ ।
ಭ್ರಾತೃಭಿಃ ಸಹಿತೋ ರಾಮಃ ಕೃತಕೌತುಕಮಂಗಲಃ ॥ ೯

ವಸಿಷ್ಠಂ ಪುರತಃ ಕೃತ್ವಾ ಮಹರ್ಷೀನಪರಾನಪಿ ।
ಪಿತುಃ ಸಮೀಪಮಾಶ್ರಿತ್ಯ ತಸ್ಥೌ ಭ್ರಾತೃಭಿರಾವೃತಃ ॥ ೧೦

ವಸಿಷ್ಠೋ ಭಗವಾನೇತ್ಯ ವೈದೇಹಮಿದಮಬ್ರವೀತ್ ।
ರಾಜಾ ದಶರಥೋ ರಾಜನ್ ಕೃತಕೌತುಕಮಂಗಲೈಃ ॥ ೧೧

ಪುತ್ರೈರ್ನರವರಶ್ರೇಷ್ಠ ದಾತಾರಮಭಿಕಾಂಕ್ಷತೇ ।
ದಾತೃಪ್ರತಿಗ್ರಹೀತೃಭ್ಯಾಂ ಸರ್ವಾರ್ಥಾಃ ಪ್ರಭವಂತಿ ಹಿ ॥ ೧೨

ಸ್ವಧರ್ಮಂ ಪ್ರತಿಪದ್ಯಸ್ವ ಕೃತ್ವಾ ವೈವಾಹ್ಯಮುತ್ತಮಮ್ ।
ಇತ್ಯುಕ್ತಃ ಪರಮೋದಾರೋ ವಸಿಷ್ಠೇನ ಮಹಾತ್ಮನಾ ॥ ೧೩

ಪ್ರತ್ಯುವಾಚ ಮಹಾತೇಜಾ ವಾಕ್ಯಂ ಪರಮಧರ್ಮವಿತ್ ।
ಕಃ ಸ್ಥಿತಃ ಪ್ರತಿಹಾರೋ ಮೇ ಕಸ್ಯಾಜ್ಞಾ ಸಂಪ್ರತೀಕ್ಷ್ಯತೇ ॥ ೧೪

ಸ್ವಗೃಹೇ ಕೋ ವಿಚಾರೋಽಸ್ತಿ ಯಥಾ ರಾಜ್ಯಮಿದಂ ತವ ।
ಕೃತಕೌತುಕಸರ್ವಸ್ವಾ ವೇದಿಮೂಲಮುಪಾಗತಾಃ ॥ ೧೫

ಮಮ ಕನ್ಯಾ ಮುನಿಶ್ರೇಷ್ಠ ದೀಪ್ತಾ ವಹ್ನೇರ್ಯಥಾರ್ಚಿಷಃ ।
ಸಜ್ಜೋಽಹಂ ತ್ವತ್ಪ್ರತೀಕ್ಷೋಽಸ್ಮಿ ವೇದ್ಯಾಮಸ್ಯಾಂ ಪ್ರತಿಷ್ಠಿತಃ ॥

ಅವಿಘ್ನಂ ಕ್ರಿಯತಾಂ ಸರ್ವಂ ಕಿಮರ್ಥಂ ಹಿ ವಿಲಂಬ್ಯತೇ ।
ತದ್ವಾಕ್ಯಂ ಜನಕೇನೋಕ್ತಂ ಶ್ರುತ್ವಾ ದಶರಥಸ್ತದಾ ॥ ೧೭

ಪ್ರವೇಶಯಾಮಾಸ ಸುತಾನ್ ಸರ್ವಾನೃಷಿಗಣಾನಪಿ ।
ತತೋ ರಾಜಾ ವಿದೇಹಾನಾಂ ವಸಿಷ್ಠಮಿದಮಬ್ರವೀತ್ ॥ ೧೮

ಕಾರಯಸ್ವ ಋಷೇ ಸರ್ವಮೃಷಿಭಿಃ ಸಹ ಧಾರ್ಮಿಕ ।
ರಾಮಸ್ಯ ಲೋಕರಾಮಸ್ಯ ಕ್ರಿಯಾಂ ವೈವಾಹಿಕೀಂ ಪ್ರಭೋ ॥ ೧೯

ತಥೇತ್ಯುಕ್ತ್ವಾ ತು ಜನಕಂ ವಸಿಷ್ಠೋ ಭಗವಾನೃಷಿಃ ।
ವಿಶ್ವಾಮಿತ್ರಂ ಪುರಸ್ಕೃತ್ಯ ಶತಾನಂದಂ ಚ ಧಾರ್ಮಿಕಮ್ ॥ ೨೦

ಪ್ರಪಾಮಧ್ಯೇ ತು ವಿಧಿವದ್ವೇದಿಂ ಕೃತ್ವಾ ಮಹಾತಪಾಃ ।
ಅಲಂಚಕಾರ ತಾಂ ವೇದಿಂ ಗಂಧಪುಷ್ಪೈಃ ಸಮಂತತಃ ॥ ೨೧

ಸುವರ್ಣಪಾಲಿಕಾಭಿಶ್ಚ ಛಿದ್ರಕುಂಭೈಶ್ಚ ಸಾಂಕುರೈಃ ।
ಅಂಕುರಾಢ್ಯೈಃ ಶರಾವೈಶ್ಚ ಧೂಪಪಾತ್ರೈಃ ಸಧೂಪಕೈಃ ॥ ೨೨

ಶಂಖಪಾತ್ರೈಃ ಸ್ರುವೈಃ ಸ್ರುಗ್ಭಿಃ ಪಾತ್ರೈರರ್ಘ್ಯಾಭಿಪೂರಿತೈಃ ।
ಲಾಜಪೂರ್ಣೈಶ್ಚ ಪಾತ್ರೀಭಿರಕ್ಷತೈರಪಿ ಸಂಸ್ಕೃತೈಃ ॥ ೨೩

ದರ್ಭೈಃ ಸಮೈಃ ಸಮಾಸ್ತೀರ್ಯ ವಿಧಿವನ್ಮಂತ್ರಪೂರ್ವಕಮ್ ।
ಅಗ್ನಿಮಾಧಾಯ ವೇದ್ಯಾಂ ತು ವಿಧಿಮಂತ್ರಪುರಸ್ಕೃತಮ್ ॥ ೨೪

ಜುಹಾವಾಗ್ನೌ ಮಹಾತೇಜಾ ವಸಿಷ್ಠೋ ಭಗವಾನೃಷಿಃ ।
ತತಃ ಸೀತಾಂ ಸಮಾನೀಯ ಸರ್ವಾಭರಣಭೂಷಿತಾಮ್ ॥ ೨೫

ಸಮಕ್ಷಮಗ್ನೇಃ ಸಂಸ್ಥಾಪ್ಯ ರಾಘವಾಭಿಮುಖೇ ತದಾ ।
ಅಬ್ರವೀಜ್ಜನಕೋ ರಾಜಾ ಕೌಸಲ್ಯಾನಂದವರ್ಧನಮ್ ॥ ೨೬

ಇಯಂ ಸೀತಾ ಮಮ ಸುತಾ ಸಹಧರ್ಮಚರೀ ತವ ।
ಪ್ರತೀಚ್ಛ ಚೈನಾಂ ಭದ್ರಂ ತೇ ಪಾಣಿಂ ಗೃಹ್ಣೀಷ್ವ ಪಾಣಿನಾ ॥ ೨೭

ಪತಿವ್ರತಾ ಮಹಾಭಾಗಾ ಛಾಯೇವಾನುಗತಾ ಸದಾ ।
ಇತ್ಯುಕ್ತ್ವಾ ಪ್ರಾಕ್ಷಿಪದ್ರಾಜಾ ಮಂತ್ರಪೂತಂ ಜಲಂ ತದಾ ॥ ೨೮

ಸಾಧು ಸಾಧ್ವಿತಿ ದೇವಾನಾಮೃಷೀಣಾಂ ವದತಾಂ ತದಾ ।
ದೇವದುಂದುಭಿನಿರ್ಘೋಷಃ ಪುಷ್ಪವರ್ಷೋ ಮಹಾನಭೂತ್ ॥

ಏವಂ ದತ್ತ್ವಾ ಸುತಾಂ ಸೀತಾಂ ಮಂತ್ರೋದಕಪುರಸ್ಕೃತಾಮ್ ।
ಅಬ್ರವೀಜ್ಜನಕೋ ರಾಜಾ ಹರ್ಷೇಣಾಭಿಪರಿಪ್ಲುತಃ ॥ ೩೦

ಲಕ್ಷ್ಮಣಾಗಚ್ಛ ಭದ್ರಂ ತೇ ಊರ್ಮಿಲಾಮುದ್ಯತಾಂ ಮಯಾ ।
ಪ್ರತೀಚ್ಛ ಪಾಣಿಂ ಗೃಹ್ಣೀಷ್ವ ಮಾ ಭೂತ್ ಕಾಲಸ್ಯ ಪರ್ಯಯಃ ॥

ತಮೇವಮುಕ್ತ್ವಾ ಜನಕೋ ಭರತಂ ಚಾಭ್ಯಭಾಷತ ।
ಪಾಣಿಂ ಗೃಹಾಣ ಮಾಂಡವ್ಯಾಃ ಪಾಣಿನಾ ರಘುನಂದನ ॥ ೩೨

ಶತ್ರುಘ್ನಂ ಚಾಪಿ ಧರ್ಮಾತ್ಮಾ ಅಬ್ರವೀಜ್ಜನಕೇಶ್ವರಃ ।
ಶ್ರುತಕೀರ್ತ್ಯಾ ಮಹಾಬಾಹೋ ಪಾಣಿಂ ಗೃಹ್ಣೀಷ್ವ ಪಾಣಿನಾ ॥

ಸರ್ವೇ ಭವಂತಃ ಸೌಮ್ಯಾಶ್ಚ ಸರ್ವೇ ಸುಚರಿತವ್ರತಾಃ ।
ಪತ್ನೀಭಿಃ ಸಂತು ಕಾಕುತ್ಸ್ಥಾ ಮಾ ಭೂತ್ ಕಾಲಸ್ಯ ಪರ್ಯಯಃ ॥

ಜನಕಸ್ಯ ವಚಃ ಶ್ರುತ್ವಾ ಪಾಣೀನ್ ಪಾಣಿಭಿರಸ್ಪೃಶನ್ ।
ಚತ್ವಾರಸ್ತೇ ಚತಸೃಣಾಂ ವಸಿಷ್ಠಸ್ಯ ಮತೇ ಸ್ಥಿತಾಃ ॥ ೩೫

ಅಗ್ನಿಂ ಪ್ರದಕ್ಷಿಣಂ ಕೃತ್ವಾ ವೇದಿಂ ರಾಜಾನಮೇವ ಚ ।
ಋಷೀಂಶ್ಚೈವ ಮಹಾತ್ಮಾನಃ ಸಭಾರ್ಯಾ ರಘುಸತ್ತಮಾಃ ॥ ೩೬

ಯಥೋಕ್ತೇನ ತದಾ ಚಕ್ರುರ್ವಿವಾಹಂ ವಿಧಿಪೂರ್ವಕಮ್ ।
ಕಾಕುತ್ಸೈಶ್ಚ ಗೃಹೀತೇಷು ಲಲಿತೇಷು ಚ ಪಾಣಿಷು ॥ ೩೭

ಪುಷ್ಪವೃಷ್ಟಿರ್ಮಹತ್ಯಾಸೀದಂತರಿಕ್ಷಾತ್ ಸುಭಾಸ್ವರಾ ।
ದಿವ್ಯದುಂದುಭಿನಿರ್ಘೋಷೈರ್ಗೀತವಾದಿತ್ರನಿಃಸ್ವನೈಃ ॥ ೩೮

ನನೃತುಶ್ಚಾಪ್ಸರಃಸಂಘಾ ಗಂಧರ್ವಾಶ್ಚ ಜಗುಃ ಕಲಮ್ ।
ವಿವಾಹೇ ರಘುಮುಖ್ಯಾನಾಂ ತದದ್ಭುತಮದೃಶ್ಯತ ॥ ೩೯

ಈದೃಶೇ ವರ್ತಮಾನೇ ತು ತೂರ್ಯೋದ್ಘುಷ್ಟನಿನಾದಿತೇ ।
ತ್ರಿರಗ್ನಿಂ ತೇ ಪರಿಕ್ರಮ್ಯ ಊಹುರ್ಭಾರ್ಯಾ ಮಹೌಜಸಃ ॥ ೪೦

ಅಥೋಪಕಾರ್ಯಾಂ ಜಗ್ಮುಸ್ತೇ ಸಭಾರ್ಯಾ ರಘುನಂದನಾಃ ।
ರಾಜಾಪ್ಯನುಯಯೌ ಪಶ್ಯನ್ ಸರ್ಷಿಸಂಘಃ ಸಬಾಂಧವಃ ॥ ೪೧

---

## ಆದಿತ್ಯಹೃದಯಮ್

ತತೋ ಯುದ್ಧಪರಿಶ್ರಾಂತಂ ಸಮರೇ ಚಿಂತಯಾ ಸ್ಥಿತಮ್ ।
ರಾವಣಂ ಚಾಗ್ರತೋ ದೃಷ್ಟ್ವಾ ಯುದ್ಧಾಯ ಸಮುಪಸ್ಥಿತಮ್ ॥

ದೈವತೈಶ್ಚ ಸಮಾಗಮ್ಯ ದ್ರಷ್ಟುಮಭ್ಯಾಗತೋ ರಣಮ್ ।
ಉಪಾಗಮ್ಯಾಬ್ರವೀದ್ರಾಮಮಗಸ್ತ್ಯೋ ಭಗವಾನೃಷಿಃ ॥ ೨

ರಾಮ ರಾಮ ಮಹಾಬಾಹೋ ಶೃಣು ಗುಹ್ಯಂ ಸನಾತನಮ್ ।
ಯೇನ ಸರ್ವಾನರೀನ್ ವತ್ಸ ಸಮರೇ ವಿಜಯಿಷ್ಯಸಿ ॥ ೩

ಆದಿತ್ಯಹೃದಯಂ ಪುಣ್ಯಂ ಸರ್ವಶತ್ರುವಿನಾಶನಮ್ ।
ಜಯಾವಹಂ ಜಪೇನ್ನಿತ್ಯಮಕ್ಷಯ್ಯಂ ಪರಮಂ ಶಿವಮ್ ॥ ೪

ಸರ್ವಮಂಗಲಮಾಂಗಲ್ಯಂ ಸರ್ವಪಾಪಪ್ರಣಾಶನಮ್ ।
ಚಿಂತಾಶೋಕಪ್ರಶಮನಮಾಯುರ್ವರ್ಧನಮುತ್ತಮಮ್ ॥ ೫

ರಶ್ಮಿಮಂತಂ ಸಮುದ್ಯಂತಂ ದೇವಾಸುರನಮಸ್ಕೃತಮ್ ।
ಪೂಜಯಸ್ವ ವಿವಸ್ವಂತಂ ಭಾಸ್ಕರಂ ಭುವನೇಶ್ವರಮ್ ॥ ೬

ಸರ್ವದೇವಾತ್ಮಕೋ ಹ್ಯೇಷ ತೇಜಸ್ವೀ ರಶ್ಮಿಭಾವನಃ ।
ಏಷ ದೇವಾಸುರಗಣಾನ್ ಲೋಕಾನ್ ಪಾತಿ ಗಭಸ್ತಿಭಿಃ ॥ ೭

ಏಷ ಬ್ರಹ್ಮಾ ಚ ವಿಷ್ಣುಶ್ಚ ಶಿವಃ ಸ್ಕಂದಃ ಪ್ರಜಾಪತಿಃ ।
ಮಹೇಂದ್ರೋ ಧನದಃ ಕಾಲೋ ಯಮಃ ಸೋಮೋ ಹ್ಯಪಾಂಪತಿಃ

ಪಿತರೋ ವಸವಃ ಸಾಧ್ಯಾ ಹ್ಯಶ್ವಿನೌ ಮರುತೋ ಮನುಃ ।
ವಾಯುರ್ವಹ್ನಿಃ ಪ್ರಜಾಪ್ರಾಣ ಋತುಕರ್ತಾ ಪ್ರಭಾಕರಃ ॥ ೯

ಆದಿತ್ಯಃ ಸವಿತಾ ಸೂರ್ಯಃ ಖಗಃ ಪೂಷಾ ಗಭಸ್ತಿಮಾನ್ ।
ಸುವರ್ಣಸದೃಶೋ ಭಾನುಃ ಸ್ವರ್ಣರೇತಾ ದಿವಾಕರಃ ॥ ೧೦

ಹರಿದಶ್ವಃ ಸಹಸ್ರಾರ್ಚಿಃ ಸಪ್ತಸಪ್ತಿರ್ಮರೀಚಿಮಾನ್ ।
ತಿಮಿರೋನ್ಮಥನಃ ಶಂಭುಸ್ತ್ವಷ್ಟಾ ಮಾರ್ತಂಡ ಅಂಶುಮಾನ್ ॥

ಹಿರಣ್ಯಗರ್ಭಃ ಶಿಶಿರಸ್ತಪನೋ ಭಾಸ್ಕರೋ ರವಿಃ ।
ಅಗ್ನಿಗರ್ಭೋಽದಿತೇಃ ಪುತ್ರಃ ಶಂಖಃ ಶಿಶಿರನಾಶನಃ ॥ ೧೨

ವ್ಯೋಮನಾಥಸ್ತಮೋಭೇದೀ ಋಗ್ಯಜುಃಸಾಮಪಾರಗಃ ।
ಘನವೃಷ್ಟಿರಪಾಂ ಮಿತ್ರೋ ವಿಂಧ್ಯವೀಥೀಪ್ಲವಂಗಮಃ ॥ ೧೩

ಆತಪೀ ಮಂಡಲೀ ಮೃತ್ಯುಃ ಪಿಂಗಲಃ ಸರ್ವತಾಪನಃ ।
ಕವಿರ್ವಿಶ್ವೋ ಮಹಾತೇಜಾ ರಕ್ತಃ ಸರ್ವಭವೋದ್ಭವಃ ॥ ೧೪

ನಕ್ಷತ್ರಗ್ರಹತಾರಾಣಾಮಧಿಪೋ ವಿಶ್ವಭಾವನಃ ।
ತೇಜಸಾಮಪಿ ತೇಜಸ್ವೀ ದ್ವಾದಶಾತ್ಮನ್ನಮೋಽಸ್ತು ತೇ ॥ ೧೫

ನಮಃ ಪೂರ್ವಾಯ ಗಿರಯೇ ಪಶ್ಚಿಮಾಯಾದ್ರಯೇ ನಮಃ ।
ಜ್ಯೋತಿರ್ಗಣಾನಾಂ ಪತಯೇ ದಿನಾಧಿಪತಯೇ ನಮಃ ॥ ೧೬

ಜಯಾಯ ಜಯಭದ್ರಾಯ ಹರ್ಯಶ್ವಾಯ ನಮೋ ನಮಃ ।
ನಮೋ ನಮಃ ಸಹಸ್ರಾಂಶೋ ಆದಿತ್ಯಾಯ ನಮೋ ನಮಃ ॥ ೧೭

ನಮ ಉಗ್ರಾಯ ವೀರಾಯ ಸಾರಂಗಾಯ ನಮೋ ನಮಃ ।
ನಮಃ ಪದ್ಮಪ್ರಭೋಧಾಯ ಮಾರ್ತಂಡಾಯ ನಮೋ ನಮಃ ॥ ೧೮

ಬ್ರಹ್ಮೇಶಾನಾಚ್ಯುತೇಶಾಯ ಸೂರ್ಯಾಯಾದಿತ್ಯವರ್ಚಸೇ ।
ಭಾಸ್ವತೇ ಸರ್ವಭಕ್ಷಾಯ ರೌದ್ರಾಯ ವಪುಷೇ ನಮಃ ॥ ೧೯

ತಮೋಘ್ನಾಯ ಹಿಮಘ್ನಾಯ ಶತ್ರುಘ್ನಾಯಾಮಿತಾತ್ಮನೇ ।
ಕೃತಘ್ನಘ್ನಾಯ ದೇವಾಯ ಜ್ಯೋತಿಷಾಂ ಪತಯೇ ನಮಃ ॥ ೨೦

ತಪ್ತಚಾಮೀಕರಾಭಾಯ ವಹ್ನಯೇ ವಿಶ್ವಕರ್ಮಣೇ ।
ನಮಸ್ತಮೋಽಭಿನಿಘ್ನಾಯ ರವಯೇ ಲೋಕಸಾಕ್ಷಿಣೇ ॥ ೨೧

ನಾಶಯತ್ಯೇಷ ವೈ ಭೂತಂ ತದೇವ ಸೃಜತಿ ಪ್ರಭುಃ ।
ಪಾಯತ್ಯೇಷ ತಪತ್ಯೇಷ ವರ್ಷತ್ಯೇಷ ಗಭಸ್ತಿಭಿಃ ॥ ೨೨

ಏಷ ಸುಪ್ತೇಷು ಜಾಗರ್ತಿ ಭೂತೇಷು ಪರಿನಿಷ್ಠಿತಃ ।
ಏಷ ಏವಾಗ್ನಿಹೋತ್ರಂ ಚ ಫಲಂ ಚೈವಾಗ್ನಿಹೋತ್ರಿಣಾಮ್ ॥ ೨೩

ವೇದಾಶ್ಚ ಕ್ರತವಶ್ಚೈವ ಕ್ರತೂನಾಂ ಫಲಮೇವ ಚ ।
ಯಾನಿ ಕೃತ್ಯಾನಿ ಲೋಕೇಷು ಸರ್ವ ಏಷ ರವಿಃ ಪ್ರಭುಃ ॥ ೨೪

ಏನಮಾಪತ್ಸು ಕೃಚ್ಛ್ರೇಷು ಕಾಂತಾರೇಷು ಭಯೇಷು ಚ ।
ಕೀರ್ತಯನ್ ಪುರುಷಃ ಕಶ್ಚಿನ್ನಾವಸೀದತಿ ರಾಘವ ॥ ೨೫

ಪೂಜಯಸ್ವೈನಮೇಕಾಗ್ರೋ ದೇವದೇವಂ ಜಗತ್ಪತಿಮ್ ।
ಏತತ್ತ್ರಿಗುಣಿತಂ ಜಪ್ತ್ವಾ ಯುದ್ಧೇಷು ವಿಜಯಿಷ್ಯಸಿ ॥ ೨೬

ಅಸ್ಮಿನ್ ಕ್ಷಣೇ ಮಹಾಬಾಹೋ ರಾವಣಂ ತ್ವಂ ವಧಿಷ್ಯಸಿ ।
ಏವಮುಕ್ತ್ವಾ ತದಾಗಸ್ತ್ಯೋ ಜಗಾಮ ಚ ಯಥಾಗತಮ್ ॥ ೨೭

ಏತಚ್ಛ್ರುತ್ವಾ ಮಹಾತೇಜಾ ನಷ್ಟಶೋಕೋಽಭವತ್ತದಾ ।
ಧಾರಯಾಮಾಸ ಸುಪ್ರೀತೋ ರಾಘವಃ ಪ್ರಯತಾತ್ಮವಾನ್ ॥ ೨೮

ಆದಿತ್ಯಂ ಪ್ರೇಕ್ಷ್ಯ ಜಪ್ತ್ವಾ ತು ಪರಂ ಹರ್ಷಮವಾಪ್ತವಾನ್ ।
ತ್ರಿರಾಚಮ್ಯ ಶುಚಿರ್ಭೂತ್ವಾ ಧನುರಾದಾಯ ವೀರ್ಯವಾನ್ ॥

ರಾವಣಂ ಪ್ರೇಕ್ಷ್ಯ ಹೃಷ್ಟಾತ್ಮಾ ಯುದ್ಧಾಯ ಸಮುಪಾಗಮತ್ ।
ಸರ್ವಯತ್ನೇನ ಮಹತಾ ವಧೇ ತಸ್ಯ ಧೃತೋಽಭವತ್ ॥ ೩೦

ಅಥ ರವಿರವದನ್ನಿರೀಕ್ಷ್ಯ ರಾಮಂ
ಮುದಿತಮನಾಃ ಪರಮಂ ಪ್ರಹೃಷ್ಯಮಾಣಃ ।
ನಿಶಿಚರಪತಿಸಂಕ್ಷಯಂ ವಿದಿತ್ವಾ
ಸುರಗಣಮಧ್ಯಗತೋ ವಚಸ್ತ್ವರೇತಿ ॥ ೩೧

---

## ಶ್ರೀರಾಮಪಟ್ಟಾಭಿಷೇಕಃ

ಶಿರಸ್ಯಂಜಲಿಮಾಧಾಯ ಕೈಕೇಯ್ಯಾನಂದವರ್ಧನಃ ।
ಬಭಾಷೇ ಭರತೋ ಜ್ಯೇಷ್ಠಂ ರಾಮಂ ಸತ್ಯಪರಾಕ್ರಮಮ್ ॥ ೧

ಪೂಜಿತಾ ಮಾಮಿಕಾ ಮಾತಾ ದತ್ತಂ ರಾಜ್ಯಮಿದಂ ಮಮ ।
ತದ್ದದಾಮಿ ಪುನಸ್ತುಭ್ಯಂ ಯಥಾ ತ್ವಮದದಾ ಮಮ ॥ ೨

ಧುರಮೇಕಾಕಿನಾ ನ್ಯಸ್ತಾಮೃಷಭೇಣ ಬಲೀಯಸಾ ॥
ಕಿಶೋರವದ್ಗುರುಂ ಭಾರಂ ನ ವೋಢುಮಹಮುತ್ಸಹೇ ॥ ೩

ವಾರಿವೇಗೇನ ಮಹತಾ ಭಿನ್ನಃ ಸೇತುರಿವ ಕ್ಷರನ್ ।
ದುರ್ಬಂಧನಮಿದಂ ಮನ್ಯೇ ರಾಜ್ಯಚ್ಛಿದ್ರಮಸಂವೃತಮ್ ॥ ೪

ಗತಿಂ ಖರ ಇವಾಶ್ವಸ್ಯ ಹಂಸಸ್ಯೇವ ಚ ವಾಯಸಃ ।
ನಾನ್ವೇತುಮುತ್ಸಹೇ ರಾಮ ತವ ಮಾರ್ಗಮರಿಂದಮ ॥ ೫

ಯಥಾ ಚಾರೋಪಿತೋ ವೃಕ್ಷೋ ಜಾತಶ್ಚಾಂತರ್ನಿವೇಶನೇ ।
ಮಹಾಂಶ್ಚ ಸುದುರಾರೋಹೋ ಮಹಾಸ್ಕಂಧಪ್ರಶಾಖವಾನ್ ॥ ೬

ಶೀರ್ಯೇತ ಪುಷ್ಪಿತೋ ಭೂತ್ವಾ ನ ಫಲಾನಿ ಪ್ರದರ್ಶಯನ್ ।
ತಸ್ಯ ನಾನುಭವೇದರ್ಥಂ ಯಸ್ಯ ಹೇತೋಃ ಸ ರೋಪ್ಯತೇ ॥ ೭

ಏಷೋಪಮಾ ಮಹಾಬಾಹೋ ತ್ವಮರ್ಥಂ ವೇತ್ತುಮರ್ಹಸಿ ।
ಯದ್ಯಸ್ಮಾನ್ಮನುಜೇಂದ್ರ ತ್ವಂ ಭಕ್ತಾನ್ ಭೃತ್ಯಾನ್ನ ಶಾಧಿ ಹಿ ॥ ೮

ಜಗದದ್ಯಾಭಿಷಿಕ್ತಂ ತ್ವಾಮನುಪಶ್ಯತು ಸರ್ವತಃ ।
ಪ್ರತಪಂತಮಿವಾದಿತ್ಯಂ ಮಧ್ಯಾಹ್ನೇ ದೀಪ್ತತೇಜಸಮ್ ॥ ೯

ತೂರ್ಯಸಂಘಾತನಿರ್ಘೋಷೈಃ ಕಾಂಚೀನೂಪುರನಿಃಸ್ವನೈಃ ।
ಮಧುರೈರ್ಗೀತಶಬ್ದೈಶ್ಚ ಪ್ರತಿಬುಧ್ಯಸ್ವ ರಾಘವ ॥ ೧೦

ಯಾವದಾವರ್ತತೇ ಚಕ್ರಂ ಯಾವತೀ ಚ ವಸುಂಧರಾ ।
ತಾವತ್ತ್ವಮಿಹ ಸರ್ವಸ್ಯ ಸ್ವಾಮಿತ್ವಮನುವರ್ತಯ ॥ ೧೧

ಭರತಸ್ಯ ವಚಃ ಶ್ರುತ್ವಾ ರಾಮಃ ಪರಪುರಂಜಯಃ ।
ತಥೇತಿ ಪ್ರತಿಜಗ್ರಾಹ ನಿಷಸಾದಾಸನೇ ಶುಭೇ ॥ ೧೨

ತತಃ ಶತ್ರುಘ್ನವಚನಾನ್ನಿಪುಣಾಃ ಶ್ಮಶ್ರುವರ್ಧಕಾಃ ।
ಸುಖಹಸ್ತಾಃ ಸುಶೀಘ್ರಾಶ್ಚ ರಾಘವಂ ಪರ್ಯುಪಾಸತ ॥ ೧೩

ಪೂರ್ವಂ ತು ಭರತೇ ಸ್ನಾತೇ ಲಕ್ಷ್ಮಣೇ ಚ ಮಹಾಬಲೇ ।
ಸುಗ್ರೀವೇ ವಾನರೇಂದ್ರೇ ಚ ರಾಕ್ಷಸೇಂದ್ರೇ ವಿಭೀಷಣೇ ॥ ೧೪

ವಿಶೋಧಿತಜಟಃ ಸ್ನಾತಶ್ಚಿತ್ರಮಾಲ್ಯಾನುಲೇಪನಃ ।
ಮಹಾರ್ಹವಸನೋ ರಾಮಸ್ತಸ್ಥೌ ತತ್ರ ಶ್ರಿಯಾ ಜ್ವಲನ್ ॥ ೧೫

ಪ್ರತಿಕರ್ಮ ಚ ರಾಮಸ್ಯ ಕಾರಯಾಮಾಸ ವೀರ್ಯವಾನ್ ।
ಲಕ್ಷ್ಮಣಸ್ಯ ಚ ಲಕ್ಷ್ಮೀವಾನಿಕ್ಷ್ವಾಕುಕುಲವರ್ಧನಃ ॥ ೧೬

ಪ್ರತಿಕರ್ಮ ಚ ಸೀತಾಯಾಃ ಸರ್ವಾ ದಶರಥಸ್ತ್ರಿಯಃ ।
ಆತ್ಮನೈವ ತದಾ ಚಕ್ರುರ್ಮನಸ್ವಿನ್ಯೋ ಮನೋಹರಮ್ ॥ ೧೭

ತತೋ ವಾನರಪತ್ನೀನಾಂ ಸರ್ವಾಸಾಮೇವ ಶೋಭನಮ್ ।
ಚಕಾರ ಯತ್ನಾತ್ ಕೌಸಲ್ಯಾ ಪ್ರಹೃಷ್ಟಾ ಪುತ್ರಲಾಲಸಾ ॥ ೧೮

ತತಃ ಶತ್ರುಘ್ನವಚನಾತ್ ಸುಮಂತ್ರೋ ನಾಮ ಸಾರಥಿಃ ।
ಯೋಜಯಿತ್ವಾಭಿಚಕ್ರಾಮ ರಥಂ ಸರ್ವಾಂಗಶೋಭನಮ್ ॥ ೧೯

ಅರ್ಕಮಂಡಲಸಂಕಾಶಂ ದಿವ್ಯಂ ದೃಷ್ಟ್ವಾ ರಥೋತ್ತಮಮ್ ।
ಆರುರೋಹ ಮಹಾಬಾಹೂ ರಾಮಃ ಸತ್ಯಪರಾಕ್ರಮಃ ॥ ೨೦

ಸುಗ್ರೀವೋ ಹನುಮಾಂಶ್ಚೈವ ಮಹೇಂದ್ರಸದೃಶದ್ಯುತೀ ।
ಸ್ನಾತೌ ದಿವ್ಯನಿಭೈರ್ವಸ್ತ್ರೈರ್ಜಗ್ಮತುಃ ಶುಭಕುಂಡಲೌ ॥ ೨೧

ವರಾಭರಣಸಂಪನ್ನಾ ಯಯುಸ್ತಾಃ ಶುಭಕುಂಡಲಾಃ ।
ಸುಗ್ರೀವಪತ್ನ್ಯಃ ಸೀತಾ ಚ ದ್ರಷ್ಟುಂ ನಗರಮುತ್ಸುಕಾಃ ॥ ೨೨

ಅಯೋಧ್ಯಾಯಾಂ ತು ಸಚಿವಾ ರಾಜ್ಞೋ ದಶರಥಸ್ಯ ಯೇ ।
ಪುರೋಹಿತಂ ಪುರಸ್ಕೃತ್ಯ ಮಂತ್ರಯಾಮಾಸುರರ್ಥವತ್ ॥ ೨೩

ಅಶೋಕೋ ವಿಜಯಶ್ಚೈವ ಸುಮಂತ್ರಶ್ಚೈವ ಸಂಗತಾಃ ।
ಮಂತ್ರಯನ್ ರಾಮವೃದ್ಧ್ಯರ್ಥಮೃದ್ಧ್ಯರ್ಥಂ ನಗರಸ್ಯ ಚ ॥ ೨೪

ಸರ್ವಮೇವಾಭಿಷೇಕಾರ್ಥಂ ಜಯಾರ್ಹಸ್ಯ ಮಹಾತ್ಮನಃ ।
ಕರ್ತುಮರ್ಹಸಿ ರಾಮಸ್ಯ ಯದ್ಯನ್ಮಂಗಲಪೂರ್ವಕಮ್ ॥ ೨೫

ಇತಿ ತೇ ಮಂತ್ರಿಣಃ ಸರ್ವೇ ಸಂದಿಶ್ಯ ತು ಪುರೋಹಿತಮ್ ।
ನಗರಾನ್ನಿರ್ಯಯುಸ್ತೂರ್ಣಂ ರಾಮದರ್ಶನಬುದ್ಧಯಃ ॥ ೨೬

ಹರಿಯುಕ್ತಂ ಸಹಸ್ರಾಕ್ಷೋ ರಥಮಿಂದ್ರ ಇವಾನಘಃ ।
ಪ್ರಯಯೌ ರಥಮಾಸ್ಥಾಯ ರಾಮೋ ನಗರಮುತ್ತಮಮ್ ॥ ೨೭

ಜಗ್ರಾಹ ಭರತೋ ರಶ್ಮೀನ್ ಶತ್ರುಘ್ನಶ್ಛತ್ರಮಾದದೇ ।
ಲಕ್ಷ್ಮಣೋ ವ್ಯಜನಂ ತಸ್ಯ ಮೂರ್ಧ್ನಿ ಸಂಪರ್ಯವೀಜಯತ್ ॥

ಶ್ವೇತಂ ಚ ವಾಲವ್ಯಜನಂ ಜಗ್ರಾಹ ಪುರತಃ ಸ್ಥಿತಃ ।
ಅಪರಂ ಚಂದ್ರಸಂಕಾಶಂ ರಾಕ್ಷಸೇಂದ್ರೋ ವಿಭೀಷಣಃ ॥ ೨೯

ಋಷಿಸಂಘೈಸ್ತದಾಕಾಶೇ ದೇವೈಶ್ಚ ಸಮರುದ್ಗಣೈಃ ।
ಸ್ತೂಯಮಾನಸ್ಯ ರಾಮಸ್ಯ ಶುಶ್ರುವೇ ಮಧುರಧ್ವನಿಃ ॥ ೩೦

ತತಃ ಶತ್ರುಂಜಯಂ ನಾಮ ಕುಂಜರಂ ಪರ್ವತೋಪಮಮ್ ।
ಆರುರೋಹ ಮಹಾತೇಜಾಃ ಸುಗ್ರೀವಃ ಪ್ಲವಗರ್ಷಭಃ ॥ ೩೧

ನವನಾಗಸಹಸ್ರಾಣಿ ಯಯುರಾಸ್ಥಾಯ ವಾನರಾಃ ।
ಮಾನುಷಂ ವಿಗ್ರಹಂ ಕೃತ್ವಾ ಸರ್ವಾಭರಣಭೂಷಿತಾಃ ॥ ೩೨

ಶಂಖಶಬ್ದಪ್ರಣಾದೈಶ್ಚ ದುಂದುಭೀನಾಂ ಚ ನಿಃಸ್ವನೈಃ ।
ಪ್ರಯಯೌ ಪುರುಷವ್ಯಾಘ್ರಸ್ತಾಂ ಪುರೀಂ ಹರ್ಮ್ಯಮಾಲಿನೀಮ್

ದದೃಶುಸ್ತೇ ಸಮಾಯಾಂತಂ ರಾಘವಂ ಸಪುರಸ್ಸರಮ್ ।
ವಿರಾಜಮಾನಂ ವಪುಷಾ ರಥೇನಾತಿರಥಂ ತದಾ ॥ ೩೪

ತೇ ವರ್ಧಯಿತ್ವಾ ಕಾಕುತ್ಸ್ಥಂ ರಾಮೇಣ ಪ್ರತಿನಂದಿತಾಃ ।
ಅನುಜಗ್ಮುರ್ಮಹಾತ್ಮಾನಂ ಭ್ರಾತೃಭಿಃ ಪರಿವಾರಿತಮ್ ॥ ೩೫

ಅಮಾತ್ಯೈರ್ಬ್ರಾಹ್ಮಣೈಶ್ಚೈವ ತಥಾ ಪ್ರಕೃತಿಭಿರ್ವೃತಃ ।
ಶ್ರಿಯಾ ವಿರುರುಚೇ ರಾಮೋ ನಕ್ಷತ್ರೈರಿವ ಚಂದ್ರಮಾಃ ॥ ೩೬

ಸ ಪುರೋಗಾಮಿಭಿಸ್ತೂರ್ಯೈಸ್ತಾಲಸ್ವಸ್ತಿಕಪಾಣಿಭಿಃ ।
ಪ್ರವ್ಯಾಹರದ್ಭಿರ್ಮುದಿತೈರ್ಮಂಗಲಾನಿ ಯಯೌ ವೃತಃ ॥ ೩೭

ಅಕ್ಷತಂ ಜಾತರೂಪಂ ಚ ಗಾವಃ ಕನ್ಯಾಸ್ತಥಾ ದ್ವಿಜಾಃ ।
ನರಾ ಮೋದಕಹಸ್ತಾಶ್ಚ ರಾಮಸ್ಯ ಪುರತೋ ಯಯುಃ ॥ ೩೮

ಸಖ್ಯಂ ಚ ರಾಮಃ ಸುಗ್ರೀವೇ ಪ್ರಭಾವಂ ಚಾನಿಲಾತ್ಮಜೇ ।
ವಾನರಾಣಾಂ ಚ ತತ್ ಕರ್ಮ ರಾಕ್ಷಸಾನಾಂ ಚ ತದ್ಬಲಮ್ ॥ ೩೯

ವಿಭೀಷಣಸ್ಯ ಸಂಯೋಗಮಾಚಚಕ್ಷೇ ಚ ಮಂತ್ರಿಣಾಮ್ ।
ಶ್ರುತ್ವಾ ತು ವಿಸ್ಮಯಂ ಜಗ್ಮುರಯೋಧ್ಯಾಪುರವಾಸಿನಃ ॥ ೪೦

ದ್ಯುತಿಮಾನೇತದಾಖ್ಯಾಯ ರಾಮೋ ವಾನರಸಂವೃತಃ ।
ಹೃಷ್ಟಪುಷ್ಟಜನಾಕೀರ್ಣಾಮಯೋಧ್ಯಾಂ ಪ್ರವಿವೇಶ ಹ ॥ ೪೧

ತತೋ ಹ್ಯಭ್ಯುಚ್ಛ್ರಯನ್ ಪೌರಾಃ ಪತಾಕಾಸ್ತೇ ಗೃಹೇ ಗೃಹೇ ।
ಐಕ್ಷ್ವಾಕಾಧ್ಯುಷಿತಂ ರಮ್ಯಮಾಸಸಾದ ಪಿತುರ್ಗೃಹಮ್ ॥ ೪೨

ಅಥಾಬ್ರವೀದ್ರಾಜಪುತ್ರೋ ಭರತಂ ಧರ್ಮಿಣಾಂ ವರಮ್ ।
ಅರ್ಥೋಪಹಿತಯಾ ವಾಚಾ ಮಧುರಂ ರಘುನಂದನಃ ॥ ೪೩

ಪಿತುರ್ಭವನಮಾಸಾದ್ಯ ಪ್ರವಿಶ್ಯ ಚ ಮಹಾತ್ಮನಃ ।
ಕೌಸಲ್ಯಾಂ ಚ ಸುಮಿತ್ರಾಂ ಚ ಕೈಕೇಯೀಮಭಿವಾದ್ಯ ಚ ॥ ೪೪

ಯುಕ್ತ ಮಧ್ವಾಸನಂ ಶ್ರೇಷ್ಠಂ ಘೋಷವನಿಕಂ ಮಹತ್ ।
ಸಂಪನ್ನಾಸ್ತ್ಯದಗಂಧಸಂಕೀರ್ಣಂ ಸುಗ್ರೀವಾಯ ನಿವೇದಯ ॥ ೪೫

ತಸ್ಯ ತದ್ವಚನಂ ಶ್ರುತ್ವಾ ಭರತಃ ಸತ್ಯವಿಕ್ರಮಃ ।
ಪಾಣೌ ಗೃಹೀತ್ವಾ ಸುಗ್ರೀವಂ ಪ್ರವಿವೇಶ ಮಹಾಲಯಮ್ ॥ ೪೬

ತತಸ್ತೈಲಪ್ರದೀಪಾಂಶ್ಚ ಪರ್ಯಂಕಾಸ್ತರಣಾನಿ ಚ ।
ಗೃಹೀತ್ವಾ ವಿವಿಶುಃ ಕ್ಷಿಪ್ರಂ ಶತ್ರುಘ್ನೇನ ಪ್ರಚೋದಿತಾಃ ॥ ೪೭

ಉವಾಚ ಚ ಮಹಾತೇಜಾಃ ಸುಗ್ರೀವಂ ರಾಘವಾನುಜಃ ।
ಅಭಿಷೇಕಾಯ ರಾಮಸ್ಯ ದೂತಾನಾಜ್ಞಾಪಯ ಪ್ರಭೋ ॥ ೪೮

ಸೌವರ್ಣಾನ್ ವಾನರೇಂದ್ರಾಣಾಂ ಚತುರ್ಣಾಂ ಚತುರೋ ಘಟಾನ್
ದದೌ ಕ್ಷಿಪ್ರಂ ಸ ಸುಗ್ರೀವಃ ಸರ್ವರತ್ನವಿಭೂಷಿತಾನ್ ॥ ೪೯

ಯಥಾ ಪ್ರತ್ಯೂಷಸಮಯೇ ಚತುರ್ಣಾಂ ಸಾಗರಾಂಭಸಾಮ್ ।
ಪೂರ್ಣೈರ್ಘಟೈಃ ಪ್ರತೀಕ್ಷಧ್ವಂ ತಥಾ ಕುರುತ ವಾನರಾಃ ॥ ೫೦

ಏವಮುಕ್ತಾ ಮಹಾತ್ಮಾನೋ ವಾನರಾ ವಾರಣೋಪಮಾಃ ।
ಉತ್ಪೇತುರ್ಗಗನಂ ಶೀಘ್ರಂ ಗರುಡಾನಿಲಶೀಘ್ರಗಾಃ ॥ ೫೧

ಜಾಂಬವಾಂಶ್ಚ ಸುಷೇಣಶ್ಚ ವೇಗದರ್ಶೀ ಚ ವಾನರಃ ।
ಋಷಭಶ್ಚೈವ ಕಲಶಾನ್ ಜಲಪೂರ್ಣಾನಥಾನಯನ್ ॥ ೫೨

ನದೀಶತಾನಾಂ ಪಂಚಾನಾಂ ಜಲಂ ಕುಂಭೇಷು ಚಾಹರನ್ ।
ಪೂರ್ವಾತ್ ಸಮುದ್ರಾತ್ ಕಲಶಂ ಜಲಪೂರ್ಣಮಥಾನಯತ್ ॥

ಸುಷೇಣಃ ಸತ್ತ್ವಸಂಪನ್ನಃ ಸರ್ವರತ್ನವಿಭೂಷಿತಮ್ ।
ಋಷಭೋ ದಕ್ಷಿಣಾತ್ತೂರ್ಣಂ ಸಮುದ್ರಾಜ್ಜಲಮಾಹರತ್ ॥ ೫೪

ರಕ್ತಚಂದನಶಾಖಾಭಿಃ ಸಂವೃತಂ ಕಾಂಚನಂ ಘಟಮ್ ।
ಗವಯಃ ಪಶ್ಚಿಮಾತ್ತೋಯಮಾಜಹಾರ ಮಹಾರ್ಣವಾತ್ ॥ ೫೫

ರತ್ನಕುಂಭೇನ ಮಹತಾ ಶೀತಂ ಮಾರುತವಿಕ್ರಮಃ ।
ಉತ್ತರಾಚ್ಚ ಜಲಂ ಶೀಘ್ರಂ ಗರುಡಾನಿಲವಿಕ್ರಮಃ ॥ ೫೬

ಆಜಹಾರ ಸ ಧರ್ಮಾತ್ಮಾ ನಲಃ ಸರ್ವಗುಣಾನ್ವಿತಃ ।
ತತಸ್ತೈರ್ವಾನರಶ್ರೇಷ್ಠೈರಾನೀತಂ ಪ್ರೇಕ್ಷ್ಯ ತಜ್ಜಲಮ್ ॥ ೫೭

ಅಭಿಷೇಕಾಯ ರಾಮಸ್ಯ ಶತ್ರುಘ್ನಃ ಸಚಿವೈಃ ಸಹ ।
ಪುರೋಹಿತಾಯ ಶ್ರೇಷ್ಠಾಯ ಸುಹೃದ್ಭ್ಯಶ್ಚ ನ್ಯವೇದಯತ್ ॥ ೫೮

ತತಃ ಸ ಪ್ರಯತೋ ವೃದ್ಧೋ ವಸಿಷ್ಠೋ ಬ್ರಾಹ್ಮಣೈಃ ಸಹ ।
ರಾಮಂ ರತ್ನಮಯೇ ಪೀಠೇ ಸಹಸೀತಂ ನ್ಯವೇಶಯತ್ ॥ ೫೯

ವಸಿಷ್ಠೋ ವಾಮದೇವಶ್ಚ ಜಾಬಾಲಿರಥ ಕಾಶ್ಯಪಃ ।
ಕಾತ್ಯಾಯನಃ ಸುಯಜ್ಞಶ್ಚ ಗೌತಮೋ ವಿಜಯಸ್ತಥಾ ॥ ೬೦

ಅಭ್ಯಷಿಂಚನ್ನರವ್ಯಾಘ್ರಂ ಪ್ರಸನ್ನೇನ ಸುಗಂಧಿನಾ ।
ಸಲಿಲೇನ ಸಹಸ್ರಾಕ್ಷಂ ವಸವೋ ವಾಸವಂ ಯಥಾ ॥ ೬೧

ಋತ್ವಿಗ್ಭಿರ್ಬ್ರಾಹ್ಮಣೈಃ ಪೂರ್ವಂ ಕನ್ಯಾಭಿರ್ಮಂತ್ರಿಭಿಸ್ತಥಾ ।
ಯೋಧೈಶ್ಚೈವಾಭ್ಯಷಿಂಚಂಸ್ತೇ ಸಂಪ್ರಹೃಷ್ಟಾಃ ಸನೈಗಮೈಃ ॥ ೬೨

ಸರ್ವೌಷಧಿರಸೈಶ್ಚಾಪಿ ದೈವತೈರ್ನಭಸಿ ಸ್ಥಿತೈಃ ।
ಚತುರ್ಭಿರ್ಲೋಕಪಾಲೈಶ್ಚ ಸರ್ವೈರ್ದೇವೈಶ್ಚ ಸಂಗತೈಃ ॥ ೬೩

ಬ್ರಹ್ಮಣಾ ನಿರ್ಮಿತಂ ಪೂರ್ವಂ ಕಿರೀಟಂ ರತ್ನಶೋಭಿತಮ್ ।
ಅಭಿಷಿಕ್ತಃ ಪುರಾ ಯೇನ ಮನುಸ್ತಂ ದೀಪ್ತತೇಜಸಮ್॥ ೬೪

ತಸ್ಯಾನ್ವವಾಯೇ ರಾಜಾನಃ ಕ್ರಮಾದ್ಯೇನಾಭಿಷೇಚಿತಾಃ ।
ಸಭಾಯಾಂ ಹೇಮಕ್ಲೃಪ್ತಾಯಾಂ ಶೋಭಿತಾಯಾಂ ಮಹಾಜನೈಃ

ರತ್ನೈರ್ನಾನಾವಿಧೈಶ್ಚೈವ ಚಿತ್ರಿತಾಯಾಂ ಸುಶೋಭನೈಃ ।
ನಾನಾರತ್ನಮಯೇ ಪೀಠೇ ಕಲ್ಪಯಿತ್ವಾ ಯಥಾವಿಧಿ ॥ ೬೬

ಕಿರೀಟೇನ ತತಃ ಪಶ್ಚಾದ್ವಸಿಷ್ಠೇನ ಮಹಾತ್ಮನಾ ।
ಋತ್ವಿಗ್ಭಿರ್ಭೂಷಣೈಶ್ಚೈವ ಸಮಯೋಕ್ಷ್ಯತ ರಾಘವಃ ॥ ೬೭

ಛತ್ರಂ ತು ತಸ್ಯ ಜಗ್ರಾಹ ಶತ್ರುಘ್ನಃ ಪಾಂಡುರಂ ಶುಭಮ್ ।
ಶ್ವೇತಂ ಚ ವಾಲವ್ಯಜನಂ ಸುಗ್ರೀವೋ ವಾನರೇಶ್ವರಃ ॥ ೬೮

ಅಪರಂ ಚಂದ್ರಸಂಕಾಶಂ ರಾಕ್ಷಸೇಂದ್ರೋ ವಿಭೀಷಣಃ ।
ಮಾಲಾಂ ಜ್ವಲಂತೀಂ ವಪುಷಾ ಕಾಂಚನೀಂ ಶತಪುಷ್ಕರಾಮ್ ॥

ರಾಘವಾಯ ದದೌ ವಾಯುರ್ವಾಸವೇನ ಪ್ರಚೋದಿತಃ ।
ಸರ್ವರತ್ನಸಮಾಯುಕ್ತಂ ಮಣಿರತ್ನವಿಭೂಷಿತಮ್ ॥ ೭೦

ಮುಕ್ತಾಹಾರಂ ನರೇಂದ್ರಾಯ ದದೌ ಶಕ್ರಪ್ರಚೋದಿತಃ ।
ಪ್ರಜಗುರ್ದೇವಗಂಧರ್ವಾ ನನೃತುಶ್ಚಾಪ್ಸರೋಗಣಾಃ ॥ ೭೧

ಅಭಿಷೇಕೇ ತದರ್ಹಸ್ಯ ತದಾ ರಾಮಸ್ಯ ಧೀಮತಃ ।
ಭೂಮಿಃ ಸಸ್ಯವತೀ ಚೈವ ಫಲವಂತಶ್ಚ ಪಾದಪಾಃ ॥ ೭೨

ಗಂಧವಂತಿ ಚ ಪುಷ್ಪಾಣಿ ಬಭೂವು ರಾಘವೋತ್ಸವೇ ।
ಸಹಸ್ರಶತಮಶ್ವಾನಾಂ ಧೇನೂನಾಂ ಚ ಗವಾಂ ತಥಾ ॥ ೭೩

ದದೌ ಶತಂ ವೃಷಾನ್ ಪೂರ್ವಂ ದ್ವಿಜೇಭ್ಯೋ ಮನುಜರ್ಷಭಃ ।
ತ್ರಿಂಶತ್ಕೋಟೀರ್ಹಿರಣ್ಯಸ್ಯ ಬ್ರಾಹ್ಮಣೇಭ್ಯೋ ದದೌ ಪುನಃ ॥ ೭೪

ನಾನಾಭರಣವಸ್ತ್ರಾಣಿ ಮಹಾರ್ಹಾಣಿ ಚ ರಾಘವಃ ।
ಅರ್ಕರಶ್ಮಿಪ್ರತೀಕಾಶಾಂ ಕಾಂಚನೀಂ ಮಣಿವಿಗ್ರಹಾಮ್ ॥ ೭೫

ಸುಗ್ರೀವಾಯ ಸ್ರಜಂ ದಿವ್ಯಾಂ ಪ್ರಾಯಚ್ಛನ್ಮನುಜರ್ಷಭಃ ।
ವೈದೂರ್ಯಮಣಿಚಿತ್ರೇ ಚ ಚಂದ್ರರಶ್ಮಿವಿಭೂಷಿತೇ ॥ ೭೬

ವಾಲಿಪುತ್ರಾಯ ಧೃತಿಮಾನಂಗದಾಯಾಂಗದೇ ದದೌ ।
ಮಣಿಪ್ರವರಜುಷ್ಟಂ ಚ ಮುಕ್ತಾಹಾರಮನುತ್ತಮಮ್ ॥ ೭೭

ಸೀತಾಯೈ ಪ್ರದದೌ ರಾಮಶ್ಚಂದ್ರರಶ್ಮಿಸಮಪ್ರಭಮ್ ।
ಅರಜೇ ವಾಸಸೀ ದಿವ್ಯೇ ಶುಭಾನ್ಯಾಭರಣಾನಿ ಚ ॥ ೭೮

ಅವೇಕ್ಷಮಾಣಾ ವೈದೇಹೀ ಪ್ರದದೌ ವಾಯುಸೂನವೇ ।
ಅವಮುಚ್ಯಾತ್ಮನಃ ಕಂಠಾದ್ಧಾರಂ ಜನಕನಂದಿನೀ ॥ ೭೯

ಅವೈಕ್ಷತ ಹರೀನ್ ಸರ್ವಾನ್ ಭರ್ತಾರಂ ಚ ಮುಹುರ್ಮುಹುಃ ।
ತಾಮಿಂಗಿತಜ್ಞಃ ಸಂಪ್ರೇಕ್ಷ್ಯ ಬಭಾಷೇ ಜನಕಾತ್ಮಜಾಮ್ ॥ ೮೦

ಪ್ರದೇಹಿ ಸುಭಗೇ ಹಾರಂ ಯಸ್ಯ ತುಷ್ಟಾಸಿ ಭಾಮಿನಿ ।
ತೇಜೋ ಧೃತಿರ್ಯಶೋ ದಾಕ್ಷ್ಯಂ ಸಾಮರ್ಥ್ಯಂ ವಿನಯೋ ನಯಃ
ಪೌರುಷಂ ವಿಕ್ರಮೋ ಬುದ್ಧಿರ್ಯಸ್ಮಿನ್ನೇತಾನಿ ನಿತ್ಯದಾ ।
ದದೌ ಸಾ ವಾಯುಪುತ್ರಾಯ ತಂ ಹಾರಮಸಿತೇಕ್ಷಣಾ ॥ ೮೨

ಹನುಮಾಂಸ್ತೇನ ಹಾರೇಣ ಶುಶುಭೇ ವಾನರರ್ಷಭಃ ।
ಚಂದ್ರಾಂಶುಚಯಗೌರೇಣ ಶ್ವೇತಾಭ್ರೇಣ ಯಥಾಚಲಃ ॥ ೮೩

ತತೋ ದ್ವಿವಿದಮೈಂದಾಭ್ಯಾಂ ನೀಲಾಯ ಚ ಪರಂತಪಃ ।
ಸರ್ವಾನ್ ಕಾಮಗುಣಾನ್ ವೀಕ್ಷ್ಯ ಪ್ರದದೌ ವಸುಧಾಧಿಪಃ ॥ ೮೪

ಸರ್ವೇ ವಾನರವೃದ್ಧಾಶ್ಚ ಯೇ ಚಾನ್ಯೇ ವಾನರೇಶ್ವರಾಃ ।
ವಾಸೋಭಿರ್ಭೂಷಣೈಶ್ಚೈವ ಯಥಾರ್ಹಂ ಪ್ರತಿಪೂಜಿತಾಃ ॥ ೮೫

ವಿಭೀಷಣೋಽಥ ಸುಗ್ರೀವೋ ಹನುಮಾನ್ ಜಾಂಬವಾಂಸ್ತಥಾ ।
ಸರ್ವೇ ವಾನರಮುಖ್ಯಾಶ್ಚ ರಾಮೇಣಾಕ್ಲಿಷ್ಟಕರ್ಮಣಾ ॥ ೮೬

ಯಥಾರ್ಹಂ ಪೂಜಿತಾಃ ಸರ್ವೇ ಕಾಮೈ ರತ್ನೈಶ್ಚ ಪುಷ್ಕಲೈಃ ।
ಪ್ರಹೃಷ್ಟಮನಸಃ ಸರ್ವೇ ಜಗ್ಮುರೇವ ಯಥಾಗತಮ್ ॥ ೮೭

ನತ್ವಾ ಸರ್ವೇ ಮಹಾತ್ಮಾನಂ ತತಸ್ತೇ ಪ್ಲವಗರ್ಷಭಾಃ ।
ವಿಸೃಷ್ಟಾಃ ಪಾರ್ಥಿವೇಂದ್ರೇಣ ಕಿಷ್ಕಿಂಧಾಮಭ್ಯುಪಾಗಮನ್ ॥ ೮೮

ಸುಗ್ರೀವೋ ವಾನರಶ್ರೇಷ್ಠೋ ದೃಷ್ಟ್ವಾ ರಾಮಾಭಿಷೇಚನಮ್ ।
ಪೂಜಿತಶ್ಚೈವ ರಾಮೇಣ ಕಿಷ್ಕಿಂಧಾಂ ಪ್ರಾವಿಶತ್ ಪುರೀಮ್ ॥ ೮೯

ವಿಭೀಷಣೋಽಪಿ ಧರ್ಮಾತ್ಮಾ ಸಹ ತೈರ್ನೈಋತರ್ಷಭೈಃ ।
ಲಬ್ಧ್ವಾ ಕುಲಧನಂ ರಾಜಾ ಲಂಕಾಂ ಪ್ರಾಯಾದ್ವಿಭೀಷಣಃ ॥ ೯೦

ಸ ರಾಜ್ಯಮಖಿಲಂ ಶಾಸನ್ನಿಹತಾರಿರ್ಮಹಾಯಶಾಃ ।
ರಾಘವಃ ಪರಮೋದಾರೋ ರರಾಜ ಪರಯಾ ಮುದಾ ॥ ೯೧

ಉವಾಚ ಲಕ್ಷ್ಮಣಂ ರಾಮೋ ಧರ್ಮಜ್ಞಂ ಧರ್ಮವತ್ಸಲಃ ॥

ಆತಿಷ್ಠ ಧರ್ಮಜ್ಞ ಮಯಾ ಸಹೇಮಾಂ
ಗಾಂ ಪೂರ್ವರಾಜಾಧ್ಯುಷಿತಾಂ ಬಲೇನ ।

ತುಲ್ಯಂ ಮಯಾ ತ್ವಂ ಪಿತೃಭಿರ್ಧೃತಾ ಯಾ
ತಾಂ ಯೌವರಾಜ್ಯೇ ಧುರಮುದ್ವಹಸ್ವ ॥ ೯೨

ಸರ್ವಾತ್ಮನಾ ಪರ್ಯನುನೀಯಮಾನೋ
ಯದಾ ನ ಸೌಮಿತ್ರಿರುಪೈತಿ ಯೋಗಮ್ ।
ನಿಯುಜ್ಯಮಾನೋಽಪಿ ಚ ಯೌವರಾಜ್ಯೇ
ತತೋಽಭ್ಯಷಿಂಚದ್ಭರತಂ ಮಹಾತ್ಮಾ ॥ ೯೩

ಪೌಂಡರೀಕಾಶ್ವಮೇಧಾಭ್ಯಾಂ ವಾಜಪೇಯೇನ ಚಾಸಕೃತ್ ।
ಅನ್ಯೈಶ್ಚ ವಿವಿಧೈರ್ಯಜ್ಞೈರಯಜತ್ ಪಾರ್ಥಿವಾತ್ಮಜಃ ॥ ೯೪

ರಾಜ್ಯಂ ದಶ ಸಹಸ್ರಾಣಿ ಪ್ರಾಪ್ಯ ವರ್ಷಾಣಿ ರಾಘವಃ ।
ಶತಾಶ್ವಮೇಧಾನಾಜಹ್ರೇ ಸದಶ್ವಾನ್ ಭೂರಿದಕ್ಷಿಣಾನ್ ॥ ೯೫

ಆಜಾನುಲಂಬಬಾಹುಃ ಸ ಮಹಾಸ್ಕಂಧಃ ಪ್ರತಾಪವಾನ್ ।
ಲಕ್ಷ್ಮಣಾನುಚರೋ ರಾಮಃ ಪೃಥಿವೀಮನ್ವಪಾಲಯತ್ ॥ ೯೬

ರಾಘವಶ್ಚಾಪಿ ಧರ್ಮಾತ್ಮಾ ಪ್ರಾಪ್ಯ ರಾಜ್ಯಮನುತ್ತಮಮ್ ।
ಈಜೇ ಬಹುವಿಧೈರ್ಯಜ್ಞೈಃ ಸಸುಹೃಜ್ಜ್ಞಾತಿಬಾಂಧವೈಃ ॥ ೯೭

ನ ಪರ್ಯದೇವನ್ ವಿಧವಾ ನ ಚ ವ್ಯಾಲಕೃತಂ ಭಯಮ್ ।
ನ ವ್ಯಾಧಿಜಂ ಭಯಂ ವಾಪಿ ರಾಮೇ ರಾಜ್ಯಂ ಪ್ರಶಾಸತಿ ॥ ೯೮

ನಿರ್ದಸ್ಯುರಭವಲ್ಲೋಕೋ ನಾನರ್ಥಃ ಕಂಚಿದಸ್ಪೃಶತ್ ।
ನ ಚ ಸ್ಮ ವೃದ್ಧಾ ಬಾಲಾನಾಂ ಪ್ರೇತಕಾರ್ಯಾಣಿ ಕುರ್ವತೇ ॥ ೯೯

ಸರ್ವಂ ಮುದಿತಮೇವಾಸೀತ್ ಸರ್ವೋ ಧರ್ಮಪರೋಽಭವತ್ ।
ರಾಮಮೇವಾನುಪಶ್ಯಂತೋ ನಾಭ್ಯಹಿಂಸನ್ ಪರಸ್ಪರಮ್ ॥ ೧೦೦

ಆಸನ್ ವರ್ಷಸಹಸ್ರಾಣಿ ತಥಾ ಪುತ್ರಸಹಸ್ರಿಣಃ ।
ನಿರಾಮಯಾ ವಿಶೋಕಾಶ್ಚ ರಾಮೇ ರಾಜ್ಯಂ ಪ್ರಶಾಸತಿ ॥ ೧೦೧

ರಾಮೋ ರಾಮೋ ರಾಮ ಇತಿ ಪ್ರಜಾನಾಮಭವನ್ ಕಥಾಃ ।
ರಾಮಭೂತಂ ಜಗದಭೂದ್ರಾಮೇ ರಾಜ್ಯಂ ಪ್ರಶಾಸತಿ ॥ ೧೦೨

ನಿತ್ಯಪುಷ್ಪಾ ನಿತ್ಯಫಲಾಸ್ತರವಃ ಸ್ಕಂಧವಿಸ್ತೃತಾಃ ।
ಕಾಲೇ ವರ್ಷೀ ಚ ಪರ್ಜನ್ಯಃ ಸುಖಸ್ಪರ್ಶಶ್ಚ ಮಾರುತಃ ॥ ೧೦೩

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಲೋಭವಿವರ್ಜಿತಾಃ ।
ಸ್ವಕರ್ಮಸು ಪ್ರವರ್ತಂತೇ ತುಷ್ಟಾಃ ಸ್ವೈರೇವ ಕರ್ಮಭಿಃ ॥ ೧೦೪

ಆಸನ್ ಪ್ರಜಾ ಧರ್ಮಪರಾ ರಾಮೇ ಶಾಸತಿ ನಾನೃತಾಃ ।
ಸರ್ವೇ ಲಕ್ಷಣಸಂಪನ್ನಾಃ ಸರ್ವೇ ಧರ್ಮಪರಾಯಣಾಃ ॥ ೧೦೫

ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ ।
ಭ್ರಾತೃಭಿಃ ಸಹಿತಃ ಶ್ರೀಮಾನ್ ರಾಮೋ ರಾಜ್ಯಮಕಾರಯತ್ ॥

ಧನ್ಯಂ ಯಶಸ್ಯಮಾಯುಷ್ಯಂ ರಾಜ್ಞಾಂ ಚ ವಿಜಯಾವಹಮ್ ।
ಆದಿಕಾವ್ಯಮಿದಂ ತ್ವಾರ್ಷಂ ಪುರಾ ವಾಲ್ಮೀಕಿನಾ ಕೃತಮ್ ॥ ೧೦೭

ಯಃ ಪಠೇಚ್ಛೃಣುಯಾಲ್ಲೋಕೇ ನರಃ ಪಾಪಾದ್ವಿಮುಚ್ಯತೇ ।
ಪುತ್ರಕಾಮಸ್ತು ಪುತ್ರಾನ್ ವೈ ಧನಕಾಮೋ ಧನಾನಿ ಚ ॥ ೧೦೮

ಲಭತೇ ಮನುಜೋ ಲೋಕೇ ಶ್ರುತ್ವಾ ರಾಮಾಭಿಷೇಚನಮ್ ।
ಮಹೀಂ ವಿಜಯತೇ ರಾಜಾ ರಿಪೂಂಶ್ಚಾಪ್ಯಧಿತಿಷ್ಠತಿ ॥ ೧೦೯

ರಾಘವೇಣ ಯಥಾ ಮಾತಾ ಸುಮಿತ್ರಾ ಲಕ್ಷ್ಮಣೇನ ಚ ।
ಭರತೇನ ಚ ಕೈಕೇಯೀ ಜೀವಪುತ್ರಾಸ್ತಥಾ ಸ್ತ್ರಿಯಃ ॥ ೧೧೦

ಭವಿಷ್ಯಂತಿ ಸದಾನಂದಾಃ ಪುತ್ರಪೌತ್ರಸಮನ್ವಿತಾಃ ।
ಶ್ರುತ್ವಾ ರಾಮಾಯಣಮಿದಂ ದೀರ್ಘಮಾಯುಶ್ಚ ವಿಂದತಿ ॥ ೧೧೧

ರಾಮಸ್ಯ ವಿಜಯಂ ಚೈವ ಸರ್ವಮಕ್ಲಿಷ್ಟಕರ್ಮಣಃ ।
ಶೃಣೋತಿ ಯ ಇದಂ ಕಾವ್ಯಮಾರ್ಷಂ ವಾಲ್ಮೀಕಿನಾ ಕೃತಮ್ ॥

ಶ್ರದ್ದಧಾನೋ ಜಿತಕ್ರೋಧೋ ದುರ್ಗಾಣ್ಯತಿತರತ್ಯಸೌ ।
ಸಮಾಗಮಂ ಪ್ರವಾಸಾಂತೇ ಲಭತೇ ಚಾಪಿ ಬಾಂಧವೈಃ ॥ ೧೧೩

ಪ್ರಾರ್ಥಿತಾಂಶ್ಚ ವರಾನ್ ಸರ್ವಾನ್ ಪ್ರಾಪ್ನುಯಾದಿಹ ರಾಘವಾತ್
ಶ್ರವಣೇನ ಸುರಾಃ ಸರ್ವೇ ಪ್ರೀಯಂತೇ ಸಂಪ್ರಶೃಣ್ವತಾಮ್ ॥

ವಿನಾಯಕಾಶ್ಚ ಶಾಮ್ಯಂತಿ ಗೃಹೇ ತಿಷ್ಠಂತಿ ಯಸ್ಯ ವೈ ।
ವಿಜಯೇತ ಮಹೀಂ ರಾಜಾ ಪ್ರವಾಸೀ ಸ್ವಸ್ತಿಮಾನ್ ವ್ರಜೇತ್ ॥

ಸ್ತ್ರಿಯೋ ರಜಸ್ವಲಾಃ ಶ್ರುತ್ವಾ ಪುತ್ರಾನ್ ಸೂಯುರನುತ್ತಮಾನ್ ।
ಪೂಜಯಂಶ್ಚ ಪಠಂಶ್ಚೇಮಮಿತಿಹಾಸಂ ಪುರಾತನಮ್ ॥ ೧೧೬

ಸರ್ವಪಾಪೈಃ ಪ್ರಮುಚ್ಯೇತ ದೀರ್ಘಮಾಯುರವಾಪ್ನುಯಾತ್ ।
ಪ್ರಣಮ್ಯ ಶಿರಸಾ ನಿತ್ಯಂ ಶ್ರೋತವ್ಯಂ ಕ್ಷತ್ರಿಯೈರ್ದ್ವಿಜಾತ್ ॥ ೧೧೭

ಐಶ್ವರ್ಯಂ ಪುತ್ರಲಾಭಶ್ಚ ಭವಿಷ್ಯತಿ ನ ಸಂಶಯಃ ।
ರಾಮಾಯಣಮಿದಂ ಕೃತ್ಸ್ನಂ ಶೃಣ್ವತಃ ಪಠತಃ ಸದಾ ॥ ೧೧೮

ಪ್ರೀಯತೇ ಸತತಂ ರಾಮಃ ಸ ಹಿ ವಿಷ್ಣುಃ ಸನಾತನಃ ।
ಆದಿದೇವೋ ಮಹಾಬಾಹುರ್ಹರಿರ್ನಾರಾಯಣಃ ಪ್ರಭುಃ ॥ ೧೧೯

ಕುಟುಂಬವೃದ್ಧಿಂ ಧನಧಾನ್ಯವೃದ್ಧಿಂ
ಸ್ತ್ರಿಯಶ್ಚ ಮುಖ್ಯಾಃ ಸುಖಮುತ್ತಮಂ ಚ ।
ಶ್ರುತ್ವಾ ಶುಭಂ ಕಾವ್ಯಮಿದಂ ಮಹಾರ್ಥಂ
ಪ್ರಾಪ್ನೋತಿ ಸರ್ವಾಂ ಭುವಿ ಚಾರ್ಥಸಿದ್ಧಿಮ್ ॥ ೧೨೦

ಆಯುಷ್ಯಮಾರೋಗ್ಯಕರಂ ಯಶಸ್ಯಂ
ಸೌಭ್ರಾತೃಕಂ ಬುದ್ಧಿಕರಂ ಶುಭಂ ಚ ।
ಶ್ರೋತವ್ಯಮೇತನ್ನಿಯಮೇನ ಸದ್ಭಿ-
ರಾಖ್ಯಾನಮೋಜಸ್ಕರಮೃದ್ಧಿಕಾಮೈಃ ॥ ೧೨೧

ಏವಮೇತತ್ ಪುರಾವೃತ್ತಮಾಖ್ಯಾನಂ ಭದ್ರಮಸ್ತು ವಃ ।
ಪ್ರವ್ಯಾಹರತ ವಿಸ್ರಬ್ಧಂ ಬಲಂ ವಿಷ್ಣೋಃ ಪ್ರವರ್ಧತಾಮ್ ॥ ೧೨೨

ದೇವಾಶ್ಚ ಸರ್ವೇ ತುಷ್ಯಂತಿ ಗ್ರಹಣಾಚ್ಛ್ರವಣಾತ್ತಥಾ ।
ರಾಮಾಯಣಸ್ಯ ಶ್ರವಣಾತ್ತುಷ್ಯಂತಿ ಪಿತರಸ್ತಥಾ ॥ ೧೨೩

ಭಕ್ತ್ಯಾ ರಾಮಸ್ಯ ಯೇ ಚೇಮಾಂ ಸಂಹಿತಾಮೃಷಿಣಾ ಕೃತಾಮ್ ।
ಲೇಖಯಂತೀಹ ಚ ನರಾಸ್ತೇಷಾಂ ವಾಸಸ್ತ್ರಿವಿಷ್ಟಪೇ ॥ ೧೨೪



॥ ಶ್ರೀಃ ॥

# ಶ್ರೀಮದ್ವಾಲ್ಮೀಕಿ ರಾಮಾಯಣಮ್

## ಸುಂದರಕಾಂಡಃ

### ಸರ್ಗ ೧

ಹನುಮಂತನು ಸಮುದ್ರವನ್ನು ಲಂಘಿಸುವುದು. ದಾರಿಯಲ್ಲಿ ಮೈನಾಕನೊಡನೆ ಮಾತಾಡಿ ಸುರಸೆಯನ್ನು ಪರಾಜಯಗೊಳಿಸಿ ಸಿಂಹಿಕೆಯನ್ನು ಸಂಹರಿಸುವುದು.

ಅನಂತರ ಶತ್ರುಸಂಹಾರಕನಾದ ಹನುಮಂತನು ರಾವಣನಿಂದ ಅಪಹರಿಸಲ್ಪಟ್ಟ ಸೀತಾದೇವಿಯು ಇದ್ದ ಸ್ಥಳವನ್ನು ಹುಡುಕುವುದಕ್ಕಾಗಿ ಆಕಾಶಮಾರ್ಗದಲ್ಲಿ ಪ್ರಯಾಣಮಾಡಬೇಕೆಂದು ಉದ್ದೇಶಿಸಿದನು (೧). ಇತರರಿಗೆ ಅಸಾಧ್ಯವಾದ ಆ ಸಾಹಸಕಾರ್ಯವನ್ನು ಮಾಡಲುದ್ದೇಶಿಸಿ, ಕತ್ತನ್ನು ಮೇಲಕ್ಕೆತ್ತಿ ನಿಂತಿದ್ದ ಅವನು ಒಂದು ಮಹಾವೃಷಭದಂತೆ ಕಂಡನು (೨). ಮಹಾಬಲಾಢ್ಯನಾದ ಆ ಧೀರನು ವೈಡೂರ್ಯಮಣಿಯಂತೆ ಸ್ವಲ್ಪ ಹಸುರಾಗಿ, ಸಮುದ್ರಜಲದಂತೆ ಹರಡಿದ್ದ ಹುಲ್ಲುಗಾವಲಿನಲ್ಲಿ ಯಥೇಷ್ಟವಾಗಿ ತಿರುಗಾಡುತ್ತ, ಅಲ್ಲಿದ್ದ ಹಕ್ಕಿಗಳನ್ನು ಹೆದರಿಸಿ ಓಡಿಸಿದನು. ಎದೆಯಿಂದಲೇ ಮರಗಳನ್ನು ತಳ್ಳಿ ಬೀಳಿಸುತ್ತ, ಮೃಗಗಳನ್ನು ಕೊಲ್ಲುತ್ತ ಕೊಬ್ಬಿದ ಸಿಂಹದಂತೆ ಮೆರೆದನು (೩–೪). ಆ ಪರ್ವತಪ್ರದೇಶವು ಕಪ್ಪು, ಕೆಂಪು, ಬಿಳುಪು ಮುಂತಾದ ನಾನಾ ಬಣ್ಣದ ನೈಸರ್ಗಿಕ ಧಾತುಗಳಿಂದ ರಂಜಿತವಾಗಿತ್ತು. ಕಾಮರೂಪಿಗಳಾದ ಯಕ್ಷ, ಕಿನ್ನರ, ಗಂಧರ್ವ ಮೊದಲಾದ ದೇವತೆಗಳು ಅಲ್ಲಿ ವಿಹರಿಸುತ್ತಿದ್ದರು. ಕಪಿಶ್ರೇಷ್ಠನಾದ ಆಂಜನೇಯನು ಆ ಸ್ಥಳದಲ್ಲಿ, ಮಡುವಿನಲ್ಲಿ ನಿಂತಿರುವ ಮದ್ದಾನೆಯಂತೆ ಕಂಗೊಳಿಸಿದನು (೫–೭). ಅವನು ಸೂರ್ಯ, ಇಂದ್ರ, ವಾಯು, ಬ್ರಹ್ಮ ಮೊದಲಾದ ನಾನಾ ದೇವತೆಗಳಿಗೆ ನಮಸ್ಕಾರಮಾಡಿ, ಪೂರ್ವದಿಕ್ಕಿಗೆ ಅಭಿಮುಖನಾಗಿ ನಿಂತು, ತನ್ನ ಜನಕನಾದ ವಾಯುದೇವನಿಗೆ ವಂದಿಸಿ, ದಕ್ಷಿಣ

ದಿಕ್ಕಿಗೆ ಪ್ರಯಾಣಮಾಡುವುದಕ್ಕಾಗಿ ತನ್ನ ದೇಹವನ್ನು ಬೆಳೆಸತೊಡಗಿದನು (೮–೯). ಕಪಿಗಳೆಲ್ಲರೂ ನೋಡುತ್ತಿರಲು ಶ್ರೀರಾಮನ ಕಾರ್ಯವನ್ನು ಸಾಧಿಸುವುದಕ್ಕಾಗಿ ದೃಢಸಂಕಲ್ಪಮಾಡಿದ ಹನುಮಂತನು, ಹುಣ್ಣಿಮೆ ಅಮಾವಾಸ್ಯೆಗಳೆಂಬ ಪರ್ವಕಾಲದಲ್ಲಿ ಸಮುದ್ರವು ಉಬ್ಬುವಂತೆ ಉಬ್ಬುತ್ತಿದ್ದನು (೧೦). ಅದ್ಭುತಾಕಾರವಾಗಿ ತನ್ನ ದೇಹವನ್ನು ಬೆಳೆಸಿದಮೇಲೆ ಪರೀಕ್ಷಾರ್ಥವಾಗಿ ಕೈಗಳಿಂದ ಒಮ್ಮೆ ಮಹೇಂದ್ರಪರ್ವತವನ್ನು ಗುದ್ದಿ ಕಾಲುಗಳಿಂದ ಒದ್ದನು (೧೧). ಆಗ ಅಚಲವೆನಿಸಿದ ಪರ್ವತವು ಕ್ಷಣಕಾಲ ನಡುಗಿಹೋಯಿತು. ಮರಗಳಲ್ಲಿದ್ದ ಹೂಗಳೆಲ್ಲ ಉದುರಿಹೋದುವು. ಸುಗಂಧವನ್ನು ಬೀರುವ ಪುಷ್ಪರಾಶಿಯಿಂದ ಆ ಬೆಟ್ಟವು ಮುಚ್ಚಿ ಹೂವಿನಬೆಟ್ಟದಂತೆ ಕಂಗೊಳಿಸಿತು (೧೨–೧೩). ಮದ್ದಾನೆಯಿಂದ ಮದೋದಕವು ಸುರಿಯುವಂತೆ, ವೀರಾಗ್ರಣಿಯಾದ ಹನುಮಂತನಿಂದ ಪೀಡಿತವಾದ ಆ ಪರ್ವತದಿಂದ, ನೀರು ಉಕ್ಕಿ ಹರಿಯಲಾರಂಭಿಸಿತು. ಸುವರ್ಣಮಯವೂ ರಜತಮಯವೂ ಆದ ಅನೇಕ ಬಂಡೆಗಳು ಸೀಳಿಹೋಗಿ ವಿವಿಧ ವರ್ಣದ ನೀರು ಉಕ್ಕತೊಡಗಿತು (೧೪–೧೫). ಮಣಿಶಿಲೆಯಿಂದ ಕೂಡಿದ ದೊಡ್ಡ ದೊಡ್ಡ ಬಂಡೆಗಳು, ಅಗ್ನಿಜ್ವಾಲೆಯಿಂದೊಡಗೂಡಿದ ಹೊಗೆಯ ರಾಶಿಯಂತೆ ಉರುಳಿಬೀಳುತ್ತಿದ್ದವು (೧೬). ಹನುಮಂತನ ಗುದ್ದಿನಿಂದ ಪರ್ವತವು ಜಜ್ಜಿಹೋಗಲು, ಗುಹೆಗಳಲ್ಲಿ ಸಿಕ್ಕಿಕೊಂಡ ಮೃಗಗಳು ದೈನ್ಯದಿಂದ ಅರಚಿಕೊಳ್ಳುತ್ತಿದ್ದವು. ಆ ಮೃಗಗಳ ಆರ್ತನಾದವು ದಿಕ್ಕುದಿಕ್ಕುಗಳಿಗೂ ಹಬ್ಬಿ ಸುತ್ತಲೂ ಇದ್ದ ಅರಣ್ಯಗಳನ್ನು ಮೊಳಗಿಸಿಬಿಟ್ಟಿತು (೧೭–೧೮). ಸರ್ಪಗಳು ಸ್ವಸ್ತಿಕ ಚಿಹ್ನಾಂಕಿತವಾದ ಹೆಡೆಗಳನ್ನು ಮೇಲೆತ್ತಿ ಕ್ರೋಧದಿಂದ ಬುಸುಗುಟ್ಟುತ್ತಾ ಕಲ್ಲುಬಂಡೆಗಳನ್ನು ಕಚ್ಚಿದವು. ಕಚ್ಚಿದ ರಭಸಕ್ಕೆ ಬಂಡೆಗಳು ಚೂರುಚೂರಾದವು (೧೯–೨೦). ವಿಷಹಾರಿಗಳಾದ ಎಷ್ಟೋ ದಿವ್ಯಮೂಲಿಕೆಗಳು ಅಲ್ಲಿದ್ದರೂ ಸರ್ಪಗಳ ವಿಷಜ್ವಾಲೆಯನ್ನು ತಣಿಸಲು ಅವು ಶಕ್ತವಾಗಲಿಲ್ಲ (೨೧). ಈ ಪರ್ವತವು ಭೂತಬಾಧೆಯಿಂದ ಸೀಳಿಹೋಗುತ್ತಿರಬೇಕೆಂದು ಭಾವಿಸಿ ಅಲ್ಲಿದ್ದ ತಪಸ್ವಿಗಳು ಆಕಾಶಕ್ಕೆ ಹಾರಿಬಿಟ್ಟರು. ವಿಹಾರಾರ್ಥವಾಗಿ ಬಂದಿದ್ದ ವಿದ್ಯಾಧರರು ಅನೇಕ ಬಗೆಯ ಚಿನ್ನದ ಪಾತ್ರೆಗಳನ್ನೂ ನಾನಾ ಬಗೆಯ ಭಕ್ಷ್ಯಭೋಜ್ಯಗಳನ್ನೂ ಗುರಾಣಿಗಳನ್ನೂ ಚಿನ್ನದ ಹಿಡಿಯ ಖಡ್ಗಗಳನ್ನೂ ಅಲ್ಲಲ್ಲಿಯೇ ಬಿಟ್ಟು ತಮ್ಮ ಕಾಂತೆಯರೊಂದಿಗೆ ಭಯಗ್ರಸ್ತರಾಗಿ ಆಕಾಶದಲ್ಲಿ

ಹಾರಿ ನಿಂತರು. ಹಾರ ನೂಪುರ ಮುಂತಾದ ಆಭರಣಗಳನ್ನು ಧರಿಸಿದ ಕಮಲ ನೇತ್ರೆಯರಾದ ಮಧುಮತ್ತ ವಿದ್ಯಾಧರಿಯರು ವಿಸ್ಮಿತರಾಗಿ ಮಂದಹಾಸವನ್ನು ಬೀರುತ್ತ, ತಮ್ಮ ಕಾಂತರೊಂದಿಗೆ ಆಕಾಶದಲ್ಲಿ ನಿಂತರು. ವಿದ್ಯಾಧರರು ಅಣಿಮಾದಿ ಸಿದ್ಧಿಯ ಮಹಿಮೆಯಿಂದ ಪ್ರಿಯಾಸಹಿತರಾಗಿ ಗಗನತಳದಲ್ಲಿ ನಿಂತು, ಆ ಬೆಟ್ಟವನ್ನೇ ನೋಡತೊಡಗಿದರು (೨೨–೨೭). ಆ ಸಮಯದಲ್ಲಿ ಮಹಾತ್ಮರಾದ ಋಷಿಗಳೂ ಚಾರಣರೂ ಸಿದ್ಧರೂ ಆಕಾಶದಲ್ಲಿ ನಿಂತು "ಈ ಪರ್ವತಾಕಾರನಾದ ಹನುಮಂತನು ಮಹಾವೇಗದಿಂದ ಸಮುದ್ರವನ್ನು ದಾಟಬೇಕೆಂದು ಸನ್ನಾಹಮಾಡುತ್ತಿದ್ದಾನೆ (೨೮–೨೯). ಶ್ರೀರಾಮನಿಗೋಸ್ಕರ ಒಂದು ಅಸಾಧ್ಯವಾದ ಸಾಹಸವನ್ನು ಮಾಡಲು ಉದ್ಯೋಗಿಸಿ, ಸಮುದ್ರದ ಆಚೆಯ ದಡಕ್ಕೆ ಹೋಗಿ ಸೇರಬೇಕೆಂದು ಬಯಸಿದ್ದಾನೆ" ಎಂದು ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು. ವಿದ್ಯಾಧರರು ಆ ತಪಸ್ವಿಗಳ ಮಾತುಗಳನ್ನು ಕೇಳಿ, ಅಸದೃಶನಾದ ಆ ಕಪಿವೀರನು ಪರ್ವತದಮೇಲೆ ನಿಂತಿರುವುದನ್ನು ನೋಡಿದರು (೩೦–೩೧). ಪರ್ವತಾಕಾರನಾದ ಆಂಜನೇಯನು ತನ್ನ ರೋಮಗಳನ್ನು ಒದರಿ, ಮಹಾಮೇಘದಂತೆ ಒಂದುಸಲ ಗರ್ಜಿಸಿದನು. ಗರುಡನು ಸರ್ಪವನ್ನು ಬೀಸುವಹಾಗೆ, ರೋಮಗಳಿಂದ ವ್ಯಾಪ್ತವಾಗಿದ್ದ ದುಂಡನೆಯ ತನ್ನ ಬಾಲವನ್ನು ಆಡಿಸಿದನು. ಗರುಡನು ಒಯ್ಯುತ್ತಿರುವ ಘಟಸರ್ಪದಂತೆ ಆ ಬಾಲವು ಕಾಣಿಸಿತು (೩೨–೩೪). ಆಮೇಲೆ ದೊಡ್ಡ ಪರಿಘಾಯುಧಗಳಂತಿದ್ದ ಕೈಗಳನ್ನು ಪರ್ವತದಮೇಲೆ ದೃಢವಾಗಿ ಊರಿ, ಸೊಂಟವನ್ನು ಕುಗ್ಗಿಸಿ, ಕಾಲುಗಳನ್ನು ಸ್ವಲ್ಪ ಬಾಗಿಸಿದನು. ಭುಜಗಳನ್ನೂ ಶಿರಸ್ಸನ್ನೂ ಕೊಂಚ ತಗ್ಗಿಸಿ ಆ ಕಪಿವೀರನು ತೇಜಸ್ಸನ್ನೂ ಬಲವನ್ನೂ ಅಂತಶ್ಶಕ್ತಿಯನ್ನೂ ತನ್ನಲ್ಲಿ ಆವೇಶಮಾಡಿಕೊಂಡನು (೩೫–೩೬). ತಾನು ಹೋಗಬೇಕಾದ ಮಾರ್ಗದಲ್ಲಿ ಬಹು ದೂರದವರೆಗೆ ದೃಷ್ಟಿಯನ್ನು ಬೀರಿ ಗಗನವನ್ನು ನೋಡುತ್ತ ಉಸಿರನ್ನು ಬಿಗಿಹಿಡಿದನು. ಆ ಕಪಿಕುಂಜರನು ಪಾದಗಳನ್ನು ಗಟ್ಟಿಯಾಗಿ ಊರಿ ಕಿವಿಗಳನ್ನು ಕೊಂಚ ಮುದುರಿಸಿದನು (೩೭–೩೮). ಅನಂತರ ಕಪಿಗಳನ್ನು ನೋಡುತ್ತ "ಎಲೈ ವಾನರರೆ, ಶ್ರೀರಾಮನು ಬಿಟ್ಟ ಬಾಣದಹಾಗೆ ವಾಯುವೇಗದಿಂದ ನೇರವಾಗಿ ಲಂಕಾಪಟ್ಟಣಕ್ಕೆ ಹೋಗಿಬಿಡುತ್ತೇನೆ! ಲಂಕೆಯಲ್ಲಿ ಜನಕಸುತೆಯನ್ನು ನಾನು ಕಾಣದಿದ್ದರೆ, ಇದೇ ವೇಗದಿಂದ

ದೇವಲೋಕಕ್ಕೆ ಹೋಗುವೆನು (೩೯–೪೧). ಅಲ್ಲಿಯೂ ಸೀತಾದೇವಿಯು ದೊರಕದಿದ್ದರೆ ಪುನಃ ಲಂಕೆಗೆ ಬಂದು ರಾವಣನನ್ನು ಹೆಡಮುರಿಗೆ ಕಟ್ಟಿ ಎಳೆದು ಕೊಂಡು ಬರುತ್ತೇನೆ. ಸರ್ವಥಾ ನಾನು ಸೀತಾದೇವಿಯನ್ನು ದರ್ಶನಮಾಡಿಯೇ ಬರುತ್ತೇನೆ. ಇಲ್ಲವೆ, ರಾವಣಸಹಿತವಾಗಿ ಲಂಕೆಯನ್ನು ಹೊತ್ತು ತರುತ್ತೇನೆ. ಕಾರ್ಯವನ್ನು ಸಾಧಿಸಿಕೊಂಡು ಬರುವುದು ನಿಶ್ಚಯ!" ಎಂದು ಹೇಳಿದನು (೪೨–೪೩). ಇಷ್ಟು ಹೇಳಿ ಆ ವಾನರೋತ್ತಮನು ಏನನ್ನೂ ಲೆಕ್ಕಿಸದೆ ಗಗನಮಾರ್ಗದಲ್ಲಿ ನೆಗೆದುಬಿಟ್ಟನು. ತಾನು ಗರುಡನೆಂದೇ ಭಾವಿಸಿಕೊಂಡನು (೪೪). ಹೀಗೆ ಹನುಮಂತನು ಮೇಲಕ್ಕೆ ನೆಗೆದೊಡನೆ, ಆ ವೇಗಕ್ಕೆ ಬೆಟ್ಟ ದಲ್ಲಿ ಬೆಳೆದಿದ್ದ ಮರಗಿಡಗಳು ಕೊಂಬೆಗಳ ಸಹಿತವಾಗಿ ಹಾರಿಹೋದವು. ಹನುಮಂತನನ್ನು ಅನುಸರಿಸಿ ಹಾರಿಹೋದ ಆ ಪುಷ್ಪಿತ ವೃಕ್ಷಗಳು, ಬಹುದೂರ ಪ್ರಯಾಣ ಹೊರಟವನನ್ನು ಕಳಿಸಲು ಹೋಗುವ ಬಂಧುಗಳಂತೆ ಕಾಣುತ್ತಿದ್ದವು (೪೫–೪೭). ಹನುಮಂತನ ತೊಡೆಗಳ ವೇಗದಿಂದ ಕಿತ್ತುಹೋದ ಸಾಲ ವೃಕ್ಷಗಳು, ಮಹಾರಾಜನನ್ನು ಹಿಂಬಾಲಿಸುವ ಸೈನಿಕರಂತೆ ಅವನ ಹಿಂದೆ ಹೋದವು. ಹೀಗೆ ಅನೇಕ ವೃಕ್ಷಗಳಿಂದ ಪರಿವೃತನಾದ ಆಂಜನೇಯನು ನೋಡುವುದಕ್ಕೆ ಆಶ್ಚರ್ಯವನ್ನುಂಟುಮಾಡುತ್ತಿದ್ದನು (೪೮–೪೯). ಆಗ ದೇವೇಂದ್ರನ ಭಯದಿಂದ ಪರ್ವತಗಳು ಸಮುದ್ರದಲ್ಲಿ ಮುಳುಗಿಕೊಂಡಂತೆ, ಭಾರವಾಗಿದ್ದ ಮರಗಳು ಸಮುದ್ರದಲ್ಲಿ ಮುಳುಗಿಹೋದವು (೫೦). ಮರ ಗಳಿಂದ ಉದುರಿದ ನಾನಾ ಬಗೆಯ ಹೂಗಳಿಂದ ಮುಚ್ಚಿಹೋದ ಹನುಮಂತನು, ಮಿಂಚುಹುಳುಗಳಿಂದ ತುಂಬಿದ ಪರ್ವತದಂತೆ ಕಂಗೊಳಿಸಿದನು. ಸ್ವಲ್ಪ ಹೊತ್ತಿನಲ್ಲಿ ವೇಗದ ರಭಸದಿಂದ ತಪ್ಪಿಸಿಕೊಂಡ ವೃಕ್ಷಗಳು ಬಂಧುವನ್ನು ಕಳಿಸಿ ಕೊಟ್ಟ ಸ್ನೇಹಿತರಂತೆ, ತಮ್ಮ ಪ್ರಯಾಣವನ್ನು ನಿಲ್ಲಿಸಿ ಸಮುದ್ರದಲ್ಲಿ ಬಿದ್ದು ಹೋದವು (೫೧–೫೨). ಅನಂತರ ಮರದಿಂದ ಉದುರಿಹೋಗಿದ್ದ ನಾನಾ ಬಣ್ಣದ ಹೂಗಳು ಹಗುರವಾದ್ದರಿಂದ ಮೆಲ್ಲನೆ ನೀರಿಗೆ ಬೀಳುತ್ತಿದ್ದವು. ವಿವಿಧ ವರ್ಣದ ಹೂಗಳಿಂದ ಆವೃತನಾದ ಹನುಮಂತನು ವಿದ್ಯುಲ್ಲತೆಗಳಿಂದ ಸಮೇತ ವಾದ ಮೇಘದಂತೆ ಪ್ರಕಾಶಿಸುತ್ತಿದ್ದನು (೫೩–೫೪). ಹೂವಿನ ರಾಶಿಯು ಸಮುದ್ರದಮೇಲೆ ಬೀಳಲಾಗಿ, ಆ ಸಮುದ್ರವು ಸುಂದರ ನಕ್ಷತ್ರಗಳಿಂದ ರಂಜಿಸುವ ಅಂಬರದಂತೆ ಚೆಲುವಾಯಿತು (೫೫). ಹನುಮಂತನು ಆಕಾಶದಲ್ಲಿ

ತನ್ನ ಕೈಗಳನ್ನು ನೀಳವಾಗಿ ಚಾಚಿದ್ದನು. ಅವು ಪರ್ವತಾಗ್ರದಿಂದ ಹೊರಕ್ಕೆ ಬಂದ ಐದು ಹೆಡೆಯ ಸರ್ಪಗಳಂತೆ ಇದ್ದವು (೫೬). ಆಕಾಶದಲ್ಲಿ ಹಾರಿ ಹೋಗುತ್ತಿದ್ದ ಆ ಮಹಾಕಪಿಯನ್ನು ನೋಡಿದರೆ ಉಕ್ಕೇರುತ್ತಿದ್ದ ಮಹಾಸಾಗರವನ್ನೇ ಇವನೇನು ಕುಡಿದುಬಿಡುತ್ತಾನೋ, ಆಕಾಶವನ್ನೇ ನುಂಗಿಬಿಡುತ್ತಾನೊ ಎನಿಸುತ್ತಿದ್ದಿತು (೫೭). ಮಿಂಚಿನಂತೆ ಹೊಳೆಯುತ್ತಿದ್ದ ಅವನ ಕಣ್ಣುಗಳು ಪರ್ವತದಲ್ಲಿ ಉರಿಯುವ ಕಾಳ್ಗಿಚ್ಚಿನಂತೆಯೂ ಸೂರ್ಯಚಂದ್ರರಂತೆಯೂ ಬೆಳಗುತ್ತಿದ್ದವು. ಕೆಂಪನೆಯ ಮೂಗಿನಿಂದ ಯುಕ್ತವಾದ ಅವನ ಮುಖವು ಸಂಧ್ಯಾಕಾಲದ ಸೂರ್ಯನಂತೆ ಜ್ವಲಿಸುತ್ತಿತ್ತು (೫೮–೬೦). ನೆಟ್ಟಗೆ ಮೇಲೆತ್ತಿದ ಆ ಮಹಾಕಪಿಯ ಬಾಲವು ಆಕಾಶದಲ್ಲಿ ಎತ್ತಿ ನಿಲ್ಲಿಸಿರುವ ಇಂದ್ರಧ್ವಜದಂತೆ ಶೋಭಿಸುತ್ತಿತ್ತು. ಒಂದೊಂದುಸಲ ಅವನು ಬಾಲವನ್ನು ಚಕ್ರಾಕಾರವಾಗಿ ಮಡಿಸುತ್ತಿದ್ದನು. ಆ ಸಮಯದಲ್ಲಿ ಪರಿವೇಷ*ಯುಕ್ತನಾದ ಸೂರ್ಯನಂತೆ ವಿರಾಜಿಸುತ್ತಿದ್ದನು. ಅವನ ಕಟಿಪ್ರದೇಶವು ಬಹುಕೆಂಪಗಿದ್ದುದರಿಂದ, ಮಣಿಶಿಲಾದಿ ರಕ್ತವರ್ಣದ ಧಾತುಗಳಿಂದ ಕೂಡಿದ ಪರ್ವತದಂತೆ ಅವನು ಕಾಣುತ್ತಿದ್ದನು (೬೧–೬೩). ಸಾಗರವನ್ನು ಲಂಘಿಸುತ್ತಿದ್ದ ಆ ವಾನರಸಿಂಹನ ಬಗಲುಗಳ ಮಧ್ಯದಲ್ಲಿ ಗಾಳಿಯು ರಭಸದಿಂದ ಬೀಸುತ್ತ ಮೇಘದಂತೆ ಘೋರೆಂದು ಶಬ್ದಮಾಡುತ್ತಿದ್ದಿತು. ಬಾಲಸಹಿತವಾದ ಒಂದು ಘೋರ ಉಲ್ಕೆಯು ಪ್ರಜ್ವಲಿಸುತ್ತ ಉತ್ತರದಿಕ್ಕಿನಿಂದ ಎರಗುತ್ತಿದೆಯೋ ಎಂಬಂತೆ ಆ ವಾನರಶ್ರೇಷ್ಠನು ಪ್ರಯಾಣಮಾಡುತ್ತಿದ್ದನು (೬೪–೬೫). ಮಹಾವೇಗದಿಂದ ಚಲಿಸುತ್ತಿರುವ ಸೂರ್ಯನೋ ಎಂಬಂತೆ ಶೋಭಿಸುತ್ತಿದ್ದ ಹನುಮಂತನು ಸೊಂಟಕ್ಕೆ ವಸ್ತ್ರವನ್ನು ಬಿಗಿದುಕಟ್ಟಿದ್ದರಿಂದ ದೃಢಕಾಯನಾದ ಆತನು ನಡುಕಟ್ಟಿನಿಂದ ಬಿಗಿದಿರುವ ಮದ್ದಾನೆಯಂತೆ ಕಾಣಿಸುತ್ತಿದ್ದನು. ಅಂತರಿಕ್ಷದಲ್ಲಿದ್ದ ಅವನ ದೇಹವೂ ಸಮುದ್ರದ ನೀರಿನಲ್ಲಿ ಮೂಡಿದ ನೆರಳೂ ಏಕಾಕಾರವಾಗಿ ಮುಂದೆ ಮುಂದೆ ಸಾಗುತ್ತಿರಲು, ಒಂದು ದೊಡ್ಡ ಹಡಗು ಸಮುದ್ರಯಾನ ಮಾಡುವಂತೆ ಕಾಣಿಸುತ್ತಿದ್ದಿತು (೬೬–೬೭). ಅವನು ಸಮುದ್ರದ ಯಾವ ಯಾವ ಪ್ರದೇಶದ ಮೇಲುಗಡೆ ರಭಸದಿಂದ ಹಾರಿಹೋಗುತ್ತಿದ್ದನೋ, ಆ ಪ್ರದೇಶದ ನೀರು ಅವನ ವೇಗದ ಹೊಡೆತಕ್ಕೆ ಸಿಕ್ಕಿ ಕ್ಷೋಭೆಗೊಂಡು ಉಕ್ಕಿ

* ಸೂರ್ಯನ ಸುತ್ತಲೂ ಮಂಡಲಾಕಾರವಾಗಿ ಕಾಣುವ ಗುರುತು.

ನೊರೆಯುಗುಳುತ್ತ ಮೊರೆಯುತ್ತಲಿದ್ದುದರಿಂದ, ಸಮುದ್ರವು ಅಪಸ್ಮಾರ ರೋಗಿಯಂತೆ ಕಾಣಿಸುತ್ತಿತ್ತು (೬೮). ಅತ್ಯುನ್ನತವಾಗಿ ಏಳುತ್ತಿದ್ದ ಸಮುದ್ರದ ಅಲೆಗಳನ್ನು ಆಂಜನೇಯನು ಶಿಲಾಮಯವಾದ ಪರ್ವತದಂತಿದ್ದ ತನ್ನ ಎದೆಯಿಂದಲೇ ಸೀಳುತ್ತ ಮುಂದೆ ಸಾಗುತ್ತಿದ್ದನು (೬೯). ಹನುಮಂತನು ಹಾರುತ್ತಿದ್ದ ಬಿರುಸಿನಿಂದ ಉತ್ಪನ್ನವಾದ ವಾಯುವೂ ಮೇಘದ ವಾಯುವೂ ಸೇರಿ ಭಯಂಕರವಾಗಿ ಧ್ವನಿಮಾಡುತ್ತ ಸಾಗರವನ್ನು ಉಲ್ಲೋಲಕಲ್ಲೋಲ ವಾಗಿ ತುಳುಕಿಸಿದವು (೭೦). ಬೃಹತ್ತರವಾದ ತರಂಗಮಾಲಿಗಳನ್ನು ತನ್ನೊಡನೆ ಸೆಳೆದೊಯ್ಯುತ್ತಿದ್ದ ಆಂಜನೇಯನು ಭೂವ್ಯಾಕಾಶಗಳನ್ನು ಕತ್ತರಿಸುತ್ತಿರುವನೋ ಎಂಬಂತೆ ಕಾಣಿಸಿದನು (೭೧). ಮೇರುಮಂದರ ಪರ್ವತಗಳಂತೆ ತರಂಗಗಳು ಸಮುದ್ರದಿಂದ ಮೇಲಕ್ಕೆ ಏಳುತ್ತಿರಲಾಗಿ, ಹನುಮಂತನು ಅವುಗಳನ್ನು ಎಣಿಸುತ್ತ ದಾಟಿಹೋಗುತ್ತಿರುವನೋ ಎನ್ನಿಸಿತು (೭೨). ಅವನ ವೇಗದಿಂದ ಸಮುದ್ರದ ಜಲವು ಆಕಾಶದಲ್ಲಿದ್ದ ಮೋಡಗಳ ವರೆಗೆ ಚಿಮ್ಮಿಹೋಗುತ್ತಿತ್ತು. ಸ್ವಚ್ಛವಾಗಿ ಬೆಳ್ಳಗಿದ್ದ ಆ ಜಲರಾಶಿಯು ಶರತ್ಕಾಲದ ಮೇಘದಂತೆ ಸುಂದರವಾಗಿ ರಂಜಿಸುತ್ತಿತ್ತು (೭೩). ಹೀಗೆ ನಿರಂತರವಾಗಿ ಸಮುದ್ರಜಲವೆಲ್ಲವೂ ಮೇಲಕ್ಕೆ ಚಿಮ್ಮಿಹೋಗುತ್ತಿದ್ದುದರಿಂದ, ಸಮುದ್ರದೊಳಗಿದ್ದ ಮೀನು, ಮೊಸಳೆ, ಆಮೆ ಮುಂತಾದ ಪ್ರಾಣಿಗಳು ಬಟ್ಟೆ ಯನ್ನು ಬಿಚ್ಚಿಹಾಕಿದ ಮನುಷ್ಯರ ಅವಯವಗಳಂತೆ ಸ್ಪಷ್ಟವಾಗಿ ಗೋಚರಿಸು ತ್ತಿದ್ದವು (೭೪). ಗಗನಮಾರ್ಗದಲ್ಲಿ ಹಾರಿಬರುತ್ತಿದ್ದ ಆ ಕಪಿಶಾರ್ದೂಲನನ್ನು ನೋಡಿ ಸಮುದ್ರದಲ್ಲಿದ್ದ ಸರ್ಪಗಳು, ಅವನು ಗರುಡನೇ ಇರಬೇಕೆಂದು ಹೆದರಿ ತತ್ತರಿಸಿಹೋದವು (೭೫). ಆ ವಾನರಸಿಂಹನ ನೆರಳು ಹತ್ತು ಯೋಜನ ಅಗಲವಾಗಿಯೂ ಮೂವತ್ತು ಯೋಜನ ಉದ್ದವಾಗಿಯೂ ಕಂಗೊಳಿಸುತ್ತಿತ್ತು (ಹನುಮಂತನು ಹಾರುತ್ತಿದ್ದ ಸಮಯ ಪ್ರಾತಃಕಾಲವಾದ್ದರಿಂದ ನೆರಳು ದೊಡ್ಡ ದಾಗಿತ್ತು) (೭೬). ಸ್ವಚ್ಛವಾದ ಸಮುದ್ರದ ನೀರಿನಮೇಲೆ ಬಿದ್ದ ಹನುಮಂತನ ನೆರಳು ಆಕಾಶದಲ್ಲಿರುವ ಮೇಘಮಂಡಲದಂತೆ ಅವನನ್ನೇ ಹಿಂಬಾಲಿಸಿ ಹೋಗುತ್ತಿದ್ದಿತು (೭೭). ಅತ್ಯಂತ ತೇಜಸ್ವಿಯೂ ಮಹಾಶರೀರವುಳ್ಳವನೂ ಆದ ಆ ವಾನರೋತ್ತಮನು ಆಕಾಶದಲ್ಲಿ ಹಾರಿಹೋಗುತ್ತಿರುವ ಪರ್ವತವೋ ಎಂಬಂತೆ ಕಾಣುತ್ತಿದ್ದನು (೭೮). ಬಲಶಾಲಿಯಾದ ಆ ಕಪಿಕುಂಜರನು

ಯಾವ ಯಾವ ಪ್ರದೇಶದಲ್ಲಿ ಹಾರಿಹೋಗುತ್ತಿದ್ದನೋ, ಅಲ್ಲಿ ಸಮುದ್ರದ ನೀರು (ಅವನ ಒತ್ತಡದಿಂದ) ಉದ್ದಕ್ಕೂ ತಗ್ಗಿ ಹೋಗಿ ಸಮುದ್ರವೇ ಒಂದು ದೋಣಿಯಂತೆ ಕಾಣಿಸುತ್ತಿತ್ತು (೭೯). ಆತನು ಪಕ್ಷಿಗಳಿಗೆ ದಾರಿಯಾದ ಅಂತರಿಕ್ಷದಲ್ಲಿ ಪಕ್ಷಿರಾಜನಂತೆ ಹಾರುತ್ತ, ವಾಯುವಿನಂತೆ ಮೋಡಗಳನ್ನು ತನ್ನೊಡನೆ ಸೆಳೆದೊಯ್ಯುತ್ತಿದ್ದನು. ಮೇಘಪಂಕ್ತಿಗಳ ಮಧ್ಯದಲ್ಲಿ ನುಗ್ಗಿ ಬರುತ್ತಿದ್ದುದರಿಂದ, ಚಂದ್ರನಂತೆ ಒಮ್ಮೊಮ್ಮೆ ಮೋಘಗಳಲ್ಲಿ ಮರೆಯಾಗುತ್ತಲೂ ಇನ್ನೊಮ್ಮೆ ಹೊರಗೆ ಪ್ರಕಾಶಿಸುತ್ತಲೂ ಇದ್ದನು. ಅವನ ಸೆಳೆತಕ್ಕೆ ಸಿಕ್ಕಿದ ನಾನಾ ಬಣ್ಣದ ಮೋಡಗಳು ಬಹು ಸುಂದರವಾಗಿ ಕಾಣುತ್ತಿದ್ದವು (೮೦–೮೨). ರಾಮಕಾರ್ಯಾರ್ಥವಾಗಿ ಹಾರುತ್ತಿದ್ದ ಆ ಕಪಿವೀರನ ಮೇಲೆ, ದೇವ ಗಂಧರ್ವ ಚಾರಣರು ಪುಷ್ಪವೃಷ್ಟಿಯನ್ನು ಸುರಿಸಿದರು. ಸೂರ್ಯನು ತಾಪವನ್ನುಂಟು ಮಾಡಲಿಲ್ಲ. ವಾಯುವು ಸುಖಕರವಾಗಿ ಬೀಸಿದನು. ಋಷಿಗಳು ಹೊಗಳಿದರು. ದೇವಗಂಧರ್ವಾದಿಗಳು ಸ್ತೋತ್ರಮಾಡಿದರು (೮೩–೮೬). ಆ ಸಮಯದಲ್ಲಿ ಇಕ್ಷ್ವಾಕುವಂಶಕ್ಕೆ ಮೇಲ್ಮೆಯನ್ನು ಬಯಸುವ ಸಮುದ್ರರಾಜನಿಗೆ ಒಂದು ಆಲೋಚನೆಯುಂಟಾಯಿತು. 'ಈ ವಾನರೇಂದ್ರನಿಗೆ ನಾನು ಸಹಾಯಮಾಡದಿದ್ದರೆ ಪ್ರಪಂಚದಲ್ಲಿ ಎಲ್ಲರೂ ನನ್ನನ್ನು ನಿಂದಿಸಬಹುದು (೮೭–೮೮). ಇಕ್ಷ್ವಾಕುವಂಶಕ್ಕೆ ಹಿರಿಯನಾದ ಸಗರಚಕ್ರವರ್ತಿಯಿಂದ ನಾನು ಅಭಿವೃದ್ಧಿಗೆ ಬಂದಿರುವೆನು. ಆ ವಂಶದಲ್ಲಿ ಜನಿಸಿದ ಶ್ರೀರಾಮನ ಕಾರ್ಯವನ್ನು ಸಾಧಿಸುವುದಕ್ಕಾಗಿ ಈ ಹನುಮಂತನು ಹೋಗುತ್ತಿದ್ದಾನೆ. ಈತನು ಇಷ್ಟು ಶ್ರಮಪಡುತ್ತಿರುವಾಗ ನಾನು ಸುಮ್ಮನಿರಬಾರದು. ಇವನು ಸ್ವಲ್ಪಕಾಲ ನನ್ನಲ್ಲಿ ವಿಶ್ರಮಿಸಿ ಸುಖವಾಗಿ ಮುಂದೆ ಪ್ರಯಾಣಮಾಡಲಿ.' ಸಮುದ್ರರಾಜನು ಹೀಗೆ ವಿಚಾರ ಮಾಡಿ, ತನ್ನಲ್ಲಿ ಮುಳುಗಿದ್ದ ಮೈನಾಕಪರ್ವತವನ್ನು ಕುರಿತು ಹೇಳಿದನು (೮೯–೯೧): "ಎಲೈ ಪರ್ವತಶ್ರೇಷ್ಠ, ಪಾತಾಳದಲ್ಲಿರುವ ರಾಕ್ಷಸರು ಮೇಲಕ್ಕೆ ಎದ್ದು ಬಾರದಂತೆ ದೇವೇಂದ್ರನು ನಿನ್ನನ್ನು ಅಡ್ಡಲಾಗಿ ಇಲ್ಲಿ ಇಟ್ಟಿರುವನು. ಸರ್ವತೋಮುಖವಾಗಿ ಬೆಳೆಯಬಲ್ಲ ಶಕ್ತಿ ನಿನಗಿದೆ. ಈಗ ಒಂದು ಕೆಲಸಕ್ಕಾಗಿ ನಿನ್ನನ್ನು ಪ್ರೋತ್ಸಾಹಿಸಬೇಕಾಗಿದೆ (೯೨–೯೪). ಕಪಿಶ್ರೇಷ್ಠನಾದ ಹನುಮಂತನು ರಾಮಕಾರ್ಯಾರ್ಥವಾಗಿ ಅಂತರಿಕ್ಷದಲ್ಲಿ ಹಾರಿಹೋಗುತ್ತಿದ್ದಾನೆ. ಇಕ್ಷ್ವಾಕುವಂಶದವರಿಂದ ಉಪಕೃತನಾದ ನಾನು ಅವನಿಗೆ ಸಹಾಯ

ಮಾಡಬೇಕು. ನನಗೆ ಇಕ್ಷ್ವಾಕುವಂಶದವರು ಪೂಜ್ಯರು. ನಿನಗೂ ಅತ್ಯಂತ ಪೂಜ್ಯರು. ಕರ್ತವ್ಯವನ್ನು ನೆರವೇರಿಸದಿದ್ದರೆ ಸಜ್ಜನರಿಗೆ ಕೋಪ ಉಂಟಾಗುವುದು. (೯೫–೯೭). ಈ ಹನುಮಂತನು ನಮಗೆ ಅತಿಥಿಯಾಗಿರುವನು ಆದ್ದರಿಂದ ನೀನು ಕೂಡಲೆ ನೀರಿನಿಂದ ಮೇಲಕ್ಕೇಳು. ಸ್ವಲ್ಪಕಾಲ ಅವನು ನಿನ್ನಲ್ಲಿ ಕುಳಿತು ವಿಶ್ರಮಿಸಿಕೊಂಡು ಮುಂದೆ ಪ್ರಯಾಣಮಾಡಲಿ. ಶ್ರೀರಾಮನ ಕಾರುಣ್ಯವನ್ನೂ, ಸೀತೆಗೆ ಒದಗಿರುವ ಕಷ್ಟವನ್ನೂ, ಅದಕ್ಕಾಗಿ ಹನುಮಂತನು ವಹಿಸಿರುವ ಶ್ರಮವನ್ನೂ ಪರ್ಯಾಲೋಚಿಸು" (೯೮–೧೦೦). ಸಮುದ್ರರಾಜನ ಮಾತನ್ನು ಕೇಳಿ ಮೈನಾಕನು ತನ್ನಲ್ಲಿ ಇರುವ ದೊಡ್ಡ ದೊಡ್ಡ ಮರಬಳ್ಳಿಗಳೊಡನೆ, ಸೂರ್ಯನು ಮೇಘಮಂಡಲವನ್ನು ಭೇದಿಸಿಕೊಂಡು ಹೊರಕ್ಕೆ ಬರುವಂತೆ ಸಮುದ್ರಜಲವನ್ನು ಭೇದಿಸಿಕೊಂಡು ಮೇಲೆದ್ದನು (೧೦೧–೧೦೨). ಸೂರ್ಯನಂತೆ ಹೊಳೆಯುತ್ತಿದ್ದ ಸುವರ್ಣಮಯವಾದ ಮೈನಾಕನ ಶಿಖರಗಳು ಸಮುದ್ರದಿಂದ ಮೇಲಕ್ಕೇರಲು ನೀಲವರ್ಣದ ಆಕಾಶವು ಚಿನ್ನದಂತೆ ಜಗ್ಗೆಂದು ಹೊಳೆಯಿತು. ಆ ಶಿಖರಗಳಲ್ಲಿ ಮಹಾಸರ್ಪಗಳೂ ಕಿನ್ನರರೂ ಇದ್ದರು. ಮೈನಾಕನು ಪ್ರಕಾಶಮಾನವಾದ ತನ್ನ ಶಿಖರಗಳಿಂದ, ಏಕಕಾಲದಲ್ಲಿ ಉದಯಿಸಿದ ನೂರಾರು ಸೂರ್ಯಮಂಡಲಗಳಂತೆ ಪ್ರಜ್ವಲಿಸುತ್ತಿದ್ದನು (೧೦೩–೧೦೬). ಇದ್ದಕ್ಕಿದ್ದಂತೆ ಮೇಲಕ್ಕೆದ್ದು ನಿಂತ ಆ ಬೆಟ್ಟವನ್ನು ನೋಡಿ, ಇದೇನೋ ನನಗೆ ಅಡ್ಡಿಯಾಗಿ ಬಂದಿತೆಂದೆಣಿಸಿ ಮಹಾಪರಾಕ್ರಮಿಯಾದ ಆಂಜನೇಯನು, ಬಿರುಗಾಳಿಯು ಮೇಘವನ್ನು ಅಪ್ಪಳಿಸುವಂತೆ ತನ್ನ ಎದೆಯಿಂದಲೇ ಮೈನಾಕನನ್ನು ತಳ್ಳಿ ಕೆಡಹಿದನು (೧೦೭–೧೦೮). ಮೈನಾಕನು ಪೆಟ್ಟನ್ನು ತಡೆಯುಲಾರದೆ ಬಿದ್ದುಹೋದರೂ, ಹನುಮಂತನ ಬಲವೈಭವಕ್ಕೆ ಸಂತೋಷಪಟ್ಟು ತಾನು ಬಂದ ಉದ್ದೇಶವನ್ನು ತಿಳಿಸುವುದಕ್ಕಾಗಿ ಕೂಗಿಕೊಂಡನು (೧೦೯). ಅನಂತರ ಮನುಷ್ಯರೂಪವನ್ನು ಧರಿಸಿ ಆಕಾಶಮಾರ್ಗದಲ್ಲಿ ತನ್ನ ಶಿಖರಗಳ ಮೇಲೆ ಕಾಣಿಸಿಕೊಂಡು ಹನುಮಂತನನ್ನು ಕುರಿತು ಹೀಗೆಂದನು: "ವಾನರೋತ್ತಮ, ಬೇರೊಬ್ಬರಿಗೆ ಅಸಾಧ್ಯವಾದ ಕಾರ್ಯವನ್ನು ನಡೆಸಲು ನೀನು ಉದ್ಯುಕ್ತನಾಗಿರುವೆ (೧೧೦–೧೧೧). ನನ್ನ ಶಿಖರಗಳಮೇಲೆ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಹೋಗಬಾರದೆ? ಈ ಸಮುದ್ರರಾಜನು ರಘುವಂಶದ ರಾಜರಿಂದ ವೃದ್ಧಿಗೆ ಬಂದಿದ್ದಾನೆ. ರಘುವಂಶತಿಲಕನಾದ ಶ್ರೀರಾಮನ

ಕಾರ್ಯಕ್ಕಾಗಿ ನೀನು ಹೊರಟಿದ್ದೀಯೆ. ಉಪಕಾರ ಮಾಡಿದವರಿಗೆ ಪ್ರತ್ಯುಪಕಾರ ಮಾಡುವುದು ಸನಾತನಧರ್ಮ. ಆದ್ದರಿಂದ ಸಮುದ್ರನು ನಿನಗೆ ಅತಿಥಿಸತ್ಕಾರ ಮಾಡಿ ಗೌರವಿಸಬೇಕೆಂದಿರುವನು. ಅವನು ಇದಕ್ಕಾಗಿಯೇ ನನ್ನನ್ನು ಕರೆದು 'ಈ ಕಪಿಶ್ರೇಷ್ಠನು ನೂರು ಯೋಜನಗಳನ್ನೂ ಒಂದೇ ನೆಗೆತಕ್ಕೆ ಹಾರಿಹೋಗಬೇಕೆಂದಿರುವನು. ಸ್ವಲ್ಪಕಾಲ ನಿನ್ನ ತಪ್ಪಲುಗಳಲ್ಲಿ ವಿಶ್ರಾಂತಿ ತೆಗೆದುಕೊಂಡು ಹೋಗುವಂತೆ ಕೇಳಿಕೊ' ಎಂದು ಹೇಳಿದ್ದಾನೆ (೧೧೨–೧೧೫). ಹೇ ಆಂಜನೇಯ, ನನ್ನ ಶಿಖರದಮೇಲೆ ಕುಳಿತು ಆಯಾಸವನ್ನು ಪರಿಹರಿಸಿಕೊಂಡು ಮುಂದೆ ಹೋಗು. ಸುವಾಸನೆಯನ್ನು ಬೀರುವ ರುಚಿಕರವಾದ ಗಡ್ಡೆಗೆಣಸುಗಳೂ ಹಣ್ಣುಹಂಪಲುಗಳೂ ಇಲ್ಲಿ ಬೇಕಾದಷ್ಟಿವೆ. ಅವುಗಳನ್ನೆಲ್ಲಾ ಆಸ್ವಾದಿಸುತ್ತ ಈ ದಿನ ವಿಶ್ರಮಿಸಿ ನಾಳೆ ಮುಂದಕ್ಕೆ ಪ್ರಯಾಣ ಮಾಡಬಹುದು. ಮತ್ತು ನನಗೆ ನಿನ್ನೊಡನೆ ಇನ್ನೊಂದು ಬಗೆಯಲ್ಲಿ ಸಾಕ್ಷಾತ್ ಸಂಬಂಧ ಉಂಟು (೧೧೬–೧೧೭). ವಾನರೋತ್ತಮ, ನೀನು ಮಹಾಗುಣಶಾಲಿಯೆಂದು ಮೂರುಲೋಕಗಳಲ್ಲಿಯೂ ಪ್ರಸಿದ್ಧನಾಗಿದ್ದೀಯೆ. ವೇಗಶಾಲಿಗಳಾಗಿ ಹಾರಬಲ್ಲ ಕಪಿಗಳಲ್ಲೆಲ್ಲ ನೀನು ಶ್ರೇಷ್ಠನೆಂದು ನನ್ನ ಭಾವನೆ. ಅತಿಥಿಯು ಸಾಮಾನ್ಯನಾಗಿದ್ದರೂ ಪೂಜಾರ್ಹನು. ನಿನ್ನಂತಹ ಅತಿಥಿಯಾದರೆ ಹೇಳಬೇಕಾದ್ದೇನು? ನೀನು ಮಹಾತ್ಮನಾದ ವಾಯುದೇವನ ಪುತ್ರನು. ತಂದೆಗೆ ತಕ್ಕ ಮಗ. ನಿನ್ನನ್ನು ಪೂಜಿಸಿದರೆ ವಾಯುದೇವನನ್ನೇ ಪೂಜಿಸಿದಂತಾಗುವುದು (೧೧೮–೧೨೧). ಕೃತಯುಗದಲ್ಲಿ ಪರ್ವತಗಳಿಗೆ ರೆಕ್ಕೆಗಳಿದ್ದವು. ಅವು ಆಕಾಶದಲ್ಲಿ ಹಾರಾಡುತ್ತಿದ್ದುದರಿಂದ ದೇವಾದಿ ಸಮಸ್ತ ಜೀವಿಗಳೂ, ಇವು ತಮ್ಮ ಮೇಲೆ ಎಲ್ಲಿ ಬಿದ್ದುಬಿಡುತ್ತವೋ ಎಂದು ಗಾಬರಿಗೊಂಡರು. ಆಗ ಕ್ರುದ್ಧನಾದ ದೇವೇಂದ್ರನು ಪರ್ವತಗಳ ರೆಕ್ಕೆಗಳನ್ನು ವಜ್ರಾಯುಧದಿಂದ ಕತ್ತರಿಸುತ್ತ ಬಂದನು. ಒಂದು ಸಲ ನನ್ನನ್ನು ಅಟ್ಟಿಸಿಕೊಂಡು ಬಂದನು (೧೨೨–೧೨೫). ಆಗ ವಾಯುದೇವನು ಅತಿವೇಗದಿಂದ ನನ್ನನ್ನು ತಳ್ಳಿಕೊಂಡು ಬಂದು ಸಮುದ್ರದಲ್ಲಿ ಮುಳುಗಿಸಿಬಿಟ್ಟನು. ಈ ರೀತಿ ನನ್ನ ರೆಕ್ಕೆಗಳನ್ನುಳಿಸಿ ನಿನ್ನ ತಂದೆ ನನ್ನನ್ನು ಕಾಪಾಡಿದ್ದಾನೆ. ಆದ್ದರಿಂದ ನಿನ್ನನ್ನು ಉಪಚರಿಸುವುದು ನನ್ನ ಕರ್ತವ್ಯ. ವಾಯುದೇವನು ನನಗೆ ಮಾನ್ಯನಲ್ಲವೆ? (೧೨೬–೧೨೭). ಹೀಗೆ ನಿನ್ನ ಸಂಬಂಧ ಉಂಟಾದದ್ದು ನನ್ನ

ಭಾಗ್ಯ. ಈ ಸಂದರ್ಭದಲ್ಲಿ ವಿಶ್ರಮಿಸಿಕೊಂಡು ನಮ್ಮ ಸತ್ಕಾರವನ್ನು ಸ್ವೀಕರಿಸಿ,
ನನಗೂ ಸಮುದ್ರರಾಜನಿಗೂ ನೀನು ಸಂತೋಷವನ್ನುಂಟುಮಾಡಬೇಕು”
(೧೨೮–೧೩೦). ಆಗ ಹನುಮಂತನು “ಮೈನಾಕ, ನೀನು ಅತಿಥಿಸತ್ಕಾರ
ಮಾಡಿದಂತೆಯೇ ಆಯಿತು. ನಾನು ಸಂತುಷ್ಟನಾಗಿದ್ದೇನೆ. ವಿಷಾದಪಡಬೇಡ.
ನಾನು ತ್ವರೆಯಿಂದ ಹೋಗಬೇಕಾಗಿದೆ. ಹಗಲು ಕಳೆದುಹೋಗುತ್ತಿದೆ. ಮಧ್ಯ
ದಲ್ಲಿ ಎಲ್ಲಿಯೂ ನಿಲ್ಲದೆ (ರಾಮಬಾಣದಂತೆ) ಹೋಗುತ್ತೇನೆಂದು ಕಪಿಗಳಿಗೆ
ಮಾತುಕೊಟ್ಟಿದ್ದೇನೆ” ಎಂದು ಹೇಳಿ ಮೈನಾಕನನ್ನು ಮೈದಡವಿ ಮುಗುಳುನಗೆ
ಬೀರುತ್ತ ಮುಂದೆ ಹೊರಟನು. ಮೈನಾಕ ಸಮುದ್ರರಾಜರಿಬ್ಬರೂ ಗೌರವ
ದೃಷ್ಟಿಯಿಂದ ಅವನನ್ನೇ ನೋಡುತ್ತ ನಿಂತರು (೧೩೧–೧೩೩). ಅವನಿಗೆ
ಒಳ್ಳೆಯದಾಗಲೆಂದು ಹಾರೈಸಿದರು. ಹನುಮಂತನು ಹಿಂದಿರುಗಿ ಅವನನ್ನು
ನೋಡುತ್ತ ಇನ್ನೂ ಮೇಲಕ್ಕೆ ಗಗನತಳವನ್ನೇರಿ ನಿರಾಲಂಬವಾದ ಆಕಾಶ
ಮಾರ್ಗದಲ್ಲಿ ವೇಗದಿಂದ ಮುಂದೆ ಹೊರಟನು (೧೩೪–೧೩೫). ಸಮುದ್ರ
ಲಂಘನವನ್ನು ಆರಂಭಿಸಿದ್ದಲ್ಲದೆ, ವಿಶ್ರಾಂತಿಯನ್ನೇ ಅಪೇಕ್ಷಿಸದೆ, ಮುಂದೆ
ಪ್ರಯಾಣಮಾಡಿದುದು ಹನುಮಂತನು ನಡೆಸಿದ ಎರಡನೆಯ ಆಶ್ಚರ್ಯಕರ
ವಾದ ಕೆಲಸ. ಅದನ್ನು ನೋಡಿ ಸಮಸ್ತ ದೇವತೆಗಳೂ ಸಿದ್ಧರೂ ಪರಮರ್ಷಿ
ಗಳೂ ಅವನನ್ನು ಪ್ರಶಂಸೆಮಾಡಿದರು (೧೩೬–೧೩೭). ಮೈನಾಕನ
ಈ ಉಪಕಾರಬುದ್ಧಿಯನ್ನು ಕಂಡು ದೇವತೆಗಳಿಗೂ ಇಂದ್ರನಿಗೂ ಸಂತೋಷ
ವಾಯಿತು. ಇಂದ್ರನು ಗದ್ಗದಸ್ವರದಿಂದ ಅವನನ್ನು ಕುರಿತು “ಎಲೈ ಮೈನಾಕ,
ನಿನ್ನಮೇಲೆ ನಾನು ಸುಪ್ರೀತನಾಗಿದ್ದೇನೆ (೧೩೮–೧೩೯). ಇನ್ನು ನನ್ನಿಂದ
ನಿನಗೆ ಭಯವಿಲ್ಲ. ಎಲ್ಲಿ ಬೇಕಾದರೂ ಸಂಚರಿಸಬಹುದು. ನಿರ್ಭಯವಾಗಿ
ನೂರು ಯೋಜನ ದೂರ ಹಾರಲು ಹೊರಟಿರುವ ಈ ಹನುಮಂತನಿಗೆ ಏನಾಗು
ವುದೋ ಎಂದು ನಾವು ಭಯಗೊಂಡಿರುವಾಗ, ಯುಕ್ತವಾದ ಸಹಾಯವನ್ನು
ಮಾಡಿದ್ದೀಯೆ (೧೪೦). ಶ್ರೀರಾಮನ ಕಾರ್ಯಕ್ಕಾಗಿ ಹೋಗುತ್ತಿರುವ
ಈತನಿಗೆ ಯಥಾಶಕ್ತಿ ಉಪಚಾರಮಾಡಲು ನೀನು ಮುಂದೆ ಬಂದದ್ದರಿಂದ
ನನಗೆ ಬಹಳ ಸಂತೋಷವಾಯಿತು” ಎಂದು ಹೇಳಿದನು. ಇಂದ್ರನು ಸಂಪ್ರೀತ
ನಾದ್ದರಿಂದ ಮೈನಾಕನಿಗೆ ಪರಮಾನಂದವಾಯಿತು. ಅಂದಿನಿಂದ ನಿರ್ಭಯ
ನಾಗಿ ಸುಖದಿಂದಿದ್ದನು (೧೪೧–೧೪೩). ಇತ್ತ ಆಂಜನೇಯನು ಸಾಗರವನ್ನು

ದಾಟಿಹೋಗುತ್ತಿದ್ದನು. ಆಗ ದೇವಗಂಧರ್ವಾದಿಗಳು ನಾಗಮಾತೆಯಾದ ಸುರಸೆಯನ್ನು ಕರೆದು "ಸುರಸೆ, ವಾಯುಪುತ್ರನಾದ ಹನುಮಂತನೆಂಬವನು ಸಮುದ್ರದ ಮೇಲೆ ಹಾರಿಹೋಗುತ್ತಿರುವನು (೧೪೪–೧೪೫). ಈಗ ನೀನು ಪರ್ವತಾಕಾರವೂ ಘೋರವೂ ಆದ ಒಂದು ರಾಕ್ಷಸಾಕಾರವನ್ನು ತಾಳಿ ಇವನನ್ನು ಅಡ್ಡಗಟ್ಟು. ಇವನ ಪರಾಕ್ರಮವೆಷ್ಟು, ಉಪಾಯದಿಂದ ನಿನ್ನನ್ನು ಗೆಲ್ಲುವನೋ, ಇಲ್ಲವೆ, ಏನೂ ಮಾಡಲಾರದೆ ಖಿನ್ನನಾಗುವನೋ ಎಂಬುದನ್ನು ನಾವು ಪರೀಕ್ಷಿಸಬೇಕೆಂದಿದ್ದೇವೆ" ಎಂದು ಹೇಳಿದರು (೧೪೬–೧೪೮). ಆಗ ಸುರಸಾದೇವಿಯು ಅತಿವಿಕಾರವೂ ಭಯಂಕರವೂ ಆದ ರಾಕ್ಷಸೀರೂಪವನ್ನು ಧರಿಸಿ ಸಮುದ್ರಮಧ್ಯದಲ್ಲಿ ಹನುಮಂತನನ್ನು ಅಡ್ಡಗಟ್ಟಿ ನಿಂತಳು. ಅವನನ್ನು ಕುರಿತು "ಎಲೈ ಕಪಿಯೆ, ದೇವತೆಗಳು ನಿನ್ನನ್ನು ನನಗೆ ಆಹಾರವಾಗಿ ಒದಗಿಸಿದ್ದಾರೆ. ನಿನ್ನನ್ನು ನಾನು ತಿನ್ನುವೆನು. ಇಗೋ! ನನ್ನ ಬಾಯಿಯನ್ನು ಪ್ರವೇಶಿಸು!" ಎಂದಳು (೧೪೯–೧೫೧). ಆಂಜನೇಯನು ಸ್ವಲ್ಪವೂ ಚಿಂತೆಮಾಡದೆ ಕೈಜೋಡಿಸಿ, "ದೇವಿ, ದಶರಥಮಹಾರಾಜನ ಮಗನಾದ ಶ್ರೀರಾಮನು ತಮ್ಮನಾದ ಲಕ್ಷ್ಮಣನನ್ನೂ ಪತ್ನಿಯಾದ ಸೀತಾದೇವಿಯನ್ನೂ ಕರೆದುಕೊಂಡು ದಂಡಕಾರಣ್ಯಕ್ಕೆ ಬಂದಿದ್ದನು. ಅಲ್ಲಿ ರಾಕ್ಷಸರೊಡನೆ ಕಾರಣಾಂತರದಿಂದ ವೈರವು ಬೆಳೆಯಿತು (೧೫೨–೧೫೩). ಶ್ರೀರಾಮನು ಕಾರ್ಯಾಂತರದಿಂದ ಹೊರಕ್ಕೆ ಹೋದಾಗ ರಾವಣನು ಸೀತಾದೇವಿಯನ್ನು ಕಳ್ಳತನದಿಂದ ಅಪಹರಿಸಿಬಿಟ್ಟಿದ್ದಾನೆ. ನಾನು ರಾಮನ ಆಜ್ಞೆಯಂತೆ ದೂತನಾಗಿ ಸೀತಾದೇವಿಯು ಇರುವಲ್ಲಿಗೆ ಹೋಗುತ್ತಿರುವೆನು (೧೫೪). ಶ್ರೀರಾಮನ ರಾಜ್ಯದಲ್ಲಿ ನೀನು ಒಬ್ಬ ಪ್ರಜೆ. ಈ ಕಾರ್ಯಕ್ಕೆ ನೀನು ಸಹಾಯಮಾಡಬೇಕು. ನನ್ನನ್ನು ತಡೆಯಬೇಡ. ಅಥವಾ ಸೀತಾದೇವಿಯನ್ನು ಕಂಡು ಆಕೆಯ ವೃತ್ತಾಂತವನ್ನು ಶ್ರೀರಾಮನಿಗೆ ತಿಳಿಸಿ ಬಂದು, ನಿನಗೆ ಆಹಾರವಾಗುತ್ತೇನೆ. ಈ ವಿಷಯದಲ್ಲಿ ಆಣೆಯಿಟ್ಟು ಪ್ರಮಾಣಮಾಡುತ್ತೇನೆ" ಎಂದನು (೧೫೫–೧೫೬). ಸುರಸೆಯು "ಸಾಧ್ಯವಿಲ್ಲ; ನೀನು ನನ್ನ ಬಾಯಿಯನ್ನು ಪ್ರವೇಶಿಸಲೇಬೇಕು. ಇದು ಬ್ರಹ್ಮನು ನನಗೆ ಕೊಟ್ಟ ವರ!" ಎನ್ನುತ್ತ ಬಾಯಿಯನ್ನು ದೊಡ್ಡದಾಗಿ ತೆರೆದುಕೊಂಡು ಹನುಮಂತನ ಎದುರಿಗೆ ನಿಂತುಬಿಟ್ಟಳು (೧೫೭–೧೫೯). ಹನುಮಂತನಿಗೆ ತಡೆಯಲಾರದಷ್ಟು ಕೋಪ ಉಂಟಾಯಿತು. "ನೋಡೋಣ!

ನನ್ನನ್ನು ನುಂಗುವಷ್ಟು ಬಾಯಿ ತೆರೆ!" ಎನ್ನುತ್ತ ತನ್ನ ದೇಹವನ್ನು ಹತ್ತು ಯೋಜನ ವಿಸ್ತಾರವಾಗಿ ಬೆಳೆಸಿದನು. ಸುರಸೆಯು ತನ್ನ ಬಾಯಿಯನ್ನು ಇಪ್ಪತ್ತು ಯೋಜನದಷ್ಟು ಹಿಗ್ಗಿಸಿದಳು (೧೬೦–೧೬೨). ಉದ್ದವಾದ ನಾಲಗೆಯಿಂದ ಕೂಡಿ ನರಕದಂತೆ ಘೋರವಾದ ಆಕೆಯ ಬಾಯಿಯನ್ನು ನೋಡಿ ಜಾಣಾಕ್ಷನಾದ ಹನುಮಂತನು ತನ್ನ ದೇಹವನ್ನು ಥಟ್ಟನೆ ಒಂದು ಹೆಬ್ಬೆರಳಿನಷ್ಟು ಚಿಕ್ಕದಾಗಿ ಮಾಡಿಬಿಟ್ಟನು (೧೬೩–೧೬೪). ಕೂಡಲೇ ಮಹಾವೇಗದಿಂದ ಒಂದು ಕ್ಷಣದಲ್ಲಿಯೇ ಅವಳ ಬಾಯೊಳಗೆ ಪ್ರವೇಶಿಸಿ, ಹೊರಕ್ಕೆ ಬಂದು ಅಂತರಿಕ್ಷದಲ್ಲಿ ನಿಂತುಕೊಂಡನು. "ನೋಡು! ನಿನ್ನ ಬಾಯನ್ನು ನಾನು ಪ್ರವೇಶಿಸಿದ್ದೇನೆ! ದಾಕ್ಷಾಯಣಿ, ನಮಸ್ಕಾರ. ಇನ್ನು ನಾನು ಸೀತಾದೇವಿ ಇದ್ದಲ್ಲಿಗೆ ಹೊರಡುವೆನು. ಬ್ರಹ್ಮನ ವರ ಸಾರ್ಥಕವಾಯಿತಷ್ಟೆ!" ಎಂದು ಹೇಳಿದನು (೧೬೫–೧೬೬). ಸುರಸೆಯು ರಾಹುಮುಖದಿಂದ ಮುಕ್ತನಾದ ಚಂದ್ರನಂತೆ ಕಂಗೊಳಿಸುತ್ತಿದ್ದ ಹನುಮಂತನನ್ನು ಅವಲೋಕಿಸಿ, ತನ್ನ ನಿಜರೂಪವನ್ನು ತಳೆದು "ಸೌಮ್ಯ–ವಾನರೋತ್ತಮ, ನಿನಗೆ ಕಾರ್ಯಸಿದ್ಧಿಯಾಗಲಿ! ಸುಖದಿಂದ ಹೋಗಿಬಾ. ಮಹಾತ್ಮನಾದ ಶ್ರೀರಾಮನ ಬಳಿಗೆ ಸೀತೆಯನ್ನು ತಂದು ಸೇರಿಸು" ಎಂದಳು (೧೬೭–೧೬೮). ಸುರಸೆಯ ಬಾಯಿಯಿಂದ ತಪ್ಪಿಸಿಕೊಂಡ ಹನುಮಂತನ ಈ ಮೂರನೆಯ ಸಾಹಸಕಾರ್ಯವನ್ನು ಕಂಡು ದೇವತೆಗಳೆಲ್ಲರೂ ಅವನನ್ನು ಕೊಂಡಾಡಿದರು (೧೬೯). ಮಹಾಸಾಗರವನ್ನು ಗರುಡನಂತೆ ಹನುಮಂತನು ದಾಟಿಹೋಗುತ್ತಿದ್ದನು. ಅಂತರಿಕ್ಷಮಾರ್ಗದಲ್ಲಿ ಕೆಲವು ಕಡೆ ಮೋಡಗಳಿಂದ ಜಲಧಾರೆಗಳು ಸುರಿಯುತ್ತಿದ್ದವು. ಹಕ್ಕಿಗಳು ಹಾರಾಡುತ್ತಿದ್ದವು. ಅಲ್ಲಲ್ಲಿ ಗಾನವಿದ್ಯೆಯನ್ನು ಬಲ್ಲ ಗಂಧರ್ವರು ಸಂಚರಿಸುತ್ತಿದ್ದರು. ಕಾಮನಬಿಲ್ಲುಗಳು ಹಬ್ಬಿದ್ದವು. ಸಿಂಹ, ಆನೆ ಮುಂತಾದ ದೇವವಾಹನಗಳೂ ವಿಮಾನಗಳೂ ತಿರುಗಾಡುತ್ತಿದ್ದವು. ಸಿಡಿಲಿನಿಂದ ಹೊರಟ ಅಗ್ನಿಜ್ವಾಲೆಗಳು ವ್ಯಾಪಿಸಿದ್ದವು. ಪುಣ್ಯಬಲದಿಂದ ಸ್ವರ್ಗವನ್ನು ಪಡೆದ ಮಹಾತ್ಮರು ಸಂಚರಿಸುತ್ತಿದ್ದರು. ಅದು ದೇವತೆಗಳಿಗೆ ಹವಿಸ್ಸನ್ನು ಕೊಂಡೊಯ್ಯುವ ಅಗ್ನಿದೇವನೂ ಸೂರ್ಯಚಂದ್ರಗ್ರಹನಕ್ಷತ್ರಗಳೂ ಮಹರ್ಷಿಗಳೂ ಗಂಧರ್ವನಾಗಯಕ್ಷರೂ ಸಂಚಾರಮಾಡುವ ಮಾರ್ಗ (೧೭೦–೧೭೪). ಗಂಧರ್ವರಾಜನಾದ ವಿಶ್ವಾವಸು ವಿಹರಿಸುವ ಸ್ಥಳ. ಐರಾವತ, ಪುಂಡರೀಕ ಮುಂತಾದ ದೇವಗಜಗಳು

ತಿರುಗಾಡುವ ಪ್ರದೇಶ. ವಿದ್ಯಾಧರರು ಸೇವಿಸುತ್ತಿದ್ದ ಸ್ಥಳ. ಪ್ರಾಣಿಲೋಕಕ್ಕೆ ಬ್ರಹ್ಮನು ನಿರ್ಮಿಸಿದ ಒಂದು ಮೇಲುಹೊದಿಕೆ (೧೭೫–೧೭೬). ಅಂತಹ ಆಕಾಶದಲ್ಲಿ ಹನುಮಂತನು ನಾನಾ ವರ್ಣದ ಮೇಘಗಳನ್ನು ತನ್ನ ವೇಗದಿಂದ ಜೊತೆಯಲ್ಲಿ ಎಳೆದುಕೊಂಡು ವೈನತೇಯನಂತೆ ಹೋಗುತ್ತಿದ್ದನು. ಮೋಡಗಳ ಸಂದಿನಲ್ಲಿ ಆಗಾಗ ಮರೆಯಾಗುತ್ತಲೂ ಕಾಣಿಸಿಕೊಳ್ಳುತ್ತಲೂ ಇದ್ದ ಅವನು ಮಳೆಗಾಲದ ಚಂದ್ರನಂತೆ ಶೋಭಿಸುತ್ತಿದ್ದನು (೧೭೭–೧೭೯). ರೆಕ್ಕೆಯುಳ್ಳ ಬೆಟ್ಟದಂತೆ ಹಾರಿ ಬರುತ್ತಿದ್ದ ಅವನನ್ನು ಸಿಂಹಿಕೆ ಎಂಬ ಒಬ್ಬ ರಾಕ್ಷಸಿಯು ನೋಡಿದಳು. ಅವಳು ಕಾಮರೂಪಿಣಿ. 'ಆಹಾ! ಬಹಳ ಕಾಲದಮೇಲೆ ನನಗೆ ಹೊಟ್ಟೆತುಂಬ ಆಹಾರ ಸಿಕ್ಕಿತು. ಈ ದೊಡ್ಡ ಪ್ರಾಣಿ ನನ್ನ ಕೈಗೆ ಸಿಕ್ಕಿಬಿತ್ತು' ಎಂದು ಆಲೋಚಿಸಿ ಸಮುದ್ರದಮೇಲೆ ಇದ್ದ ಹನುಮಂತನ ನೆರಳನ್ನು ಜಗ್ಗಿ ಹಿಡಿದಳು (ಇಂತಹ ಶಕ್ತಿ ಅವಳಿಗೆ ಬ್ರಹ್ಮನ ವರದಿಂದ ಲಭಿಸಿತ್ತು) (೧೮೦–೧೮೩). ಆಗ ಹನುಮಂತನು 'ಇದೇನು! ನನ್ನ ವೇಗಕ್ಕೆ ಅಡ್ಡಿ ಬಂದಿತು. ಎದುರಾಗಿ ಬೀಸುವ ಬಿರುಗಾಳಿಗೆ ಸಿಕ್ಕಿದ ಹಡಗಿನಂತೆ ನನ್ನ ಗತಿಯಾಯಿತು' ಎಂದು ಚಿಂತಿಸಿ ಸುತ್ತಲೂ ಕಣ್ಣಿಟ್ಟು ನೋಡಿದನು. ಆಗ ಸಮುದ್ರದಿಂದ ಮೇಲೆದ್ದ ಈ ದೊಡ್ಡ ಭೂತ ಅವನಿಗೆ ಗೋಚರಿಸಿತು (೧೮೪–೧೮೫). 'ಓಹೊ! ನಮ್ಮ ರಾಜನಾದ ಸುಗ್ರೀವನು ಸಮುದ್ರದಲ್ಲಿ ನೆರಳನ್ನು ಹಿಡಿದೆಳೆಯುವ ಭೂತವಿದೆ ಎಂದು ಹೇಳಿದ್ದನು. ಅದೇ ಈ ಭೂತ' ಎಂದು ನಿಶ್ಚಯಿಸಿ, ಕೂಡಲೇ ತನ್ನ ದೇಹವನ್ನು ಮಳೆಗಾಲದ ಮೇಘದಂತೆ ದೊಡ್ಡದಾಗಿ ಬೆಳೆಸಿದನು (೧೮೬–೧೮೮). ಆಗ ರಾಕ್ಷಸಿಯು ಪಾತಾಳದಂತೆ ತನ್ನ ಬಾಯನ್ನು ಹಿಗ್ಗಿಸಿ, ಗುಡುಗಿನಂತೆ ಮೊರೆಯುತ್ತ ಹನುಮಂತನನ್ನು ಅಟ್ಟಿಸಿಕೊಂಡು ಬಂದಳು. ಆಂಜನೇಯನು ಅವಳ ದೊಡ್ಡ ಬಾಯನ್ನೂ, ದೇಹದ ಪ್ರಮಾಣವನ್ನೂ, ಅವಳನ್ನು ಸೀಳಿಹಾಕಲು ತಕ್ಕ ಆಯಕಟ್ಟಿನ ಜಾಗವನ್ನೂ ದಿಟ್ಟಿಸಿ ನೋಡಿದನು. ಆಮೇಲೆ ವಜ್ರದೇಹಿಯಾದ ಆ ಮಹಾಕಪಿಯು ತನ್ನ ದೇಹವನ್ನು ಚಿಕ್ಕದಾಗಿ ಮಾಡಿಕೊಂಡು ರಾಕ್ಷಸಿಯ ಬಾಯಲ್ಲಿ ನುಗ್ಗಿಬಿಟ್ಟನು (೧೮೯–೧೯೧). ಆಗ ಹನುಮಂತನು ಹುಣ್ಣಿಮೆಯ ದಿನ ರಾಹುವಿನ ಬಾಯಲ್ಲಿ ಹೋಗುವ ಚಂದ್ರನಂತೆ ಕಾಣಿಸುತ್ತಿದ್ದನು. ಸಿದ್ಧಚಾರಣರೆಲ್ಲರೂ ಅವನನ್ನೇ ನೋಡುತ್ತಿದ್ದರು. ಅನಂತರ ಆ ವೀರನು ತನ್ನ ಚೂಪಾದ ಉಗುರುಗಳಿಂದ

ಸಿಂಹಿಕೆಯ ಮರ್ಮಸ್ಥಳಗಳನ್ನು ಸೀಳಿಹಾಕಿ ಮನೋವೇಗದಿಂದ ಹೊರಕ್ಕೆ ಹಾರಿಬಿಟ್ಟನು. ಹೀಗೆ ಧೈರ್ಯದಿಂದಲೂ ಕೌಶಲ್ಯದಿಂದಲೂ ಅವಳನ್ನು ಕೊಂದುಹಾಕಿ, ಪುನಃ ಮೊದಲಿನಂತೆ ತನ್ನ ದೇಹವನ್ನು ಬೆಳೆಸಿಕೊಂಡನು (೧೯೨–೧೯೪). ಸಿಂಹಿಕೆಯ ಎದೆಯು ಸೀಳಿಹೋಯಿತು. ಅವಳು ಸತ್ತು ನೀರಿನಲ್ಲಿ ಬಿದ್ದುಹೋದಳು. ಅವಳನ್ನು ಕೊಲ್ಲುವುದಕ್ಕಾಗಿಯೇ ಬ್ರಹ್ಮನು ಹನುಮಂತನನ್ನು ಸೃಷ್ಟಿಸಿದ್ದನೋ ಏನೋ ! (೧೯೫). ಆಕಾಶದಲ್ಲಿ ಸಂಚರಿಸುತ್ತಿದ್ದ ದೇವತೆಗಳು "ವಾನರೋತ್ತಮ, ನೀನು ಮಾಡಿದ ಕೆಲಸ ಅಸಾಧಾರಣವಾದದ್ದು. ಈ ಭಯಂಕರವಾದ ಭೂತವನ್ನು ನೀನು ಕೊಂದುಹಾಕಿರುವೆ. ನಿನ್ನ ಕಾರ್ಯವು ನಿರ್ವಿಘ್ನವಾಗಿ ನೆರವೇರಲಿ. ನಿನಗಿರುವಂತೆ ಸಮಯಸ್ಫೂರ್ತಿ, ಧೈರ್ಯ, ವಿವೇಕ, ದಕ್ಷತೆಗಳು ಇರುವವನಿಗೆ ಅಪಜಯವೆಂಬುದೇ ಇಲ್ಲ" ಎಂದು ಕೊಂಡಾಡಿದರು (೧೯೬–೧೯೮). ಹನುಮಂತನು ಹೀಗೆ ಅವರಿಂದ ಸಮ್ಮಾನಿತನಾಗಿ, ಗರುಡವೇಗದಿಂದ ಹೋಗುತ್ತ ಸುಮಾರು ನೂರು ಯೋಜನಗಳಷ್ಟು ದೂರ ಬಂದುಬಿಟ್ಟನು. ಮುಂದೆ ನೋಡುತ್ತಿರುವಾಗ ಸಮುದ್ರತೀರದಲ್ಲಿ ಒಂದು ಅರಣ್ಯದ ಸಾಲು ಗೋಚರಿಸಿತು. ಹಾಗೆಯೇ ಹಾರಿ ಬರುತ್ತಿರಲು ನಾನಾ ವೃಕ್ಷಗಳಿಂದ ಭೂಷಿತವಾದ ದ್ವೀಪವೂ ಮಲಯಪರ್ವತದ ಉಪವನಗಳೂ ಗೋಚರಿಸಿದವು (೧೯೯–೨೦೧). ಆಮೇಲೆ ದಕ್ಷಿಣತೀರದ ಸಮುದ್ರಪ್ರದೇಶವೂ, ತೀರದ ಜೌಗುನೆಲವೂ, ನದಿಗಳು ಸಮುದ್ರಕ್ಕೆ ಧುಮುಕುವ ಸಂಗಮಸ್ಥಳಗಳೂ ಅವನಿಗೆ ಕಾಣಿಸಿದವು (೨೦೨). ಆಂಜನೇಯನು ಮಹಾಬುದ್ಧಿಶಾಲಿ. 'ಆಕಾಶವನ್ನೇ ವ್ಯಾಪಿಸಿದಂತಿದ್ದ ತನ್ನ ದೊಡ್ಡ ದೇಹವನ್ನು ನೋಡಿ ರಾಕ್ಷಸರು ಕುತೂಹಲದಿಂದ ಬಂದು ನೆರೆದುಬಿಟ್ಟಾರು' ಎಂದು ಆಲೋಚಿಸಿ, ಕೂಡಲೇ ತನ್ನ ದೇಹವನ್ನು ಚಿಕ್ಕದಾಗಿ ಮಾಡಿಕೊಂಡನು. ಅವನು ರಾಗದ್ವೇಷಗಳಿಂದ ವಿಮುಕ್ತನಾದ ಯೋಗಿಯಂತೆಯೂ ಮೂರು ಹೆಜ್ಜೆಗಳಿಂದ ಜಗತ್ತನ್ನೇ ಅಳೆದು ಮತ್ತೆ ವಾಮನರೂಪವನ್ನು ಧರಿಸಿದ ಮಹಾವಿಷ್ಣುವಿನಂತೆಯೂ ತನ್ನ ನಿಜಸ್ವರೂಪವನ್ನು ಪಡೆದನು (೨೦೩–೨೦೬). ಈ ರೀತಿಯಲ್ಲಿ ಆಂಜನೇಯನು ಆಯಾ ಕಾರ್ಯಗಳಿಗೆ ತಕ್ಕ ರೂಪಗಳನ್ನು ಧರಿಸುತ್ತ ಇತರರಿಗೆ ದುರ್ಗಮವಾಗಿದ್ದ ಸಮುದ್ರದ ಆಚೆಯ ತೀರಕ್ಕೆ ಬಂದು ಸೇರಿದನು. ದೂರದಿಂದಲೇ ಲಂಕಾನಗರಿಯನ್ನು ನೋಡುತ್ತ ಕೇದಗೆ,

ಶ್ಲೇಷ್ಮಾತಕ ತೆಂಗು ಮುಂತಾದ ನಾನಾ ಗಿಡಮರಗಳಿಂದ ಶೋಭಿತವಾದ, ತ್ರಿಕೂಟಪರ್ವತದ ಲಂಬ ಎಂಬ ಹೆಸರಿನ ಉನ್ನತಶಿಖರದಮೇಲೆ ಧುಮುಕಿದನು (೨೦೭–೨೦೮). ಈ ರೀತಿಯಲ್ಲಿ ಹನುಮಂತನು ಸಮುದ್ರದಂಡೆಯನ್ನು ಸೇರಿ ಪರ್ವತಶಿಖರದಲ್ಲಿದ್ದ ಲಂಕೆಯನ್ನು ನೋಡಿದಮೇಲೆ ಧುಮುಕಿದ ರಭಸಕ್ಕೆ ಹೆದರಿ ಅಲ್ಲಿದ್ದ ಮೃಗಪಕ್ಷಿಗಳು ಓಡಿಹೋದವು. ಹೀಗೆ ದಾನವ ಪನ್ನಗರಿಗೆ ಆಶ್ರಯವಾಗಿಯೂ ಬೃಹತ್ತರಂಗಗಳಿಂದ ಭೀಷಣವಾಗಿಯೂ ಇರುವ ಮಹಾಸಾಗರವನ್ನು ತನ್ನ ಸಾಮರ್ಥ್ಯದಿಂದ ಲಂಘಿಸಿ, ಸಮುದ್ರತೀರದಲ್ಲಿ ಧುಮುಕಿ, ಅಮರಾವತಿಯಂತೆ ಸುಂದರವಾಗಿದ್ದ ಲಂಕಾನಗರಿಯನ್ನು ಹನುಮಂತನು ವೀಕ್ಷಿಸಿದನು (೨೦೯–೨೧೦).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಒಂದನೆಯ ಸರ್ಗ

---

## ಸರ್ಗ ೨

ಹನುಮಂತನು ಸಮೀಪಕ್ಕೆ ಹೋಗಿ ಲಂಕೆಯನ್ನು ನೋಡುವುದು.
ಅದರ ರಕ್ಷಣಾಬಲವನ್ನು ಕಂಡು ಚಿಂತಿಸುವುದು

ಮಹಾಬಲಶಾಲಿಯಾದ ಹನುಮಂತನು ದುಷ್ಪಾರವಾದ ಸಮುದ್ರವನ್ನು ಲಂಘಿಸಿ, ಶಾಂತಚಿತ್ತನಾಗಿ ತ್ರಿಕೂಟಪರ್ವತದಮೇಲಿದ್ದ ಲಂಕಾನಗರವನ್ನು ನೋಡಿದನು (೧). ಆ ಪರ್ವತದ ಮೇಲಿದ್ದ ಮರಗಳಿಂದ ಹೂಗಳು ಬಳಬಳನೆ ಅವನಮೇಲೆ ಉದುರಿದವು. ಆತನು ಹೂವಿನ ಹನುಮಂತನಾದನು! ಆ ಪರಾಕ್ರಮಿಗೆ ನೂರು ಯೋಜನಗಳನ್ನು ಲಂಘಿಸಿದರೂ ದಣಿವಾಗಲಿಲ್ಲ. ಅವನು ಒಂದುಸಲವೂ ನಿಟ್ಟುಸಿರನ್ನು ಬಿಡಲಿಲ್ಲ. 'ಈ ನೂರು ಯೋಜನಗಳು ಯಾವ ಲೆಕ್ಕಕ್ಕೆ? ಇಂತಹ ಎಷ್ಟು ನೂರು ಯೋಜನಗಳನ್ನಾದರೂ ದಾಟಬಲ್ಲೆನು' ಎಂದು ಮನಸ್ಸಿನಲ್ಲಿ ಅಂದುಕೊಂಡನು (೨–೪). ವಾನರಶ್ರೇಷ್ಠನಾದ ಆಂಜನೇಯನು ಹೀಗೆ ಸಮುದ್ರವನ್ನು ದಾಟಿ ಲಂಕೆಯನ್ನು ಸಮೀಪಿಸಿದನು. ಅಲ್ಲಿದ್ದ ಹಸುರಾದ ಹುಲ್ಲುಗಾವಲನ್ನೂ ಸುಗಂಧಮಯವಾದ ಅರಣ್ಯವನ್ನೂ ದೊಡ್ಡದೊಡ್ಡ ಬಂಡೆಗಳೂ ಗುಡ್ಡಗಳೂ ಇರುವ ಪ್ರದೇಶಗಳನ್ನೂ

ಪುಷ್ಪಿತ ವೃಕ್ಷಗಳಿಂದ ಶೋಭಿಸುವ ಗಿರಿಗಳನ್ನೂ ದಾಟುತ್ತ ಲಂಕೆಯ ಕಡೆಗೆ ಹೋದನು (೫–೭). ಆ ಕಪಿಕುಂಜರನು ಸುತ್ತಲೂ ಬೆಳೆದಿದ್ದ ದೇವದಾರು, ಕಣಗಲು, ಖರ್ಜೂರ, ಪ್ರಿಯಾಲ, ಜಂಬೀರ, ಕೊಡಸು ಮುಂತಾದ ವೃಕ್ಷಗಳು ಹೂಗಳಿಂದಲೂ ಹಣ್ಣುಗಳಿಂದಲೂ ಬಳುಕುತ್ತಿದ್ದುದನ್ನು ನೋಡಿದನು. ಹಕ್ಕಿಗಳು ಮರದಿಂದ ಮರಕ್ಕೆ ಹಾರಾಡುತ್ತಿದ್ದವು. ಮರಗಳ ತುದಿಗಳು ಗಾಳಿಗೆ ಅಲ್ಲಾಡುತ್ತಿದ್ದವು (೯–೧೧). ಬಗೆಬಗೆಯ ನೀರುಹಕ್ಕಿಗಳಿಂದಲೂ ತಾವರೆ, ನೈದಿಲೆ ಮುಂತಾದ ಹೂಗಳಿಂದಲೂ ತುಂಬಿದ ಸರೋವರಗಳಿದ್ದವು. ಅಲ್ಲಲ್ಲಿ ಕ್ರೀಡಾಪರ್ವತಗಳಿದ್ದವು. ಸಮಸ್ತಋತುಗಳಲ್ಲಿಯೂ ಹೂ ಹಣ್ಣುಗಳನ್ನು ಬಿಡತಕ್ಕ ಮನೋಹರವಾದ ಉದ್ಯಾನವನಗಳಿದ್ದವು. ಅವುಗಳೆಲ್ಲವನ್ನೂ ಹನುಮಂತನು ವೀಕ್ಷಿಸಿದನು (೧೨–೧೩). ಅವನ್ನು ನೋಡುತ್ತ ಲಂಕೆಯ ಬಳಿಗೆ ಬಂದನು. ಆ ನಗರದ ಸುತ್ತಲೂ ಕಂದಕಗಳಿದ್ದವು. ಕಂದಕದ ಜಲದಲ್ಲಿ ತಾವರೆಗಳೂ ನೈದಿಲೆಗಳೂ ಅರಳಿದ್ದವು. ರಾವಣನು ಲಂಕೆಯ ಸುತ್ತಲೂ ಕಾವಲನ್ನು ಬಿಗಿಪಡಿಸಿದ್ದನು. ಕಾಮರೂಪಿಗಳಾದ ರಾಕ್ಷಸರು ಸುತ್ತಲೂ ಪಹರೆ ಕೊಡುತ್ತಿದ್ದರು (೧೪–೧೫). ಸುವರ್ಣಮಯವಾದ ಕೋಟೆಯು ನಗರವನ್ನು ಆವರಿಸಿತ್ತು. ನಗರದಲ್ಲಿ ಗ್ರಹಗಳಂತೆ ದೊಡ್ಡದಾಗಿಯೂ ಶರತ್ಕಾಲದ ಮೋಡದಂತೆ ಬಿಳುಪಾಗಿಯೂ ಇರುವ ಸೌಧಗಳು, ಎದ್ದುಕಾಣುವ ಸ್ವಚ್ಛವಾದ ರಾಜಬೀದಿಗಳ ಎರಡು ಪಾರ್ಶ್ವಗಳಲ್ಲಿಯೂ ನಾಲಾಗಿ ಹಬ್ಬಿದ್ದವು. ನೂರಾರು ಗೋಪುರಗಳೂ, ಬಾವುಟಗಳು ಹಾರಾಡುತ್ತಿದ್ದ ಧ್ವಜಸ್ತಂಭಗಳೂ ಶೋಭಿಸುತ್ತಿದ್ದವು (೧೬–೧೭). ಅಮರಾವತಿಯಂತೆ ಇದ್ದ ಲಂಕಾನಗರಿಗೆ ಸುವರ್ಣಮಯವಾದ ದೊಡ್ಡ ಬಾಗಿಲುಗಳಿದ್ದವು. ಅವುಗಳನ್ನು ಬಳ್ಳಿಗಳಂತೆ ವಿಚಿತ್ರವಾದ ಕೆತ್ತನೆಗಳಿಂದ ಅಲಂಕರಿಸಿದ್ದರು (೧೮). ಶುಭ್ರವಾದ ಉನ್ನತ ಭವನಗಳಿಂದ ಶೋಭಿತವಾಗಿಯೂ ರಾಕ್ಷಸರಾಜನಿಂದ ಪಾಲಿತವಾಗಿಯೂ ಗಿರಿಶಿಖರದಲ್ಲಿದ್ದ ಲಂಕಾಪುರಿಯನ್ನು ಹನುಮಂತನು ಕಂಡನು. ವಿಶ್ವಕರ್ಮನು ನಿರ್ಮಿಸಿದ ಆ ಪಟ್ಟಣವು ಆಕಾಶದಲ್ಲಿ ತೇಲುತ್ತಿರುವಂತೆ ಭಾಸವಾಯಿತು (೧೯–೨೦). ಪ್ರಾಕಾರವೆಂಬ ಜಘನದಿಂದಲೂ, ಸಮುದ್ರ ಮತ್ತು ಅರಣ್ಯಗಳೆಂಬ ಸೀರೆಯಿಂದಲೂ, ಶತಘ್ನಿ–ಶೂಲಗಳೆಂಬ ತಲೆಕೂದಲಿನಿಂದಲೂ, ಗೋಪುರಗಳೆಂಬ ಹೂಮುಡಿಯಿಂದಲೂ ಲಂಕಾಪುರಿಯು

ಒಬ್ಬ ಸುಂದರ ಯುವತಿಯಂತೆ ಕಾಣುತ್ತಿದ್ದಿತು (೨೧). ವಿಶ್ವಕರ್ಮನು ಮನಸ್ಸಂಕಲ್ಪದಿಂದಲೇ ನಿರ್ಮಿಸಿರುವನೋ ಎಂಬಂತೆ ಅತ್ಯಂತ ಸುಂದರವಾದ ಲಂಕಾಪಟ್ಟಣವನ್ನು ಹನುಮಂತನು ದೂರದಿಂದಲೇ ನೋಡುತ್ತ, ಉತ್ತರ ದಿಕ್ಕಿನ ಕೋಟೆಯ ಬಾಗಿಲಿನ ಬಳಿಗೆ ಬಂದನು (೨೨). ಲಂಕಾಪಟ್ಟಣವು ಪರ್ವತದಮೇಲೆ ಇದ್ದುದರಿಂದ ಕೈಲಾಸನಗರದಂತೆಯೂ, ಅತ್ಯುನ್ನತ ಭವನಗಳಿಂದ ಆಕಾಶವನ್ನೇ ಹೊತ್ತು ನಿಂತಿದೆಯೋ ಎಂಬಂತೆಯೂ, ಘೋರ ರಾಕ್ಷಸರಿಂದ ತುಂಬಿಹೋದ್ದರಿಂದ ಮಹಾಸರ್ಪಗಳಿರುವ ಪಾತಾಳನಗರಿಯಾದ ಭೋಗವತಿಯಂತೆಯೂ ಕಾಣುತ್ತಿದ್ದಿತು. ಪೂರ್ವದಲ್ಲಿ ಅದು ಕುಬೇರನಿಗೆ ವಾಸಸ್ಥಾನವಾಗಿತ್ತು. ಶೂಲ, ಪಟ್ಟಿಶ ಮೊದಲಾದ ಆಯುಧಗಳನ್ನು ಧರಿಸಿ ಕೋರೆದಾಡೆಗಳಿದ್ದ ಭಯಂಕರ ರಾಕ್ಷಸರು, ಸರ್ಪಗಳು ಗುಹೆಯನ್ನು ಕಾಯುವಂತೆ ಲಂಕೆಯನ್ನು ಕಾಯುತ್ತಿದ್ದರು (೨೩–೨೫). ಆ ನಗರಕ್ಕಿದ್ದ ಪ್ರಬಲವಾದ ರಕ್ಷಣೆಯನ್ನೂ, ವಿಶಾಲವಾದ ಸಮುದ್ರವನ್ನೂ, ಘೋರ ಶತ್ರುವಾದ ರಾವಣನನ್ನೂ ಕುರಿತು ಪರ್ಯಾಲೋಚಿಸಿದಾಗ, ಆಂಜನೇಯನ ಮನಸ್ಸಿನಲ್ಲಿ ದೊಡ್ಡ ಚಿಂತೆ ಹುಟ್ಟಿತು (೨೬): 'ನಮ್ಮ ವಾನರರು ಇಲ್ಲಿಗೆ ಬಂದರೂ ಉಪಯೋಗವಿಲ್ಲ. ಈ ಲಂಕೆಯನ್ನು ಗೆಲ್ಲಲು ದೇವತೆಗಳಿಗೂ ಸಾಧ್ಯವಿಲ್ಲ. ಮಹಾಬಾಹುವಾದ ಶ್ರೀರಾಮಚಂದ್ರನೇ ಇಲ್ಲಿಗೆ ಬಂದರೂ ಏನುಮಾಡಬಲ್ಲನು? ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳಿಗೂ ಈ ರಾಕ್ಷಸರು ಜಗ್ಗುವವರಲ್ಲ (೨೭–೨೯). ವಾನರರಲ್ಲಿಯೂ ಎಷ್ಟುಮಂದಿ ಇಲ್ಲಿಗೆ ಬಂದಾರು? ಬಂದರೆ ಅಂಗದ, ನೀಲ, ನಾನು, ನಮ್ಮ ರಾಜ ಸುಗ್ರೀವ —ಈ ನಾಲ್ವರೇ! ಇರಲಿ. ಜನಕಪುತ್ರಿಯು ಬದುಕಿರುವಳೋ ಇಲ್ಲವೋ ಎಂಬುದನ್ನು ಮೊದಲು ತಿಳಿಯುವೆನು. ಆಕೆಯನ್ನು ಕಂಡಮೇಲೆ ಮುಂದಿನ ಆಲೋಚನೆ ಮಾಡೋಣ' ಎಂದುಕೊಂಡನು (೩೦–೩೧). ಶ್ರೀರಾಮನ ಅಭ್ಯುದಯವನ್ನೇ ಚಿಂತಿಸುತ್ತಿದ್ದ ಆಂಜನೇಯನು ಆ ಬೆಟ್ಟದ ಶಿಖರದಲ್ಲಿ ನಿಂತು 'ಈ ರೂಪದಲ್ಲಿಯೇ ನಾನು ಲಂಕೆಯನ್ನು ಪ್ರವೇಶಿಸುವುದು ಸರಿಯಲ್ಲ. ಇದನ್ನು ಕಾಯುತ್ತಿರುವ ರಾಕ್ಷಸರು ಪರಾಕ್ರಮಿಗಳು ಮತ್ತು ಕ್ರೂರಸ್ವಭಾವದವರು. ಇವರನ್ನು ವಂಚಿಸಿಯೇ ನಾನು ಜಾನಕಿಯನ್ನು ಹುಡುಕಬೇಕು. ಕಂಡೂ ಕಾಣದಂತಿರುವ ರೂಪದಿಂದ ರಾತ್ರಿಯಲ್ಲಿಯೇ ಲಂಕೆಯನ್ನು ಹೊಕ್ಕು

ಈ ದೊಡ್ಡ ಕಾರ್ಯವನ್ನು ಸಾಧಿಸಬೇಕು' ಎಂದು ನಿರ್ಧರಿಸಿದನು(೩೨–೩೫). ದುರ್ಗಮವಾದ ಆ ಲಂಕಾನಗರವನ್ನು ನೋಡಿದಷ್ಟೂ ಅವನಿಗೆ ಚಿಂತೆಯಾಗುತ್ತಿತ್ತು. ಮತ್ತೆ ಮತ್ತೆ ನಿಟ್ಟುಸಿರುಬಿಡುತ್ತ 'ಈ ದುರಾತ್ಮನಾದ ರಾವಣನ ಕಣ್ಣಿಗೆ ಬೀಳದಂತೆ ಸೀತಾದೇವಿಯನ್ನು ನಾನು ಹುಡುಕುವ ಬಗೆ ಯಾವುದು? ಏನುಮಾಡಿದರೆ ಶ್ರೀರಾಮನ ಕಾರ್ಯವು ಅಡ್ಡಿಯಿಲ್ಲದೆ ನಡೆದೀತು? ಸೀತೆಯೊಬ್ಬಳೇ ಇರುವಾಗ ಅವಳನ್ನು ಕಾಣುವುದು ಹೇಗೆ ಸಾಧ್ಯ? (೩೬–೩೮). ದೂತನಾದವನು ದೇಶಕಾಲಗಳಿಗೆ ತಕ್ಕಂತೆ ನಡೆದುಕೊಳ್ಳದೆ ಅವಿವೇಕಿಯಾಗಿ ವರ್ತಿಸಿದರೆ, ಸೂರ್ಯೋದಯವಾದಾಗ ಕತ್ತಲೆಯು ನಾಶವಾಗುವಂತೆ ಕೈಗೆ ಬಂದ ಕೆಲಸವೂ ದಕ್ಕದೆ ಹಾಳಾಗಿಹೋಗುವುದು (೩೯). ಚೆನ್ನಾಗಿ ವಿಮರ್ಶೆ ಮಾಡಿ ನಿಶ್ಚಯಿಸಿದ ಕೆಲಸವೂ ಕೂಡ ದೂತನು ಅವಿವೇಕಿಯಾದರೆ ಫಲಿಸುವುದಿಲ್ಲ. ತಾವು ಪಂಡಿತರೆಂದು ತಿಳಿದುಕೊಂಡಿರುವ ವಿವೇಕಹೀನರಾದ ದೂತರು ಕಾರ್ಯವನ್ನು ಕೆಡಿಸುವರು (೪೦). ಈಗ ನಮ್ಮ ಕಾರ್ಯ ಕೆಡಬಾರದು; ನಾನು ಬುದ್ಧಿಹೀನ ಎನ್ನಿಸಿಕೊಳ್ಳಬಾರದು; ಸಮುದ್ರಲಂಘನ ವ್ಯರ್ಥವಾಗಬಾರದು. ಇದಕ್ಕೆ ದಾರಿಯೇನು? ರಾಕ್ಷಸರೇನಾದರೂ ನನ್ನನ್ನು ಕಂಡುಬಿಟ್ಟರೆ, ಶ್ರೀರಾಮನ ಕಾರ್ಯವೆಲ್ಲವೂ ಕೆಟ್ಟಂತೆಯೇ. ರಾಕ್ಷಸರಿಗೆ ತಿಳಿಯದಂತೆ ಇಲ್ಲಿ ಸಂಚರಿಸುವುದು ಹೇಗೆ? ರಾಕ್ಷಸವೇಷದಲ್ಲಿ ಹೋದರೂ ಇವರು ಗೊತ್ತುಮಾಡಿಬಿಡುತ್ತಾರೆ. ಇನ್ನು ಬೇರೆ ರೂಪದಲ್ಲಿದ್ದರೆ ಸಾಗೀತೆ? (೪೧–೪೩). ಇವರಿಗೆ ತಿಳಿಯದಂತೆ ಗಾಳಿಯೂ ಕೂಡ ಇಲ್ಲಿ ಸಂಚರಿಸಲಾರದೆಂದು ತೋರುತ್ತದೆ. ಇವರಿಗೆ ಗೊತ್ತಾಗದ ವಿಷಯವೇ ಇಲ್ಲಿಲ್ಲ. ಈ ಬೃಹದ್ರೂಪದಿಂದಲೇ ಇದ್ದರೆ ನಾನೂ ನಾಶಹೊಂದುವೆನಲ್ಲದೆ ಪ್ರಭುವಾದ ರಾಮನ ಕಾರ್ಯವೂ ಕೆಟ್ಟುಹೋಗುವುದು. ಆದ್ದರಿಂದ ರೂಪವನ್ನು ಸಣ್ಣದಾಗಿ ಮಾಡಿಕೊಂಡು ಈ ರಾತ್ರಿ ಲಂಕೆಯನ್ನು ಪ್ರವೇಶಿಸಿಬಿಡುತ್ತೇನೆ. ರಾವಣನ ಈ ನಗರದಲ್ಲಿ ಸೀತಾದೇವಿಗೋಸ್ಕರ ಪ್ರತಿಯೊಂದು ಮನೆಯನ್ನೂ ಶೋಧಿಸಿಬಿಡುತ್ತೇನೆ' ಎಂದು ನಿಶ್ಚಯಮಾಡಿದನು (೪೪–೪೭). ಅನಂತರ ಆ ವೀರನು ಸೂರ್ಯನು ಮುಳುಗುವುದನ್ನು ಕಾಯುತ್ತ ಮರೆಯಲ್ಲಿ ನಿಂತನು. ಸೂರ್ಯನು ಮುಳುಗಿ ರಾತ್ರಿಯಾಯಿತು. ಆಗ ಹನುಮಂತನು ನೋಡುವುದಕ್ಕೆ ಆಶ್ಚರ್ಯಕರವಾಗುವಂತೆ ತನ್ನ ದೇಹವನ್ನು ಬೆಕ್ಕಿನ ಗಾತ್ರದಷ್ಟು

ಚಿಕ್ಕದಾಗಿ ಮಾಡಿಕೊಂಡನು (೪೮–೪೯). ಆಮೇಲೆ ತಾನಿದ್ದ ಸ್ಥಳದಿಂದ ನೆಗೆದು ಲಂಕೆಯನ್ನು ಪ್ರವೇಶಿಸಲು ಸಿದ್ಧನಾದನು. ಉಪ್ಪರಿಗೆಯ ಸಾಲು ಗಳಿಂದಲೂ, ಚಿನ್ನ ಬೆಳ್ಳಿಯ ಕಂಬಗಳಿಂದಲೂ, ಸುವರ್ಣಮಯ ಗವಾಕ್ಷ ಗಳಿಂದಲೂ ಲಂಕೆಯು ಗಂಧರ್ವನಗರದಂತೆ ಶೋಭಿಸುತ್ತಿತ್ತು (೫೦–೫೧). ಒಂದೊಂದು ಮನೆಗೆ ಏಳು ಎಂಟು ಮಹಡಿಗಳಿದ್ದವು. ಆ ಮಹಾನಗರದಲ್ಲಿ ಸ್ಫಟಿಕಮಣಿಗಳಿಂದಲೂ ಚಿನ್ನದಿಂದಲೂ ನೆಲಗಟ್ಟನ್ನು ಅಲಂಕರಿಸಿದ್ದರು. ಭವನಗಳನ್ನು ವೈಡೂರ್ಯಗಳಿಂದಲೂ ಮುತ್ತಿನ ಕುಚ್ಚುಗಳಿಂದಲೂ ಸಿಂಗರಿಸಿ ದ್ದರು. ರಾಕ್ಷಸರ ಗೃಹಗಳು ಚಿನ್ನದ ತೋರಣಗಳಿಂದ ರಂಜಿಸುತ್ತಿದ್ದವು (೫೨–೫೪). ರಾವಣನ ಭುಜಬಲದಿಂದ ರಕ್ಷಿತವಾಗಿ ಭೀಮಬಲರಾದ ರಾಕ್ಷಸ ರಿಂದ ತುಂಬಿದ ಅದ್ಭುತಾಕಾರವುಳ್ಳ ಲಂಕೆಯನ್ನು ಕಂಡು, ಹನುಮಂತನಿಗೆ ಅದನ್ನು ಪ್ರವೇಶಿಸುವುದು ಹೇಗೆಂದು ಚಿಂತೆಯೂ, ಸೀತಾದೇವಿಯನ್ನು ದರ್ಶನಮಾಡುವ ಯೋಗ ಸಮೀಪಿಸಿತೆಂದು ಹರ್ಷವೂ ಉಂಟಾದವು (೫೫–೫೬). ಅಷ್ಟರಲ್ಲಿ ಚಂದ್ರನು, ಇವನಿಗೆ ಸಹಾಯಮಾಡುವವನಂತೆ ತಾರಾಗಣದಿಂದ ಪರಿವೃತನಾಗಿ ಬೆಳದಿಂಗಳಿಂದ ಲೋಕವನ್ನೇ ಬೆಳಗುತ್ತ, ಅನೇಕ ಸಹಸ್ರ ಕಿರಣಗಳೊಡನೆ ಉದಯಿಸಿದನು. ಶಂಖದಂತೆಯೂ ಹಾಲಿ ನಂತೆಯೂ ತಾವರೆದಂಟಿನಂತೆಯೂ ಶುಭ್ರನಾದ ಚಂದ್ರನು ಉದಯಿಸಿ, ಸರೋವರದಲ್ಲಿ ಈಜಾಡುವ ಹಂಸದಂತೆ ಆಕಾಶದಲ್ಲಿ ತೇಲುತ್ತ ಬರುವುದನ್ನು ಆಂಜನೇಯನು ನೋಡಿದನು (೫೭–೫೮).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಎರಡನೆಯ ಸರ್ಗ

---

## ಸರ್ಗ ೩

ಲಂಕಾದೇವತೆಯನ್ನು ನಿಗ್ರಹಿಸಿ ಹನುಮಂತನು ಲಂಕೆಯನ್ನು ಪ್ರವೇಶಿಸುವುದು.

ಲಂಬಿಸಿದ ಅಂಬುದವೋ ಎಂಬಂತೆ ಲಂಬಿಸಿದ ಲಂಬಗಿರಿಶಿಖರದಮೇಲೆ ನಿಂತಿದ್ದ ಮೇಧಾವಿಯಾದ ಹನುಮಂತನು ಮನಸ್ಸಿನಲ್ಲಿ ಧೈರ್ಯವನ್ನು ತಂದು ಕೊಂಡನು. ಲಂಕೆಯನ್ನು ಪುನಃ ನೋಡುತ್ತ ನಿಂತನು. ಸುಂದರವಾದ

ಉದ್ಯಾನವನಗಳಿಂದಲೂ, ಶರತ್ಕಾಲದ ಮೋಡಗಳಂತೆ ಬೆಳ್ಳಗೆ ಉನ್ನತವಾದ ಸೌಧಗಳಿಂದಲೂ ಅದು ತುಂಬಿತ್ತು. ಸಮುದ್ರಘೋಷದಂತೆ ಜನರ ಶಬ್ದ ಕೇಳಿಸುತ್ತಿದ್ದಿತು. ಸಮುದ್ರದ ತಂಗಾಳಿ ಅತ್ತ ಬೀಸುತ್ತಿದ್ದಿತು (೧–೩). ಲಂಕೆಯು ಅಲಕಾಪುರಿಯಂತೆ ಶ್ರೀಮಂತರ ನಗರ. ಪ್ರಬಲಸೇನೆಯಿಂದ ರಕ್ಷಿತವಾದುದು. ಸರ್ಪರಕ್ಷಿತವಾದ ಭೋಗವತಿಯಂತೆ ಇರತಕ್ಕುದು. ಉನ್ನತವಾದ ಉಪ್ಪರಿಗೆಗಳ ಸಮೀಪದಲ್ಲಿ ಮೇಘಗಳು ಮಿಂಚಿನೊಡನೆ ಸಂಚರಿಸುವುವು. ನಕ್ಷತ್ರಗಳು ಬಳಿಯಲ್ಲಿಯೇ ಹೊಳೆಯುವುವು. ಮಂದಮಾರುತವು ಬೀಸುತ್ತಿರುವುದು. ಸಾಕ್ಷಾತ್ ಅಮರಾವತಿಯೇ ಅದು. ಕಿರುಗೆಜ್ಜೆಗಳಿಂದ ಅಲಂಕರಿಸಿದ್ದ ಧ್ವಜಪಟಗಳು ಝುಂಕಾರವಮಾಡುತ್ತಿರುವುವು. ಹನುಮಂತನು ಆ ನಗರದ ಪ್ರಾಕಾರದ ಬಳಿಗೆ ಬಂದನು (೪–೭). 'ಆ ಬೆಳದಿಂಗಳಲ್ಲಿ ಹನುಮಂತನು ಲಂಕಾಪಟ್ಟಣವನ್ನು ಸುತ್ತಲೂ ನೋಡುತ್ತ ಮತ್ತೆ ವಿಸ್ಮಿತನಾದನು. ಚಿನ್ನದ ಬಾಗಿಲುಗಳು! ವೈಡೂರ್ಯದ ಜಗುಲಿಗಳು! ರತ್ನಗಳಿಂದ ಕೆತ್ತಿದ ನೆಲಗಟ್ಟುಗಳು! ಚಿನ್ನದ ಆನೆಯ ಸಾಲುಗಳಿಂದ ವಿರಾಜಿಸುವ ವೈಡೂರ್ಯದ ಮೆಟ್ಟಿಲುಗಳು! ಅಲ್ಲಲ್ಲಿ ಕ್ರೌಂಚಪಕ್ಷಿಗಳೂ, ನವಿಲುಗಳೂ, ರಾಜಹಂಸಗಳೂ ಗೃಹೋದ್ಯಾನಗಳಲ್ಲಿ ಕ್ರೀಡಿಸುತ್ತಾ ಇಂಪಾಗಿ ಕಲಕಲ ಧ್ವನಿ ಮಾಡುತ್ತಿದ್ದವು! ಒಂದು ಕಡೆ ಮಂಗಳವಾದ್ಯಧ್ವನಿ! ಇನ್ನೊಂದು ಕಡೆ ಸ್ತ್ರೀಯರ ಆಭರಣಧ್ವನಿ! ಅಲಕಾನಗರದಂತೆ ವೈಭವಪೂರ್ಣವಾಗಿಯೂ, ಆಕಾಶಮಾರ್ಗದಲ್ಲಿ ಹಾರಿಹೋಗಲು ಸಜ್ಜಾಗಿದೆಯೋ ಎಂಬಂತೆ ಪರ್ವತಶೃಂಗದಲ್ಲಿ ನಿರ್ಮಿತವಾಗಿಯೂ ಇದ್ದ ಲಂಕೆಯನ್ನು ನೋಡಿ ಹನುಮಂತನಿಗೆ ರೋಮಾಂಚವಾಯಿತು (೮–೧೨). ಅವನು ತನ್ನ ಮನಸ್ಸಿನಲ್ಲಿ 'ರಾವಣನ ಸೈನಿಕರು ಶಸ್ತ್ರಧಾರಿಗಳಾಗಿ ಇದನ್ನು ರಕ್ಷಿಸುತ್ತಿದ್ದಾರೆ. ಇದನ್ನು ನುಗ್ಗಿ ಹೋಗಲು ಯಾರಿಗೆ ಸಾಧ್ಯ? ಒಂದುವೇಳೆ ಪ್ರಯತ್ನಮಾಡಿದರೆ—ಕುಮುದ, ಅಂಗದ, ಸುಷೇಣ, ಮೈಂದ, ದ್ವಿವಿದ–ಇವರಿಗೆ ಸಾಧ್ಯವಾಗಬಹುದು; ಇನ್ನು ಸೂರ್ಯಪುತ್ರನಾದ ಸುಗ್ರೀವ, ಕುಶಪರ್ವ, ಜಾಂಬವಂತ, ಕೇತುಮಾಲ ಇವರಿಗೂ ಸಾಧ್ಯ; ನನಗೂ ಅಸಾಧ್ಯವೇನಲ್ಲ!' ಎಂದುಕೊಂಡನು. ಆಮೇಲೆ ಶ್ರೀರಾಮನ ಪರಾಕ್ರಮವನ್ನೂ, ಲಕ್ಷ್ಮಣನ ಶೌರ್ಯವನ್ನೂ ಸ್ಮರಿಸಿಕೊಂಡು ಇದೇನೂ ಅಸಾಧ್ಯವಾದ ಕೆಲಸವಲ್ಲ ಎಂದು ಸಂತೋಷದಿಂದ

ಉಬ್ಬಿದನು (೧೩–೧೭). ಪ್ರಕಾಶಮಾನವಾದ ದೀಪಗಳಿಂದಲೂ ಉನ್ನತ ಭವನಗಳಿಂದಲೂ ಗೋಶಾಲೆ, ಯಂತ್ರಾಗಾರಗಳಿಂದಲೂ ಉಜ್ಜ್ವಲವಾದ ಲಂಕಾನಗರಿಯು, ರತ್ನಪ್ರಾಕಾರವೆಂಬ ಸೀರೆಯನ್ನುಟ್ಟ ಸುಂದರ ತರುಣಿ ಯಂತೆ ಶೋಭಿಸುತ್ತಿತ್ತು (೧೮–೧೯). ಲಂಕೆಯನ್ನು ಪ್ರವೇಶಿಸುವುದಕ್ಕಾಗಿ ಆಂಜನೇಯನು ಮುಂದೆ ಹೋಗುತ್ತಿರಲು ಲಂಕಾಧಿದೇವತೆಯು ಅವನನ್ನು ಕಂಡಳು. ಒಡನೆಯೇ ಆರ್ಭಟಿಸುತ್ತ ತನ್ನ ವಿಕಾರವಾದ ಮುಖವನ್ನು ತೋರಿಸಿಕೊಂಡು ನಿಜರೂಪದಿಂದ ಹನುಮಂತನೆದುರಿಗೆ ಬಂದು ನಿಂತುಬಿಟ್ಟಳು (೨೦–೨೧). "ಎಲೈ ಕಪಿಯೆ! ಯಾರು ನೀನು? ಇಲ್ಲಿ ನಿನಗೇನು ಕೆಲಸ? ನಿನ್ನ ಪ್ರಾಣವನ್ನು ತೆಗೆಯುವುದರೊಳಗೆ ದಿಟವನ್ನು ಹೇಳಿಬಿಡು. ರಾವಣನ ಸೈನ್ಯ ಈ ನಗರವನ್ನು ರಕ್ಷಿಸುತ್ತಿದೆ. ಕಪಿಯಾದ ನಿನಗೆ ಒಳಗೆ ಹೋಗಲು ಶಕ್ಯವಿಲ್ಲ" ಎಂದು ಗರ್ಜಿಸಿದಳು (೨೨–೨೪). ಆಕೆಯನ್ನು ನೋಡಿ ಆ ವಾನರವೀರನು "ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ. ಮೊದಲು ನೀನು ಯಾರೆಂಬುದನ್ನು ಹೇಳು? ಏನಿದು ನಿನ್ನ ವಿಕಾರರೂಪ? ನಗರದ್ವಾರ ದಲ್ಲಿ ನೀನು ನಿಂತಿರುವುದೇಕೆ? ನನ್ನನ್ನು ತಡೆದು ಗದರಿಸುತ್ತಿರುವುದೇಕೆ?" ಎಂದು ಕೇಳಿದನು (೨೫–೨೬). ಅದನ್ನು ಕೇಳಿ ಲಂಕಾಧಿದೇವತೆಯು ಕ್ರುದ್ಧ ಳಾಗಿ "ಎಲೈ, ರಾಕ್ಷಸೇಂದ್ರನಾದ ರಾವಣನ ಆಜ್ಞೆಯಂತೆ ನಾನು ಈ ನಗರ ವನ್ನು ಕಾಯುತ್ತಿರುವೆನು. ನನ್ನನ್ನು ಅಲಕ್ಷ್ಯಮಾಡಿ ನೀನು ಒಳಕ್ಕೆ ಹೋಗ ಲಾರೆ. ಈ ಕ್ಷಣದಲ್ಲಿ ನಿನ್ನನ್ನು ಕೊಂದು ನೆಲದಮೇಲೆ ಉರುಳಿಸುತ್ತೇನೆ. ನಾನೇ ಲಂಕಾಧಿದೇವತೆ. ತಿಳಿಯಿತೆ?" ಎಂದು ಗಜರಿದಳು (೨೭–೩೦) ಹನುಮಂತನು ಸ್ವಲ್ಪವೂ ಭಯಪಡದೆ ಬೆಟ್ಟದಂತೆ ಕದಲದೆ ನಿಂತಿದ್ದನು. ಬುದ್ಧಿ ಶಾಲಿಯೂ ಮಹಾವೀರನೂ ಆದ ಆ ವಾನರೋತ್ತಮನು ವಿಕಾರರೂಪದ ಆ ಸ್ತ್ರೀಯನ್ನು ನೋಡಿ "ಈ ಲಂಕಾಪಟ್ಟಣವನ್ನು ನೋಡಬೇಕೆಂದು ನನಗೆ ಬಹಳ ಆಸೆಯಾಗಿದೆ. ಇಲ್ಲಿರುವ ತೋಟಗಳನ್ನೂ ಅರಣ್ಯಗಳನ್ನೂ ದೊಡ್ಡ ದೊಡ್ಡ ಭವನಗಳನ್ನೂ ನೋಡುವುದಕ್ಕಾಗಿ ಬಂದಿದ್ದೇನೆ" ಎಂದು ಪ್ರತ್ಯುತ್ತರ ಕೊಟ್ಟನು (೩೧–೩೪). ಆಗ ಲಂಕೆಯು ಮತ್ತಷ್ಟು ಕಠೋರಸ್ವರದಿಂದ "ಎಲೈ ಬುದ್ಧಿಗೇಡಿ ಮಂಗ! ನನ್ನನ್ನು ಗೆಲ್ಲದೆ ರಾಕ್ಷಸೇಶ್ವರನಿಂದ ರಕ್ಷಿತವಾದ ಈ ಲಂಕಾಪಟ್ಟಣವನ್ನು ನೋಡಲು ನಿನಗೆ ಸಾಧ್ಯವೆ?" ಎಂದು ಕಠೋರ

ವಾಗಿ ಕೂಗಿದಳು (೩೫–೩೬). ಹನುಮಂತನು ಮೃದುವಾಗಿಯೇ "ಭದ್ರೆ, ಒಂದು ಸಲ ಈ ಪಟ್ಟಣವನ್ನು ನೋಡಿಕೊಂಡು ನನ್ನ ಪಾಡಿಗೆ ನಾನು ಹೊರಟುಹೋಗುತ್ತೇನೆ" ಎಂದನು (೩೭). ಲಂಕೆಗೆ ಕೋಪವನ್ನು ತಡೆಯಲಾಗಲಿಲ್ಲ. ಭಯಂಕರವಾಗಿ ಕೂಗುತ್ತಾ ಮುಂಪೆ ನುಗ್ಗಿ, ತನ್ನ ಕೈಯಿಂದ ಹನುಮಂತನಿಗೆ ಒಂದು ಬಲವಾದ ಪೆಟ್ಟನ್ನು ಹಾಕಿದಳು. ಹನುಮಂತನಿಗೆ ಕೋಪ ಉಕ್ಕಿತು. ಒಂದು ಸಲ ಗರ್ಜಿಸಿ ತನ್ನ ಎಡಗೈಮುಷ್ಟಿಯಿಂದ ಅವಳನ್ನು ಗುದ್ದಿದನು (೩೮–೪೦). ಹೆಂಗಸು ಎಂಬ ಭಾವನೆಯಿಂದ ಹೆಚ್ಚು ಕೋಪಗೊಳ್ಳದೆ ಬಲವಾಗಿ ಹೊಡೆಯಲಿಲ್ಲ. ಆ ರಾಕ್ಷಸಿಯು ಅಷ್ಟಕ್ಕೇ ನೆಲದ ಮೇಲೆ ಕುಸಿದು ವಿಕೃತವದನಳಾಗಿ ಬಿದ್ದುಹೋದಳು. ತೇಜಸ್ವಿಯಾದ ಹನುಮಂತನು ಅವಳು ಹೆಂಗಸೆಂದು ಮರುಕದೋರಿ ಸುಮ್ಮನಾದನು (೪೧–೪೩). ಲಂಕೆಯು ಗದ್ಗದ ಸ್ವರದಿಂದ "ವಾನರೋತ್ತಮ! ನನ್ನನ್ನು ಕಾಪಾಡು. ನಿನ್ನಂತಹ ಸಾತ್ವಿಕರು ಮಹಾ ಪರಾಕ್ರಮಿಗಳಾದರೂ ಧರ್ಮವನ್ನು ಮೀರಿಹೋಗುವುದಿಲ್ಲ. ನಾನೇ ಲಂಕಾದೇವತೆ. ನೀನು ಮಹಾ ಬಲಶಾಲಿ; ನನ್ನನ್ನು ಸೋಲಿಸಿದ್ದೀಯೆ. ನಿನಗೊಂದು ಸತ್ಯವಾದ ವಿಷಯವನ್ನು ಹೇಳುತ್ತೇನೆ (೪೪–೪೬): ಬ್ರಹ್ಮದೇವನು ನನ್ನನ್ನು ಕುರಿತು 'ಒಬ್ಬ ವಾನರನು ಬಂದು ಯಾವಾಗ ನಿನ್ನನ್ನು ಸೋಲಿಸುತ್ತಾನೊ, ಆಗ ಈ ರಾಕ್ಷಸರಿಗೆ ವಿಪತ್ಕಾಲವು ಬಂದಿತೆಂದು ತಿಳಿ' ಎಂಬುದಾಗಿ ಹೇಳಿದ್ದನು. ಹೇ ಸೌಮ್ಯ! ನಿನ್ನನ್ನು ನೋಡಿದ್ದರಿಂದ ಅಂತಹ ಸಮಯ ಈಗ ಬಂದಿತೆಂದು ನನಗೆ ತೋರುತ್ತಿದೆ. ಬ್ರಹ್ಮದೇವನ ಮಾತು ಎಂದಿಗಾದರೂ ಹುಸಿಯಾದೀತೆ? ಸೀತಾನಿಮಿತ್ತವಾಗಿ ಈ ದುರಾತ್ಮನಾದ ರಾವಣನಿಗೂ ಇವನನ್ನು ನಂಬಿದ ಈ ರಾಕ್ಷಸರಿಗೂ ವಿನಾಶಕಾಲ ಸಮೀಪಿಸಿತು. ವಾನರಶ್ರೇಷ್ಠ! ಈ ಪಟ್ಟಣದೊಳಗೆ ಹೋಗಿ ನಿನಗೆ ಇಷ್ಟಬಂದ ಕಾರ್ಯವನ್ನು ನಡೆಸು (೪೭–೫೦). ನಂದಿಕೇಶ್ವರನ ಶಾಪಕ್ಕೀಡಾದ* ಈ ನಗರದೊಳಕ್ಕೆ ಹೋಗಿ, ಇಷ್ಟಬಂದಕಡೆ ಸಂಚರಿಸಿ ಪತಿವ್ರತೆಯಾದ ಜನಕಸುತೆಯನ್ನು ಹುಡುಕು" ಎಂದು ಹೇಳಿದಳು (೫೧).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಮೂರನೆಯ ಸರ್ಗ

---

* ಒಂದು ಸಲ ರಾವಣನು ನಂದಿಕೇಶ್ವರನನ್ನು ಧಿಕ್ಕರಿಸಿ ಹಾಸ್ಯಮಾಡಿದನು.

## ಸರ್ಗ ೪

### ಹನುಮಂತನು ಲಂಕೆಯನ್ನು ಪ್ರವೇಶಿಸಿ, ಅಲ್ಲಿದ್ದ ಅನೇಕ ರಾಕ್ಷಸರನ್ನು ನೋಡುವುದು.

ಹೀಗೆ ಮಹಾತೇಜಸ್ವಿಯಾದ ಆಂಜನೇಯನು ಲಂಕಾದೇವತೆಯನ್ನು ಜಯಿಸಿ, ಕೋಟೆಯ ಗೋಡೆಯಿಂದ ಹಾರಿ ಲಂಕಾಪಟ್ಟಣದ ಒಳಕ್ಕಿಳಿದನು. ಇಳಿಯುವಾಗ ಶತ್ರುವಿನ ತಲೆಯನ್ನು ಮೆಟ್ಟುವ ರೀತಿಯಲ್ಲಿ, ತನ್ನ ಎಡಗಾಲನ್ನು ಮೊದಲು ನೆಲದಮೇಲೆ ಊರಿದನು * (೧–೪). ಧೀರನಾದ ಹನುಮಂತನು ಆ ರಾತ್ರಿಯಲ್ಲಿಯೇ ಲಂಕೆಯನ್ನು ಪ್ರವೇಶಿಸಿ ಬಿಡಿಹೂಗಳನ್ನು ಚೆಲ್ಲಿದ್ದ ರಾಜ ಬೀದಿಯನ್ನು ಸೇರಿ ಮುಂದೆ ಹೊರಟನು (೪). ಆ ನಗರವು ರಾಕ್ಷಸರ ಅಟ್ಟಹಾಸ ಗಳಿಂದಲೂ ವಾದ್ಯಘೋಷಗಳಿಂದಲೂ ತುಂಬಿಹೋಗಿತ್ತು. ಆಕಾಶದಲ್ಲಿ ಮೇಘಗಳಿರುವಂತೆ ಇಕ್ಕೆಡೆಯಲ್ಲಿಯೂ ಐರಾವತಗಳಂತೆ ವಿರಾಜಿಸುತ್ತಿದ್ದ ವಜ್ರಮಯ ಗವಾಕ್ಷಗಳಿಂದ ರಂಜಿಸುವ ಉನ್ನತ ಭವನಗಳಿಂದ ರಮ್ಯವಾಗಿತ್ತು. ಪದ್ಮಕ, ಸ್ವಸ್ತಿಕ, ವರ್ಧಮಾನಕ ಮುಂತಾದ ಹೆಸರಿನ ನಾನಾಬಗೆಯ ಚಿತ್ರ ವಿಚಿತ್ರವಾದ ಬಿಳಿಯ ಮೋಡಗಳಂತಿರುವ ರಾಕ್ಷಸರ ಕಟ್ಟಡಗಳಿಂದ ಶೋಭಿಸು ತ್ತಿದ್ದಿತು (೫–೮). ಹನುಮಂತನು ರಾಮಕಾರ್ಯಾರ್ಥವಾಗಿ ಸುತ್ತುತ್ತ, ನಗರದ ಚೆಲುವನ್ನು ಕಂಡು ಸಂತೋಷಪಟ್ಟನು. ಅಪ್ಸರೆಯರಂತೆ ಹಾಡು ತ್ತಿದ್ದ ಪ್ರಮದೆಯರ ಇಂಪಾದ ಸಂಗೀತವನ್ನಾಲಿಸಿದನು. ಅವರ ಒಡ್ಯಾಣಗಳ ಸದ್ದನ್ನೂ ಕಾಲಂದುಗೆಗಳ ಮಂಜುಳನಾದವನ್ನೂ ಆಕರ್ಣಿಸಿದನು. ಜನರು ಮಹಡಿಯ ಮೆಟ್ಟಲುಗಳನ್ನು ಹತ್ತಿಳಿಯುವ ಶಬ್ದವನ್ನೂ, ಕೈಬಡಿಯು ವುದನ್ನೂ, ಕೇಕೆಹಾಕುವುದನ್ನೂ ಕೇಳಿದನು (೯–೧೨). ಕೆಲವು ರಾಕ್ಷಸರು

---

ನಂದಿಕೇಶ್ವರನು ಕೋಪಗೊಂಡು ಲಂಕೆಯು ಆಗಲೇ ನಾಶವಾಗಲೆಂದು ಶಪಿಸಿದನು. ಲಂಕೆಯು ಬ್ರಹ್ಮನಲ್ಲಿ ಹೋಗಿ ಮೊರೆಯಿಟ್ಟಳು. ಬ್ರಹ್ಮನು "ಒಬ್ಬ ವಾನರನು ಬಂದು ನಿನ್ನನ್ನು ಜಯಿಸುವವರೆಗೂ ನಿನಗೆ ನಾಶವಿಲ್ಲ" ಎಂದು ಅಭಯ ಕೊಟ್ಟನು ಎಂಬ ಕಥೆ ಇದೆ.

* ಶತ್ರುವಿನ ಪಟ್ಟಣವನ್ನು ದ್ವಾರಪ್ರದೇಶದಿಂದ ಪ್ರವೇಶಿಸಬಾರದೆಂದೂ, ಪ್ರವೇಶಿಸು ವಾಗ ಮೊದಲು ಎಡಗಾಲನ್ನಿಡಬೇಕೆಂದೂ ಬೃಹಸ್ಪತಿನೀತಿಶಾಸ್ತ್ರವು ಹೇಳುತ್ತದೆ.

ಜಪಮಾಡುತ್ತಿದ್ದರು; ಕೆಲವರು ವೇದಾಧ್ಯಯನಮಾಡುತ್ತಿದ್ದರು; ಮತ್ತೆ ಕೆಲವರು ರಾವಣನನ್ನು ಹೊಗಳಿ ಹಾಡುತ್ತಿದ್ದರು. ಕೆಲವರು ಗರ್ಜಿಸುತ್ತಿದ್ದರು. ಕೆಲವರು ರಾಜಬೀದಿಯಲ್ಲಿ ಗುಂಪುಗೂಡಿ ನಿಂತಿದ್ದರು (೧೩–೧೪). ಅನೇಕ ರಾಜದೂತರು ಕಾರ್ಯಾರ್ಥವಾಗಿ ಸಂಚರಿಸುತ್ತಿದ್ದರು. ಆ ರಾಕ್ಷಸರಲ್ಲಿ ದೀಕ್ಷೆ ಬಿಟ್ಟವರೂ, ಜಟಾಧಾರಿಗಳೂ, ಬೋಳತಲೆಯವರೂ ಇದ್ದರು. ಕೆಲವರು ಅರಿಷ್ಟಪರಿಹಾರಕ್ಕಾಗಿ ದರ್ಭೆಯ ಕಂತೆಯನ್ನು ಕೈಯಲ್ಲಿ ಹಿಡಿದಿದ್ದರು. ಕೆಲವರು ಶತ್ರುಗಳನ್ನು ಕೊಲ್ಲುವುದಕ್ಕಾಗಿ ಹೋಮಮಾಡುತ್ತಿದ್ದರು. ಇನ್ನು ಕೆಲವರು ಕೂಟ, ಮುದ್ಗರ ಮುಂತಾದ ಆಯುಧಗಳನ್ನು ಹಿಡಿದಿದ್ದರು (೧೫–೧೬). ಅವರಲ್ಲಿ ಕೆಲವರಿಗೆ ಒಂದೇ ಕಣ್ಣು! ಕೆಲವರಿಗೆ ಒಂದೇ ಕಿವಿ! ಕೆಲವರಿಗೆ ಜೋಲುವ ಹೊಟ್ಟೆ! ಕೆಲವರಿಗೆ ಜೋಲುವ ಮೊಲೆ! ಘೋರರೂಪಿಗಳೂ ಸೊಟ್ಟಮೋರೆಯವರೂ ಡೊಂಕುಮೈಯವರೂ ಕುಳ್ಳರೂ ಅಲ್ಲಿದ್ದರು (೧೭). ಧನುಸ್ಸು, ಖಡ್ಗ, ಶಕ್ತಿ, ಪಟ್ಟಸ, ಶೂಲ—ಮುಂತಾದ ನಾನಾವಿಧವಾದ ಆಯುಧಗಳನ್ನೂ ಕವಚಗಳನ್ನೂ ಧರಿಸಿದವರಿದ್ದರು. ಯಾವ ವಿಕಾರವೂ ಇಲ್ಲದ ಸಹಜ ರೀತಿಯ ರಾಕ್ಷಸರೂ ಕಂಡುಬರುತ್ತಿದ್ದರು. ಕೆಲವರು ಸುಂದರರೂ ತೇಜಸ್ವಿಗಳೂ ಆಗಿದ್ದರು. ಇನ್ನು ಕೆಲವು ನಗರವಾಸಿಗಳು ಹೂಮಾಲೆಯನ್ನು ಧರಿಸಿ, ಸುಗಂಧವನ್ನು ತೊಡೆದುಕೊಂಡು, ಆಭರಣಭೂಷಿತರಾಗಿ ವಿಹರಿಸುತ್ತಿದ್ದರು (೧೮–೨೨). ಆಂಜನೇಯನು ಅವರೆಲ್ಲರನ್ನೂ ನೋಡುತ್ತ ರಾವಣನ ಅಂತಃಪುರವಿರುವ ಮಹಾಸೌಧದ ಬಳಿಗೆ ಬಂದು ಸುತ್ತಲೂ ಕಾವಲಿದ್ದ ಘೋರಾಯುಧಧಾರಿಗಳಾದ ಲಕ್ಷಾಂತರ ಸೈನಿಕರನ್ನು ಕಂಡನು. ಆ ಸೌಧಕ್ಕೆ ಸುವರ್ಣಮಯವಾದ ದೊಡ್ಡ ಬಾಗಿಲಿದ್ದಿತು. ಸುತ್ತಲೂ ಬಿಳಿದಾವರೆಗಳು ಬೆಳೆದಿರುವ ಒಂದು ದೊಡ್ಡ ಪರಿಖೆ ಇತ್ತು (೨೩–೨೫). ಪರಿಖೆಯ ಆಚೆ ವಿಶಾಲವಾದ ಪ್ರಾಕಾರ. ಆ ಭವನವು ಸ್ವರ್ಗಲೋಕಕ್ಕೆ ಸದೃಶವಾಗಿ, ದಿವ್ಯ ಮನೋಹರ ಧ್ವನಿಗಳಿಂದ ತುಂಬಿತ್ತು. ಒಂದು ಕಡೆ ಕುದುರೆಗಳ ಹೇಷಾರವವೂ ಇನ್ನೊಂದು ಕಡೆ ಸ್ತ್ರೀಯರ ಆಭರಣಧ್ವನಿಯೂ ಕೇಳಿಸುತ್ತಿತ್ತು. ಎಲ್ಲಿ ನೋಡಿದರೂ ರಥಗಳೂ ಪಲ್ಲಕ್ಕಿಗಳೂ ವಿಮಾನಗಳೂ ಆನೆ ಕುದುರೆಗಳೂ ತುಂಬಿದ್ದವು (೨೬–೨೭). ಮಹಾದ್ವಾರದ ಬಳಿ ನಾಲ್ಕು ಕೋರೆಯಹಲ್ಲುಗಳಿರುವ ಬಿಳಿಯಾನೆಗಳೂ ಸುಂದರವಾದ ಮೃಗಪಕ್ಷಿಗಳೂ ಇದ್ದವು. ರಾಕ್ಷಸ

ರಾಜನ ಆ ಭವನವನ್ನು ಬಲಾಢ್ಯರಾದ ಬಹುಮಂದಿ ರಾಕ್ಷಸರು ಕಾಯುತ್ತಿದ್ದರು (೨೮-೨೯). ಸುವರ್ಣಪ್ರಾಕಾರದಿಂದ ಆವೃತವಾಗಿಯೂ, ಮುತ್ತಿನ ಮಣಿಗಳಿಂದ ಭೂಷಿತವಾಗಿಯೂ, ಅಗರುಚಂದನಗಳ ಸುಗಂಧದಿಂದ ತುಂಬಿ ಹೋಗಿಯೂ ಇದ್ದ ಆ ಭವನದ ಪ್ರಾಕಾರದೊಳಕ್ಕೆ ಹನುಮಂತನು ಪ್ರವೇಶಿಸಿದನು (೩೦).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ನಾಲ್ಕನೆಯ ಸರ್ಗ

---

## ಸರ್ಗ ೫

ಚಂದ್ರೋದಯ ವರ್ಣನೆ; ಸೀತೆಯನ್ನು ಕಾಣದುದಕ್ಕಾಗಿ ಹನುಮಂತನ ಶೋಕ.

ಹನುಮಂತನು ರಾವಣನ ಅರಮನೆಗೆ ಬರುತ್ತಿರುವಾಗ ಸುಮಾರು ಮಧ್ಯರಾತ್ರಿಯಾಯಿತು. ಅಷ್ಟರಲ್ಲಿ ಚಂದ್ರನು ಬೆಳದಿಂಗಳನ್ನು ಚಲ್ಲುತ್ತ ಗಗನತಲವನ್ನೇರಿದನು. ನಕ್ಷತ್ರಗಳ ಮಧ್ಯದಲ್ಲಿ ವಿರಾಜಿಸುತ್ತಿದ್ದ ಅವನು ಹಸುಗಳ ಮಂದೆಯಲ್ಲಿ ಸಂಚರಿಸುವ ಗೂಳಿಯಂತೆ ಕಾಣುತ್ತಿದ್ದನು (೧). ಜನರ ತಾಪವನ್ನು ಪರಿಹರಿಸುತ್ತ, ಸಮುದ್ರವನ್ನು ಉಕ್ಕೇರಿಸುತ್ತ, ಸಮಸ್ತ ವಸ್ತುಗಳನ್ನೂ ಬೆಳಗಿಸುತ್ತ ಬರುತ್ತಿದ್ದ ಆ ಶೀತಕಿರಣನನ್ನು ಹನುಮಂತನು ಕಂಡನು (೨). ಭೂಲೋಕದಲ್ಲಿ ಮಂದರಪರ್ವತಕ್ಕೂ, ಪ್ರದೋಷಕಾಲದಲ್ಲಿ ಸಮುದ್ರಕ್ಕೂ, ಹಗಲು ನೀರಿನಲ್ಲಿರುವ ಕಮಲಕ್ಕೂ ಯಾವ ಸೌಂದರ್ಯವಿರುತ್ತದೆಯೋ ಅದೆಲ್ಲವೂ ಆಗ ಚಂದ್ರಮಂಡಲದಲ್ಲಿ ತುಂಬಿತ್ತು. (ಮಂದರಶಿಖರದಂತೆ ಚಂದ್ರನು ಎತ್ತರದಲ್ಲಿದ್ದನು. ಸಮುದ್ರದ ಅಲೆಯು ದಡದ ಕಡೆಗೆ ನುಗ್ಗುವಂತೆ ಆಕಾಶದಲ್ಲಿ ನುಗ್ಗಿ ಬರುತ್ತಿದ್ದನು. ಕಮಲದಂತೆ ಪ್ರಸನ್ನನಾಗಿದ್ದನು) (೩). ಆಕಾಶಮಧ್ಯದಲ್ಲಿದ್ದ ಚಂದ್ರನು ಬೆಳ್ಳಿಯ ಪಂಜರದಲ್ಲಿರುವ ಹಂಸದಂತೆ, ಮಂದರಗುಹೆಯಲ್ಲಿರುವ ಸಿಂಹದಂತೆ, ಮದ್ದಾನೆಯನ್ನೇರಿದ ಯೋಧನಂತೆ ರಂಜಿಸುತ್ತಿದ್ದನು (೪). ಚಂದ್ರಮಂಡಲದಲ್ಲಿ ಕೊಂಬಿನಂತಹ ಚಿಹ್ನೆಯೊಂದು ಕಾಣಿಸುತ್ತಿದ್ದಿತು. ಆದ್ದರಿಂದ ಚಂದ್ರನು ಕೊಂಬಿರುವ ಬಿಳಿಯ ಎತ್ತಿನಂತೆಯೂ,

ಶಿಖರವನ್ನು ಚಾಚಿ ನಿಂತಿರುವ ಹಿಮಾಚಲದಂತೆಯೂ, ಸುವರ್ಣಾಲಂಕೃತ ವಾದ ಕೋರೆಯುಳ್ಳ ಆನೆಯಂತೆಯೂ ವಿರಾಜಿಸುತ್ತಿದ್ದನು (೫). ಮಂಜು ಇಲ್ಲದೆ ಆಕಾಶವು ಸ್ವಚ್ಛವಾಗಿತ್ತು. ತನ್ನಲ್ಲಿ ಸಂಕ್ರಾಂತವಾದ ಸೂರ್ಯಕಿರಣ ದಿಂದ ಕತ್ತಲನ್ನು ಅಡಗಿಸಿ, ಚಂದ್ರನು ನಿರ್ಮಲವಾಗಿ ಪ್ರಕಾಶಿಸುತ್ತಿದ್ದನು (೬). ಪರ್ವತದ ಬಂಡೆಯನ್ನು ಹತ್ತಿ ನಿಂತ ಸಿಂಹದಂತೆಯೂ, ರಣಭೂಮಿಗೆ ನುಗ್ಗಿದ ಗಜರಾಜನಂತೆಯೂ, ತನ್ನ ರಾಜ್ಯದಲ್ಲಿ ಸಂಚರಿಸುವ ಮಹಾರಾಜ ನಂತೆಯೂ ಚಂದ್ರನು ಶೋಭಿಸುತ್ತಿದ್ದನು (೭). ಎಲ್ಲೆಲ್ಲಿಯೂ ಬೆಳದಿಂಗಳು; ರಾಕ್ಷಸರು ವಿಹರಿಸುವ ಕಾಲ; ಪ್ರೇಮಿಗಳ ಪ್ರಣಯಕೋಪವು ಶಾಂತವಾಗುವ ಸಮಯ; ರಾತ್ರಿಯು ಎಲ್ಲರಿಗೂ ಸ್ವರ್ಗಸುಖವನ್ನು ತಂದುಕೊಟ್ಟಿತ್ತು (೮). ತಂತ್ರೀವಾದ್ಯಗಳ ಇಂಪಾದ ನಾದವು ಕೇಳಿಸುತ್ತಿದ್ದಿತು. ಸ್ತ್ರೀಯರು ತಮ್ಮ ಪತಿಗಳೊಡನೆ ಸುಖನಿದ್ರೆಮಾಡುತ್ತಿದ್ದರು. ಕೆಲವು ರಾಕ್ಷಸರು ಕ್ರೂರಕರ್ಮ ಗಳನ್ನು ಮಾಡುತ್ತಾ ವಿಹರಿಸುತ್ತಿದ್ದರು (೯). ಭೋಗವಿಲಾಸಗಳಿಂದ ಮದವೇರಿದ ಜನರಿಂದಲೂ, ರಥ, ಅಶ್ವ, ಸ್ವರ್ಣಪೀಠ ಮುಂತಾದ ಸಾಮಗ್ರಿ ಗಳಿಂದಲೂ ತುಂಬಿದ ಅನೇಕ ಭವನಗಳನ್ನು ಹನುಮಂತನು ನೋಡಿದನು (೧೦). ವಾಗ್ವಾದಮಾಡುತ್ತಿದ್ದ ರಾಕ್ಷಸರು ಕೆಲವರು; ಪುಷ್ಟವಾದ ತಮ್ಮ ಭುಜಗಳನ್ನು ಇನ್ನೊಬ್ಬರ ಭುಜದಮೇಲೆ ಇಡುತ್ತಿದ್ದವರು ಕೆಲವರು; ಹುಚ್ಚು ಹುಚ್ಚಾಗಿ ಕೂಗಾಡುತ್ತಿದ್ದವರು ಕೆಲವರು; ಬೈದಾಡುತ್ತಿದ್ದವರು ಕೆಲವರು (೧೧). ಕೆಲವರು ಎದೆಯನ್ನು ಚಾಚಿಕೊಂಡು ಕಾಂತೆಯರ ಮೈಮೇಲೆ ಕೈಯಿಡುತ್ತಿದ್ದರು. ಕೆಲವರು ವಿಚಿತ್ರ ವೇಷವನ್ನು ಧರಿಸಿ ಬಿಲ್ಲನ್ನು ಮಿಡಿಯು ತ್ತಿದ್ದರು (೧೨). ಹಾಗೆಯೇ ಅನೇಕ ರಾಕ್ಷಸಸ್ತ್ರೀಯರು ಸರಸಸಲ್ಲಾಪದಲ್ಲಿ ತೊಡಗಿದ್ದರು. ಕೆಲವರು ನಿದ್ರೆಮಾಡುತ್ತಿದ್ದರು. ಕೆಲವರು ನಗುತ್ತಿದ್ದರು. ಇನ್ನು ಕೆಲವರು ಕೋಪಗೊಳ್ಳುತ್ತಲೂ ನಿಟ್ಟುಸಿರುಬಿಡುತ್ತಲೂ ಇದ್ದರು (೧೩). ಅಲ್ಲಲ್ಲಿ ದೊಡ್ಡ ಸಲಗಗಳು ಘೀಂಕಾರಮಾಡುತ್ತಿದ್ದವು. ಆ ನಗರದಲ್ಲಿ ಅನೇಕ ಮಂದಿ ಗೌರವಾನ್ವಿತ ಸಜ್ಜನರೂ ಇದ್ದರು. ಯುದ್ಧಮಾಡಲು ತಕ್ಕ ಪ್ರತಿವೀರರು ದೊರೆಯಲಿಲ್ಲವೆಂಬ ಚಿಂತೆಯಿಂದ ಅನೇಕ ರಾಕ್ಷಸವೀರರು ಸರ್ಪ ಗಳಂತೆ ಬುಸುಗುಟ್ಟುತ್ತಿದ್ದರು (೧೪). ಕೆಲವು ರಾಕ್ಷಸರು ಬುದ್ಧಿಶಾಲಿಗಳೂ ಒಳ್ಳೆಯ ಮಾತುಗಾರರೂ ಆಸ್ತಿಕರೂ ಸುಂದರವಾದ ಹೆಸರುಳ್ಳವರೂ

ರೂಪಶಾಲಿಗಳೂ ರೂಪಕ್ಕೆ ಅನುಗುಣವಾದ ಶೀಲಸಂಪನ್ನರೂ ಆಗಿದ್ದರು. ಅವರನ್ನು ಕಂಡು ಹನುಮಂತನಿಗೆ ಸಂತೋಷವಾಯಿತು (೧೫–೧೬). ಮತ್ತು ತಮ್ಮ ಪ್ರಿಯರಲ್ಲಿ ಶುದ್ಧವಾದ ಪ್ರೇಮವನ್ನಿಟ್ಟು, ಪ್ರಿಯರಲ್ಲಿಯೂ ಮದ್ಯಪಾನದಲ್ಲಿಯೂ ಆಸಕ್ತಿಯನ್ನು ತೋರಿಸುತ್ತ, ತಾರೆಗಳಂತೆ ಶೋಭಿಸುತ್ತಿರುವ ಶೀಲವತಿಯರಾದ ಅನೇಕ ಸುಂದರ ತರುಣಿಯರನ್ನು ಆಂಜನೇಯನು ನೋಡಿದನು (೧೭). ಕೆಲವು ಸುಂದರಿಯರು ತಮ್ಮ ಪ್ರಿಯರಿಂದ ಗಾಢಾಲಿಂಗಿತರಾಗಿ ನಾಚುತ್ತ, ಹೂಗಳ ಮಧ್ಯದಲ್ಲಿ ಓಲಾಡುವ ಹೆಣ್ಣುದುಂಬಿಗಳಂತೆ ಆನಂದಪರವಶರಾಗಿದ್ದರು (೧೮). ಇನ್ನೂ ಕೆಲವು ಪತಿವ್ರತೆಯರು ಉಪ್ಪರಿಗೆಗಳಲ್ಲಿ ತಮ್ಮ ಗಂಡಂದಿರ ಬಳಿ ಕುಳಿತು ಆನಂದದಿಂದ ಮನ್ಮಥಾವಿಷ್ಟರಾಗಿದ್ದರು (೧೯). ಕೆಲವು ಸ್ತ್ರೀಯರು ತಮ್ಮ ಉತ್ತರೀಯವನ್ನು ತೆಗೆದುಹಾಕಿದ್ದರು. ಸುವರ್ಣರೇಖೆಯಂತೆ ಅವರ ಮೈಬಣ್ಣ ಮಿಂಚುತ್ತಿತ್ತು. ಇನ್ನು ಕೆಲವರು ಪತಿವಿರಹದುಃಖದಿಂದ ಚಂದ್ರನಂತೆ ಬಿಳಚಿಕೊಂಡಿದ್ದರು (೨೦). ಮನೆಗಳಲ್ಲಿ ತಮ್ಮ ಪ್ರಿಯರಾದ ಗಂಡಂದಿರೊಡನೆ ಹರ್ಷದಿಂದಿದ್ದ ಅನೇಕ ಸುಂದರ ಯುವತಿಯರನ್ನು ಆಂಜನೇಯನು ಕಂಡನು (೨೧). ಹನುಮಂತನು ಚಂದ್ರನಂತೆ ವಿರಾಜಿಸುವ ಸ್ತ್ರೀಯರ ಮುಖಗಳನ್ನೂ, ಬಾಗಿದ ಕಣ್ಣೆವೆಯುಳ್ಳ ನೇತ್ರಪಂಕ್ತಿಗಳನ್ನೂ, ಮಿಂಚಿನಂತೆ ಹೊಳೆಯುವ ಅವರ ಭೂಷಣಗಳನ್ನೂ ಸೀತೆಯನ್ನು ಗುರುತಿಸುವುದಕ್ಕಾಗಿ ಗಮನಿಸಿ ನೋಡುತ್ತಿದ್ದನು (೨೨). ಆದರೇನು? ಸತ್ಕುಲಪ್ರಸೂತೆಯೂ, ಅರಳಿದ ಬಳ್ಳಿಯಂತೆ ಕೃಶಾಂಗಿಯೂ, ಅಯೋನಿಜೆಯೂ ಆದ ಸೀತಾದೇವಿಯು ಮಾತ್ರ ಅವನ ಕಣ್ಣಿಗೆ ಗೋಚರಿಸಲಿಲ್ಲ. ಸೀತಾದೇವಿಯಾದರೋ ಪರಂಪರೆಯಿಂದ ಬಂದ ಪಾತಿವ್ರತ್ಯಧರ್ಮದಲ್ಲಿ ನಿರತಳು; ವಿರಹದುಃಖಿತೆಯಾಗಿ ರಾಮನನ್ನೇ ನೋಡಲು ಕಾದಿರುವವಳು; ಶ್ರೀರಾಮಚಂದ್ರನ ಮನಸ್ಸಿನಲ್ಲಿ ಸದಾ ನೆಲಸಿರತಕ್ಕವಳು; ಉತ್ತಮ ಸ್ತ್ರೀಯರಲ್ಲಿ ಉತ್ತಮಳು (೨೩–೨೪). ಹಿಂದೆ ಶ್ರೀರಾಮನ ಸನ್ನಿಧಿಯಲ್ಲಿದ್ದಾಗ, ಶ್ರೇಷ್ಠವಾದ ಸುವರ್ಣಪದಕದಿಂದ ಅಲಂಕರಿಸಿಕೊಂಡ ತನ್ನ ಕಂಠದಮೇಲೆ, ಈಗ ಬಿಸಿಯಾದ ಕಣ್ಣೀರನ್ನು ಧಾರಾಕಾರವಾಗಿ ಸುರಿಸುತ್ತ ಇರುವವಳು. ಅಂದವಾದ ಕಣ್ಣೆವೆಯಿಂದಲೂ ಇಂಪಾದ ಕಂಠದಿಂದಲೂ ಕೂಡಿದವಳು. ಹಿಂದೆ ಶ್ರೀರಾಮನ ಬಳಿ ಅರಣ್ಯದಲ್ಲಿ ಮಯೂರಿಯಂತೆ ವಿಹರಿಸಿದವಳು (೨೫).

ಆಕೆಯು ಕ್ಷೀಣಿಸಿದ ಚಂದ್ರಕಲೆಯಂತೆಯೂ ಕೊಳೆಯಿಂದ ಮಲಿನವಾದ ಚಿನ್ನದ ಸಲಾಕೆಯಂತೆಯೂ ಇರತಕ್ಕವಳು ; ಗಾಯದೊಳಗೆ ಸಿಕ್ಕಿರುವ ಬಾಣದ ತುದಿಯಂತೆ, ರಾವಣನ ಮನೋಯಾತನೆಗೆ ಕಾರಣಳು. ಬಿರುಗಾಳಿಯು ತಳ್ಳಿಕೊಂಡು ಬಂದ ಮೇಘದಂತೆ ಅಸಹಾಯಳು (೨೬). ಇಂತಹ ಸೀತಾದೇವಿಯು ಮಾತ್ರ ಆಂಜನೇಯನಿಗೆ ಗೋಚರಿಸಲಿಲ್ಲ. ಹೀಗೆ ಎಲ್ಲಿ ಹುಡುಕಿದರೂ ಶ್ರೀರಾಮನ ಧರ್ಮಪತ್ನಿಯು ಕಾಣದುದರಿಂದ ಅವನು ಚಿಂತಾಮಗ್ನನಾಗಿ ಸ್ವಲ್ಪಕಾಲ ಏನೂ ತೋರದೆ ಮೂಢನಂತಾದನು (೨೭).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಐದನೆಯ ಸರ್ಗ

---

## ಸರ್ಗ ೬

ಅರಮನೆಯ ಸಮೀಪದಲ್ಲಿದ್ದ ಭವನಗಳಲ್ಲಿ ಸೀತೆಯನ್ನು ಹುಡುಕುವುದು.

ಹನುಮಂತನು ಆಕೆಯನ್ನು ಕಾಣದುದರಿಂದ ಗೃಹವಿಮಾನಗಳಲ್ಲಿ ಕುಳಿತು ವಿಷಣ್ಣನಾದನು. ಮತ್ತೆ ಉತ್ಸಾಹ ತಂದುಕೊಂಡು ಅತಿವೇಗದಿಂದ ಲಂಕೆಯ ಉಳಿದ ಭಾಗವನ್ನೆಲ್ಲಾ ಹುಡುಕುತ್ತ ಹೊರಟನು (೧). ಕಡೆಗೆ ಸೂರ್ಯನಂತೆ ಝಗಝಗಿಸುವ ಪ್ರಾಕಾರದಿಂದ ಪರಿವೃತವಾದ ರಾವಣನ ಅರಮನೆಯ ಬಳಿಗೆ ಬಂದನು (೨). ಆ ವಾನರಶ್ರೇಷ್ಠನು, ಸಿಂಹಗಳಿಂದ ರಕ್ಷಿತವಾದ ಅರಣ್ಯದಂತೆ, ಘೋರರಾಕ್ಷಸರಿಂದ ರಕ್ಷಿಸಲ್ಪಡುತ್ತಿದ್ದ ಅರಮನೆಯನ್ನು ಕಂಡನು. ಚಿನ್ನಬೆಳ್ಳಿಗಳಿಂದಲೇ ನಿರ್ಮಿತವಾಗಿ ಚಿತ್ರರಂಜಿತವಾದ ಬಾಗಿಲುಗಳಿಂದಲೂ ಚಿತ್ರಾಕೃತಿಯ ಕೋಣೆಗಳಿಂದಲೂ ಅದು ಶೋಭಿಸುತ್ತಿತ್ತು (೩–೪). ಆನೆ, ಕುದುರೆ, ರಥಗಳಲ್ಲಿ ಕುಳಿತ ಪ್ರಮುಖರಾದ ಅಧಿಕಾರಿಗಳು ಸುತ್ತಲೂ ಕಾವಲಾಗಿ ಸಂಚರಿಸುತ್ತಿದ್ದರು. ದಂತ, ಚಿನ್ನ, ಬೆಳ್ಳಿಗಳಿಂದ ನಿರ್ಮಿಸಿ, ಸಿಂಹ ವ್ಯಾಘ್ರಗಳ ಚರ್ಮವನ್ನು ಹೊದಿಸಿದ ರಥಗಳು ಸದಾ ತಿರುಗುತ್ತಿದ್ದವು. ರತ್ನಖಚಿತವಾಗಿ ಉತ್ತಮಪೀಠಗಳಿಂದಲೂ ಮಹಾರಥರ ಆಸನಗಳಿಂದಲೂ ಯುಕ್ತವಾಗಿ ಎಲ್ಲಿ ನೋಡಿದರೂ ಮಹಾರಥರಿಗೆ ವಾಸಸ್ಥಾನವಾಗಿತ್ತು (೫–೭). ಮನೋಹರ

ವಾದ ಸಾವಿರಾರು ಮೃಗಪಕ್ಷಿಗಳು ಎಲ್ಲೆಲ್ಲಿಯೂ ತುಂಬಿದ್ದವು. ಸುಶಿಕ್ಷಿತರಾದ ಕಾವಲುಗಾರರು ಹೊರಗಡೆ ಕಾವಲಾಗಿರಲು, ಒಳಗೆ ಉತ್ತಮ ಸ್ತ್ರೀಯರು ನೆರೆದಿದ್ದರು. ಆ ಸ್ತ್ರೀಯರ ಆಭರಣಧ್ವನಿಯು ಸಮುದ್ರಘೋಷದಂತೆ ಕೇಳಿ ಬರುತ್ತಿತ್ತು (೮–೧೦). ಅಲ್ಲಿ ರಾಜಚಿಹ್ನೆಗಳಾದ ಛತ್ರಚಾಮರಾದಿಗಳು ತುಂಬಿದ್ದು, ಶ್ರೇಷ್ಠವಾದ ಸುಗಂಧದ್ರವ್ಯಗಳು ಘಮಘಮಿಸುತ್ತಿದ್ದವು. ಭೇರಿ, ಶಂಖ ಮೊದಲಾದವು ಮೊಳಗುತ್ತಿದ್ದವು. ಸಿಂಹಗರ್ಜನೆಗಳಿಂದ ಕೂಡಿದ ಮಹಾರಣ್ಯದಂತೆ ಅದು ತೋರುತ್ತಿತ್ತು. ನಿತ್ಯಪೂಜೆಯಿಂದಲೂ ಹೋಮಾಗ್ನಿಯಿಂದಲೂ ಅರಮನೆಯು ಉಜ್ವಲವಾಗಿತ್ತು (೧೧–೧೨). ಮಹಾತ್ಮನಾದ ರಾವಣನ ಆ ವಿಶಾಲಭವನವು ಸಮುದ್ರದಂತೆ ಗಂಭೀರವೂ ನಿತ್ಯಘೋಷಯುಕ್ತವೂ ಮಹಾರತ್ನಾಲಂಕಾರಭೂಷಿತವೂ ಆಗಿದ್ದಿತು. ಆಂಜನೇಯನು ಅದನ್ನು ನೋಡಿ 'ಇದು ಲಂಕಾನಗರಕ್ಕೇ ಭೂಷಣಪ್ರಾಯವಾದುದು' ಎಂದು ಭಾವಿಸಿ, ಅದರ ಸಮೀಪದಲ್ಲಿರುವ ಇತರ ಭವನಗಳಲ್ಲಿ ಮೊದಲು ಸೀತೆಯನ್ನು ಹುಡುಕಲಾರಂಭಿಸಿದನು (೧೩–೧೫). ರಾಕ್ಷಸರ ಗೃಹಗಳನ್ನು ಒಂದೊಂದಾಗಿ ನುಗ್ಗಿ, ಉದ್ಯಾನವನಗಳಲ್ಲಿಯೂ ಮಹಡಿಗಳಲ್ಲಿಯೂ ನಿರ್ಭಯನಾಗಿ ತಿರುಗುತ್ತಿದ್ದನು. ಮಹಾವೇಗದಿಂದ ಪ್ರಹಸ್ತನ ಮನೆಗೆ ನುಗ್ಗಿ, ಮಹಾಪಾರ್ಶ್ವನ ಮನೆಯನ್ನು ಪ್ರವೇಶಿಸಿ, ಕುಂಭಕರ್ಣನ ಮನೆಗೆ ಬಂದನು. ಆಮೇಲೆ ವಿಭೀಷಣನ ಗೃಹಕ್ಕೆ ಪ್ರವೇಶಿಸಿ, ಮಹೋದರನ ಗೃಹವನ್ನು ನುಗ್ಗಿ, ವಿರೂಪಾಕ್ಷ, ವಿದ್ಯುಜ್ಜಿಹ್ವ, ವಿದ್ಯುನ್ಮಾಲಿಗಳ ಗೃಹಗಳನ್ನು ಶೋಧಿಸಿದನು. ಹಾಗೆಯೇ ವಜ್ರದಂಷ್ಟ್ರ, ಶುಕ, ಸಾರಣ, ಇಂದ್ರಜಿತು, ಜಂಬುಮಾಲಿ, ಸುಮಾಲಿ ಮುಂತಾದ ಬಹುಮಂದಿ ರಾಕ್ಷಸನಾಯಕರ ನಿವಾಸಗಳಿಗೂ ಹೋಗಿ ಹುಡುಕಿದನು (೧೬–೨೬). ಒಂದೊಂದು ಮನೆಯನ್ನು ದಾಟಿಹೋಗುತ್ತ ಅಲ್ಲಿಯ ರಾಕ್ಷಸರ ಐಶ್ವರ್ಯ, ವೈಭವಗಳನ್ನು ಕಣ್ಣಾರೆ ಕಂಡನು. ಆಮೇಲೆ ದಾನವೇಂದ್ರನಾದ ರಾವಣನ ಅರಮನೆಯ ಹೊರಪ್ರಾಕಾರವನ್ನು ಪ್ರವೇಶಿಸಿದನು (೨೭–೨೮). ಅಲ್ಲಿ ಶೂಲ ಮುದ್ಗರಾದಿ ವಿವಿಧಾಯುಧಗಳನ್ನು ಹಿಡಿದು ರಾಕ್ಷಸಸ್ತ್ರೀಯರೂ ಪುರುಷರೂ ಕಾವಲಿದ್ದರು. ಕೆಂಪು, ಬಿಳುಪು ಮುಂತಾದ ಬಣ್ಣಬಣ್ಣದ ವೇಗಶಾಲಿ ಕುದುರೆಗಳನ್ನು ಕಟ್ಟಿದ್ದರು. ಉತ್ತಮಜಾತಿಯ ಆನೆಗಳು ಮಳೆ ಸುರಿಸುವ ಮೋಡದಂತೆಯೂ, ಗಿರಿನದಿಗಳನ್ನು ಸ್ರವಿಸುವ

ಬೆಟ್ಟಗಳಂತೆಯೂ ಮದೋದಕವನ್ನು ಸುರಿಸುತ್ತ ಘೀಂಕಾರಮಾಡುತ್ತಿದ್ದವು (೨೯–೩೩). ಇವುಗಳನ್ನಲ್ಲದೆ ಹನುಮಂತನು ಚಿನ್ನದಿಂದ ಅಲಂಕರಿಸಿದ ವಿವಿಧಾಕೃತಿಯ ಪಲ್ಲಕ್ಕಿಗಳನ್ನು ಕಂಡನು. ನಾನಾರೂಪದ ಲತಾಗೃಹಗಳನ್ನೂ ಚಿತ್ರಶಾಲೆಗಳನ್ನೂ ಕ್ರೀಡಾಗೃಹಗಳನ್ನೂ ಮರದಿಂದ ಮಾಡಿದ ಕ್ರೀಡಾಪರ್ವತ ಗಳನ್ನೂ ಹಗಲಿನ ವಿಹಾರಕ್ಕಾಗಿ ಕಟ್ಟಿದ ವಿವಿಧ ಗೃಹಗಳನ್ನೂ ನೋಡಿದನು (೩೪–೩೭). ಅವುಗಳನ್ನು ನೋಡುತ್ತ ಹೋಗುತ್ತಿದ್ದ ಹನುಮಂತನಿಗೆ ಮಂದರಗಿರಿಯಂತಿದ್ದ ಒಂದು ದೊಡ್ಡ ಭವನವು ಕಾಣಿಸಿತು. ಅದು ನವಿಲು ಗಳ ಕ್ರೀಡಾಸ್ಥಾನಗಳಿಂದಲೂ, ಧ್ವಜಗಳಿಂದಲೂ, ರತ್ನಗಳಿಂದಲೂ, ನವನಿಧಿ ಗಳಿಂದಲೂ ಶೋಭಿಸುತ್ತಿತ್ತು. ಅದು ಶಿಲ್ಪಕಲೆಗಳ ಬೀಡು. ವಿವಿಧ ರತ್ನ ಗಳ ಕಾಂತಿಯಿಂದಲೂ ರಾವಣನ ತೇಜಸ್ಸಿನಿಂದಲೂ ಪರಮೇಶ್ವರನ ಕೈಲಾಸ ದಂತೆ–ಸೂರ್ಯಮಂಡಲದಂತೆ–ಪ್ರಜ್ವಲಿಸುತ್ತಿದ್ದಿತು (೩೮–೪೦). ಅಲ್ಲಿದ್ದ ಮಂಚ, ಪೀಠ, ಪಾತ್ರೆಗಳೆಲ್ಲವೂ ಚಿನ್ನದವು. ಮದ್ಯಪಾತ್ರೆಗಳಿಂದಲೂ ಮದ್ಯರಸಗಳಿಂದಲೂ ಅದು ನಿಬಿಡವಾಗಿತ್ತು. ರಮಣೀಯವೂ ಅತಿವಿಶಾಲವೂ ಆಗಿದ್ದ ಆ ಭವನವು ಕುಬೇರಭವನದಂತೆ ವಿರಾಜಿಸುತ್ತಿದ್ದಿತ್ತು. ಕಾಂಚೀ ನೂಪುರಗಳ ಮನೋಹರನಾದವೂ ವಾದ್ಯಧ್ವನಿಯೂ ಕೇಳಿಸುತ್ತಿದ್ದಿತು. ಅನೇಕ ಉಪ್ಪರಿಗೆಗಳಿಂದಲೂ ಅಸಂಖ್ಯಾತ ಸುಂದರಿಯರಿಂದಲೂ ಮನೋಹರ ವಾದ ಆ ದಿವ್ಯಭವನದ ಒಳಪ್ರಾಕಾರವನ್ನು ಹನುಮಂತನು ಪ್ರವೇಶಿಸಿದನು (೪೧–೪೪).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಆರನೆಯ ಸರ್ಗ

---

## ಸರ್ಗ ೭

ಆಂಜನೇಯನು ಅರಮನೆಯ ಪ್ರಾಕಾರದಲ್ಲಿ ಹುಡುಕುತ್ತ ಪುಷ್ಪಕವಿಮಾನವನ್ನು ಕಂಡುದು.

ಅನಂತರ ಆಂಜನೇಯನು ಆ ನಿವೇಶನದಲ್ಲಿ ನಿರ್ಮಿಸಿದ್ದ ಅನೇಕ ಗೃಹ ಗಳನ್ನು ನೋಡಿದನು. ವೈಡೂರ್ಯಾದಿ ಮಣಿಗಳ ಕುಚ್ಚಿನಿಂದಲೂ ಸುವರ್ಣದ

ಗವಾಕ್ಷದಿಂದಲೂ ರಂಜಿಸುತ್ತಿದ್ದ ಆ ಭವನಗಳು, ವಿವಿಧ ಪಕ್ಷಿಗಳಿಂದಲೂ ವಿದ್ಯುತ್ತಿನಿಂದಲೂ ಬೆಳಗುವ ಮೇಘಪಂಕ್ತಿಗಳಂತೆ ಕಾಣುತ್ತಿದ್ದವು. ಅಲ್ಲಿ ಶಂಖ, ಧನುಸ್ಸು ಮತ್ತು ಆಯುಧಗಳನ್ನು ತುಂಬಿದ ದೊಡ್ಡ ಕೋಣೆಗಳೂ, ವಿಶಾಲವಾದ ಚಂದ್ರಶಾಲೆಗಳೂ ಇದ್ದವು (೧–೨). ಆ ಭವನಗಳು ಶಿಲ್ಪಶಾಸ್ತ್ರದ ಪ್ರಕಾರ ನಿರ್ದೋಷವಾಗಿದ್ದವು. ಅವೆಲ್ಲವೂ ರಾವಣನ ಭುಜಬಲದಿಂದ ಸಂಪಾದಿಸಲ್ಪಟ್ಟವು. ಮಾಯಾದಕ್ಷನಾದ ಮಯನೇ ಅವುಗಳನ್ನು ಮಾಯೆಯಿಂದ ನಿರ್ಮಿಸಿರುವನೋ ಎಂಬಂತೆ ರಮಣೀಯವಾಗಿದ್ದವು (೩–೪). ಅವುಗಳನ್ನು ನೋಡುತ್ತ ಮುಂದೆ ಬಂದು ರಾಕ್ಷಸರಾಜನ ಪರಾಕ್ರಮಕ್ಕೆ ಅನುರೂಪವೂ, ಅತ್ಯುನ್ನತವೂ, ಅಸದೃಶವೂ ಆದ ಪುಷ್ಪಕವಿಮಾನವನ್ನು ಕಂಡನು (೫). ಅದು ಭೂಮಿಗೆ ಇಳಿದುಬಂದ ಸ್ವರ್ಗವೋ ಎಂಬಂತೆ ರತ್ನಗಳಿಂದಲೂ ನಾನಾ ಕುಸುಮಗಳಿಂದಲೂ ಶೋಭಿಸುತ್ತಿದ್ದಿತು. ಪರ್ವತಶೃಂಗದಲ್ಲಿ ಹೂಗಳು ಚೆಲ್ಲಿರುವಂತೆ, ಎಲ್ಲೆಲ್ಲಿಯೂ ಪುಷ್ಪಪರಾಗಗಳು ಹರಡಿದ್ದವು. ವಿದ್ಯುಲ್ಲತೆಗಳಿಂದ ಶೋಭಿಸುವ ಮೇಘದಂತೆ, ಸುಂದರ ಸ್ತ್ರೀಯರಿಂದ ರಮಣೀಯವಾಗಿತ್ತು. ರಾಜಹಂಸಗಳು ಹೊತ್ತುಕೊಂಡು ಹಾರುತ್ತಿರುವ ಪುಣ್ಯಾತ್ಮರ ವಿಮಾನವೋ ಎಂಬಂತೆ ಕಾಂತಿಯುಕ್ತವಾಗಿತ್ತು (೬–೭). ರತ್ನಾಲಂಕೃತವಾದ ಆ ಪುಷ್ಪಕವಿಮಾನವು ಬಣ್ಣಬಣ್ಣದ ಧಾತುಗಳಿಂದ ಚಿತ್ರವರ್ಣವಾದ ಪರ್ವತಶಿಖರದಂತೆಯೂ, ಚಂದ್ರಾದಿಗ್ರಹಗಳಿಂದ ಪೂರ್ಣವಾದ ಗಗನದಂತೆಯೂ, ಹಲವು ಬಣ್ಣಗಳ ಮೇಘಪಂಕ್ತಿಯಂತೆಯೂ ರಮ್ಯವಾಗಿತ್ತು (೮). ಅದರ ನೆಲದಮೇಲೆ ಕೃತಕಶೈಲಗಳೂ ಶೈಲಗಳಲ್ಲಿ ವೃಕ್ಷಗಳೂ ವೃಕ್ಷಗಳಲ್ಲಿ ಹೂಗಳೂ ಹೂಗಳಲ್ಲಿ ಎಸಳುಗಳೂ ಬಹು ಸುಂದರವಾಗಿ ನಿರ್ಮಿಸಲ್ಪಟ್ಟಿದ್ದವು (೯). ಅದರಲ್ಲಿ ಬೆಳ್ಳನೆಯ ಉಪ್ಪರಿಗೆಯ ಮನೆಗಳೂ ಅಂದವಾದ ಹೂಗಳುಳ್ಳ ಕೊಳಗಳೂ ತಾವರೆಗಳೂ ವಿಚಿತ್ರವಾದ ವನಗಳೂ ನಿರ್ಮಿಸಲ್ಪಟ್ಟಿದ್ದವು (೧೦). ರತ್ನಪ್ರಭೆಯಿಂದ ಮಿರುಗುತ್ತಿದ್ದ ಪುಷ್ಪಕವೆಂಬ ಆ ದೊಡ್ಡ ವಿಮಾನವನ್ನು ಆಂಜನೇಯನು ಗಮನವಿಟ್ಟು ನೋಡಿದನು. ಅದರಲ್ಲಿ ವೈಡೂರ್ಯ, ಬೆಳ್ಳಿ, ಹವಳಗಳನ್ನುಪಯೋಗಿಸಿ ಬಗೆಬಗೆಯ ಮನೋಹರ ಪಕ್ಷಿಗಳನ್ನೂ ವಿವಿಧ ರತ್ನಗಳಿಂದ ಸರ್ಪಗಳನ್ನೂ ಕುದುರೆಗಳನ್ನೂ ರಚಿಸಿದ್ದರು. ಹವಳ, ಚಿನ್ನ ಮತ್ತು ಹೂಗಳಿಂದ ಹಕ್ಕಿಗಳಿಗೆ ಸೊಗಸಾದ ರೆಕ್ಕೆಗಳನ್ನೂ

ಕೊಕ್ಕುಗಳನ್ನೂ ಮಾಡಿದ್ದರು (೧೧–೧೩). ಒಂದು ಕೊಳದಲ್ಲಿ ಕಮಲದ ಮೇಲೆ ಪದ್ಮಹಸ್ತಳಾಗಿ ನಿಂತಿದ್ದ ಲಕ್ಷ್ಮೀದೇವಿಯ ಚಿತ್ರ ಮನೋಜ್ಞವಾಗಿತ್ತು. ಅದರಲ್ಲಿ ಆನೆಗಳು ಇಕ್ಕೆಡೆಯಲ್ಲಿಯೂ ನಿಂತು, ಸೊಂಡಿಲುಗಳಲ್ಲಿ ನೈದಿಲೆಗಳನ್ನು ಹಿಡಿದು, ದೇವಿಗೆ ಅಭಿಷೇಕಮಾಡಿಸುತ್ತಿದ್ದವು (೧೪). ವಸಂತಕಾಲದ ಪರ್ವತದಂತೆ ಪರಮ ರಮಣೀಯವೂ, ಸುಗಂಧಪೂರ್ಣವೂ ಆದ ವಿಮಾನವನ್ನು ಕಂಡು ಹನುಮಂತನಿಗೆ ಅಶ್ಚರ್ಯವಾಯಿತು (೧೫). ಆದರೆ ಎಲ್ಲೆಲ್ಲಿ ತಿರುಗಿದರೂ ಪರಮಪೂಜ್ಯಳೂ, ತನ್ನ ಪತಿಯ ಸದ್ಗುಣಗಳನ್ನೇ ಧ್ಯಾನಿಸುವವಳೂ ಆದ ಜನಕಸುತೆಯನ್ನು ಕಾಣದೆ ಹನುಮಂತನು ದುಃಖಿತನಾದನು (೧೬). ಶುದ್ಧಮನಸ್ಕನೂ, ನಿಶಿತಬುದ್ಧಿಯೂ, ನೀತಿಜ್ಞನೂ ಆದ ಆ ಮಹಾತ್ಮನು ಕಣ್ಣಿಟ್ಟು ಹುಡುಕಿದರೂ ಸೀತೆಯು ದೊರಕಲಿಲ್ಲವಾದ್ದರಿಂದ ಚಿಂತಾಕ್ರಾಂತನಾದನು (೧೭).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಏಳನೆಯ ಸರ್ಗ

---

## ಸರ್ಗ ೮

ಆಂಜನೇಯನು ಪುಷ್ಪಕವಿಮಾನದ ಸೌಂದರ್ಯವನ್ನು ನೋಡುವುದು.

ಆ ವಾಯುಪುತ್ರನು ಮನೋಹರವಾದ ಪುಷ್ಪಕವಿಮಾನವನ್ನು ಮತ್ತೆ ನೋಡುತ್ತ ನಿಂತನು. ಊಹಾತೀತವಾದ ಅದರ ಸೊಬಗನ್ನು ವರ್ಣಿಸಲು ಅಳವಲ್ಲ. ಅದನ್ನು ನಿರ್ಮಿಸಿದ ವಿಶ್ವಕರ್ಮನು 'ಭಲಾ ! ಎಷ್ಟು ಚೆನ್ನಾಗಿದೆ ! ' ಎಂದು ತಾನೇ ಹೊಗಳಿಕೊಂಡಿದ್ದನು. ಅದು ಭೂಸ್ಪರ್ಶವಿಲ್ಲದೆ ಆಕಾಶದಲ್ಲಿ ನಿಂತು, ಸೂರ್ಯಸಂಚಾರಮಾರ್ಗದ ಸೂಚಕವೋ ಎಂಬಂತಿದ್ದಿತು (೧–೨). ಅದರಲ್ಲಿದ್ದ ಒಂದೊಂದು ಭಾಗವೂ ಬಹು ಕಷ್ಟಪಟ್ಟು ನಿರ್ಮಿಸಿದ್ದು. ಮಹಾರತ್ನವಿಲ್ಲದ ಒಂದು ಕೆತ್ತನೆಯಾಗಲಿ ವೈಶಿಷ್ಟ್ಯವಿಲ್ಲದ ಒಂದು ವಸ್ತುವಾಗಲಿ ಅದರಲ್ಲಿರಲಿಲ್ಲ. ದೇವತೆಗಳಿಗೂ ಆ ವಸ್ತುಗಳು ದುರ್ಲಭ (೩). ರಾವಣನು ತಪೋಬಲದಿಂದ ಸಾಮರ್ಥ್ಯವನ್ನು ಗಳಿಸಿ ಅದನ್ನು ಗೆದ್ದುತಂದಿದ್ದನು.

ಬಯಸಿದ ಸ್ಥಳಕ್ಕೆ ಹೊತ್ತು ತಂದುಬಿಡುವ ಮಹಿಮೆಯುಳ್ಳದ್ದಾಗಿ, ವಿಮಾನ ಯೋಗ್ಯವಾದ ಅನೇಕ ರಚನೆಗಳಿಂದ ಅದು ರಂಜಿಸುತ್ತಿತ್ತು (೪). ಅದು ಸ್ವಾಮಿಯ ಮನೋಧರ್ಮವನ್ನರಿತು ವಾಯುವೇಗದಿಂದ ಸಂಚರಿಸಬಲ್ಲುದು. ಭಾಗ್ಯಶಾಲಿಗಳಿಗೆ ಮಾತ್ರ ಅಂತಹ ವಿಮಾನ ಲಭ್ಯ (೫). ಆ ವಿಮಾನವು ಗಿರಿಯಂತೆ ಅನೇಕ ಶೃಂಗಯುಕ್ತವಾಗಿ, ಶರಚ್ಚಂದ್ರನಂತೆ ಬೆಳ್ಳಗೆ ಮನೋಹರ ವಾಗಿತ್ತು (೬). ಅದನ್ನು ಮಹಾವೇಗದಿಂದ ಹೊತ್ತುಕೊಂಡು ಹೋಗು ವಂತೆ ಕಾಣುವ ಅನೇಕ ಭೂತಪ್ರತಿಮೆಗಳು ಸುತ್ತಲೂ ಚಿತ್ರಿಸಲ್ಪಟ್ಟಿದ್ದವು. ಕುಂಡಲಾಲಂಕೃತಗಳಾದ ಆ ಪ್ರತಿಮೆಗಳ ವಿಶಾಲನೇತ್ರಗಳು ದುಂಡಾಗಿಯೂ ನಿಮೇಷರಹಿತವಾಗಿಯೂ ಇದ್ದವು. ಆ ವಾನರವೀರನು ವಸಂತಕಾಲದ ಪುಷ್ಪ ಗಳ ರಾಶಿಯಂತೆಯೂ, ವಸಂತಕಾಲಕ್ಕಿಂತ ಮನೋಹರವಾಗಿಯೂ ಇದ್ದ ಆ ಪುಷ್ಪಕವಿಮಾನವನ್ನು ನೋಡುತ್ತಿದ್ದನು (೭–೮).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಎಂಟನೆಯ ಸರ್ಗ

---

## ಸರ್ಗ ೯

ಪುಷ್ಪಕವಿಮಾನದ ವರ್ಣನೆ. ರಾವಣಾಂತಃಪುರದಲ್ಲಿ ನಿದ್ರಿಸುತ್ತಿದ್ದ ಸ್ತ್ರೀಯರ ಮಧ್ಯದಲ್ಲಿ ಸೀತೆಯನ್ನು ಹುಡುಕಿದುದು.

ಹೀಗೆ ಹನುಮಂತನು ಸೀತಾದೇವಿಯನ್ನು ಹುಡುಕುತ್ತ ಅರ್ಧಯೋಜನ ದಷ್ಟು ವಿಸ್ತೀರ್ಣವಾಗಿ, ಒಂದು ಯೋಜನದಷ್ಟು ಉದ್ದವಾಗಿ, ಅನೇಕ ಅಂತಸ್ತು ಗಳಿರುವ ಒಂದು ದೊಡ್ಡ ಭವನದ ಬಳಿಗೆ ಬಂದನು. ಅದೇ ರಾಕ್ಷಸೇಂದ್ರನು ವಾಸಮಾಡುವ ಅರಮನೆ (೧–೪). ಅದರ ಸುತ್ತಲೂ ಎರಡು, ಮೂರು, ನಾಲ್ಕು ಕೋರೆಗಳುಳ್ಳ ಆನೆಗಳೂ ಆಯುಧಧಾರಿಗಳಾದ ರಾಕ್ಷಸರೂ ಕಾವಲಿದ್ದರು (೫). ರಾವಣನ ಹೆಂಡಿರಾದ ರಾಕ್ಷಸಿಯರಿಂದಲೂ ಬಲಾತ್ಕಾರವಾಗಿ ತಂದ ರಾಜಕುಮಾರಿಯರಿಂದಲೂ ತುಂಬಿದ ಆ ಭವನವು ಮೊಸಳೆ, ತಿಮಿಂಗಿಲ, ಸರ್ಪ ಗಳಿಂದ ಪೂರ್ಣವಾದ ಮಹಾಸಾಗರದಂತೆ ಇದ್ದಿತು (೬–೭). ಕುಬೇರ, ದೇವೇಂದ್ರ ಮುಂತಾದವರ ಭವನಗಳಲ್ಲಿ ಇರುವುದಕ್ಕಿಂತಲೂ ಅಧಿಕವಾದ

ಐಶ್ವರ್ಯಸಮೃದ್ಧಿಯು ರಾವಣಭವನದಲ್ಲಿ ನೆಲೆಸಿತ್ತು. 'ಯಮವರುಣರ ಸಂಪತ್ತಿಗಿಂತ ರಾಕ್ಷಸೇಶ್ವರನಾದ ರಾವಣನ ಗೃಹದಲ್ಲಿದ್ದ ಸಂಪತ್ತು ಮಿಗಿಲಾದುದು (೮–೯). ಆ ಭವನದ ಮಧ್ಯಭಾಗದಲ್ಲಿ ಅನೇಕ ಮತ್ತವಾರಣಗಳಿಂದ (ಶೃಂಖಲಾಕಾರವಾಗಿ ಸುತ್ತಲೂ ಚಿತ್ರಿಸಿದ ಆನೆಯ ಪ್ರತಿಮೆಗಳಿಂದ) ಅಲಂಕೃತವಾದ ರಾವಣನ ಶಯನಮಂದಿರವನ್ನು ಕಂಡನು (೧೦). ಅದು ಬ್ರಹ್ಮನಿಗಾಗಿ ವಿಶ್ವಕರ್ಮನು ನಿರ್ಮಿಸಿದ ಸರ್ವರತ್ನಭೂಷಿತವಾದ ಪುಷ್ಪಕ ವಿಮಾನ.* ಕುಬೇರನು ತಪಸ್ಸಿನಿಂದ ಬ್ರಹ್ಮನನ್ನು ಮೆಚ್ಚಿಸಿ ಅದನ್ನು ಪಡೆದನು. ರಾವಣನು ಕುಬೇರನನ್ನು ಜಯಿಸಿ ಅದನ್ನು ತನ್ನ ವಶಪಡಿಸಿಕೊಂಡಿದ್ದನು (೧೧–೧೨). ಆ ವಿಮಾನದ ಕಂಭಗಳಲ್ಲಿ ಸುವರ್ಣಮಯವಾದ ತೋಳದ ಪ್ರತಿಮೆಗಳನ್ನು ಕೆತ್ತಿದ್ದರು. ಅದರ ಅಂತಸ್ತುಗಳು ಮೇರುಮಂದರ ಪರ್ವತಗಳಂತೆ ಬಹು ಎತ್ತರವಾಗಿದ್ದು ಆಕಾಶವನ್ನು ಭೇದಿಸುವಂತೆ ಇದ್ದವು (೧೩–೧೪). ಸೂರ್ಯಾಗ್ನಿಗಳಂತೆ ಪ್ರಕಾಶಿಸುತ್ತಿದ್ದ ಪುಷ್ಪಕವಿಮಾನಕ್ಕೆ ಚಿನ್ನದ ಮೆಟ್ಟಲುಗಳೂ ಸುಂದರ ವೇದಿಕೆಗಳೂ ಇದ್ದವು. ಚಿನ್ನ ಮತ್ತು ಸ್ಫಟಿಕಗಳಿಂದ ರಚಿಸಿದ ಕಿಟಕಿಗಳೂ, ಇಂದ್ರನೀಲ, ಮಹಾನೀಲ, ಹವಳ, ಮುತ್ತು ಮುಂತಾದ ಮಣಿಗಳಿಂದ ಚಿತ್ರಿಸಿದ ನೆಲಗಟ್ಟುಗಳೂ ಇದ್ದವು. ಅದು ಬಂಗಾರದ ಬಣ್ಣವುಳ್ಳ ರಕ್ತಚಂದನದಿಂದ ಸುಗಂಧಮಯವಾಗಿತ್ತು (೧೫–೧೮). ಹನುಮಂತನು ಆ ವಿಮಾನವನ್ನೇರಿದನು. ಅಲ್ಲಿದ್ದ ವಿವಿಧ ಪಾನೀಯಗಳಿಂದಲೂ, ಭಕ್ಷ್ಯಗಳಿಂದಲೂ, ಮೃಷ್ಟಾನ್ನಗಳಿಂದಲೂ ರೂಪವೆತ್ತು ಬಂದಂತೆ ಇದ್ದ ಸುಗಂಧಿಯಾದ ವಾಯುವು ಹನುಮಂತನನ್ನು ಬಂಧುವಿನಂತೆ ಎದುರುಗೊಂಡು 'ಇತ್ತ ಬರಬೇಕು!' ಎಂದು ರಾವಣನಿದ್ದಲ್ಲಿಗೆ ಕರೆದುಕೊಂಡು ಹೋಗುವಂತೆ ತೋರಿತು ! (೧೯–೨೦). ಅನಂತರ ಆಂಜನೇಯನು ಮಣಿಮಯ ಸೋಪಾನಗಳಿಂದಲೂ ಚಿನ್ನದ ಕಿಟಕಿಗಳಿಂದಲೂ ಸುವರ್ಣಾಲಂಕೃತವಾಗಿ ರಮ್ಯವಾದ ರಾವಣನ ಅಂತಃಪುರವನ್ನು ಪ್ರವೇಶಿಸಿದನು. ಅದು ರಾವಣನಿಗೆ ಸುಂದರ ತರುಣಿಯಂತೆ ಬಹು ಪ್ರಿಯವಾದ ಸ್ಥಳ (೨೧–೨೨). ಅಲ್ಲಿ ಸ್ಫಟಿಕಮಯವಾದ ನೆಲಗಟ್ಟು; ನಾಗದಂತಗಳಿಂದ ಅಲಂಕರಿಸಿದ ಗೋಡೆಗಳು;

* ೭–೮ನೆಯ ಸರ್ಗಗಳಲ್ಲಿ ಈ ವಿಮಾನವನ್ನೇ ವಿಶೇಷವಾಗಿ ವರ್ಣಿಸಲಾಗಿದೆ. ಪ್ರಾಯಶಃ ಅವೆರಡು ಸರ್ಗಗಳು ಪ್ರಕ್ಷಿಪ್ತವಾಗಿರಬಹುದು.

ಮುತ್ತು, ಹವಳ, ಚಿನ್ನ, ಬೆಳ್ಳಿಗಳಿಂದ ಅಲಂಕರಿಸಿದ ಮಣಿಸ್ತಂಭಗಳು; ಆ ಸ್ತಂಭಗಳು ಅತ್ಯುನ್ನತವಾಗಿದ್ದವು. ರೆಕ್ಕೆಗಳಂತಿರುವ ದೊಡ್ಡದಾದ ಅಡ್ಡ ತೊಲೆಗಳಿಂದ ಅಂತಃಪುರವು ಆಕಾಶಕ್ಕೆ ಹಾರಿಹೋಗುವುದೋ ಎಂಬಂತೆ ತೋರುತ್ತಿತ್ತು. ವಿಶಾಲವಾದ ಅಂಗಣದ ಮಧ್ಯದಲ್ಲಿ ನದಿ, ಅರಣ್ಯ ಮುಂತಾದವುಗಳನ್ನು ಚಿತ್ರಿಸಿದ ದೊಡ್ಡ ದೊಡ್ಡ ರತ್ನಗಂಬಳಿಯನ್ನು ಹಾಸಿದ್ದರು (೨೩–೨೫). ವಿವಿಧ ರಾಷ್ಟ್ರಗಳಿಂದಲೂ ಗೃಹಗಳಿಂದಲೂ ಶೋಭಿಸುವ ಇನ್ನೊಂದು ಪೃಥ್ವಿಯೋ ಎಂಬಂತೆ ವಿಶಾಲವಾಗಿದ್ದ ಆ ಭವನದಲ್ಲಿ, ಅಲ್ಲಲ್ಲಿ ಮದಿಸಿದ ಹಕ್ಕಿಗಳು ಚಿಲಿಪಿಲಿಗುಟ್ಟುತ್ತಿದ್ದವು. ಇಡೀ ಮಂದಿರವೇ ಸುಗಂಧ ದಿಂದ ತುಂಬಿಹೋಗಿತ್ತು (೨೬). ಆ ಭವನದಲ್ಲಿ ಕುಳಿತುಕೊಳ್ಳಲು ಅಮೂಲ್ಯ ವಾದ ಪೀಠಗಳನ್ನು ಹಾಕಿದ್ದರು. ಹಂಸದಂತೆ ಶುಭ್ರವಾದ ಆ ಸ್ಥಳದಲ್ಲಿ ಧೂಪದ ಹೊಗೆಯು ಹರಡಿತ್ತು. ಬಣ್ಣಬಣ್ಣದ ಹೂಗಳನ್ನು ಹರಡಿದ್ದರಿಂದ ನೆಲವು ಚಿತ್ರವರ್ಣವಾಗಿ ವಸಿಷ್ಠಧೇನುವಾದ ಶಬಲೆಯಂತೆ ಇತ್ತು. ತನ್ನ ಕಾಂತಿಯಿಂದ ಬಣ್ಣದ ಚಿತ್ರಗಳಿಗೇ ಒಂದು ಪ್ರಸನ್ನತೆಯನ್ನು ಕೊಡತಕ್ಕ ರಮಣೀಯತೆ ಅದಕ್ಕಿತ್ತು (೨೭–೨೮). ರಾವಣನ ಅಂತಃಪುರವು ನೋಡಿದ ಕೂಡಲೆ ಮನಸ್ಸಿನ ತಾಪವನ್ನು ಪರಿಹರಿಸತಕ್ಕದಾಗಿ ಸೌಭಾಗ್ಯದ ತವರುಮನೆ ಯಾಗಿತ್ತು. ಅದು ಹನುಮಂತನ ಪಂಚೇಂದ್ರಿಯಗಳನ್ನೂ ತಾಯಿಯಂತೆ ತೃಪ್ತಿಪಡಿಸಿತು. 'ಇದೇನು ಸ್ವರ್ಗಲೋಕವೊ, ಅಮರಾವತಿಯೊ ಅಥವಾ ಇಂದ್ರಜಾಲದಿಂದ ಲಭಿಸಿದ ಸಿದ್ಧಿಯೊ!' ಎಂದು ಆಂಜನೇಯನಿಗೆ ಆಶ್ಚರ್ಯ ವಾಯಿತು (೨೯–೩೧). ದೊಡ್ಡ ಜೂಜುಖೋರರಿಂದ ಜೂಜಿನಲ್ಲಿ ಸೋತ ವರು ಚಿಂತಾಕುಲರಾಗಿ ಅಲ್ಲಾಡದೆ ನಿಂತಿರುವಂತೆ, ಸುವರ್ಣದೀಪಗಳು ನಿಶ್ಚಲ ವಾಗಿ ಪ್ರಕಾಶಿಸುತ್ತಿದ್ದವು. ದೀಪಗಳ ಪ್ರಕಾಶದಿಂದಲೂ, ರಾವಣನ ತೇಜಸ್ಸಿ ನಿಂದಲೂ, ಆಭರಣಗಳ ಕಾಂತಿಯಿಂದಲೂ ಅಂತಃಪುರವು ಪ್ರಜ್ವಲಿಸುತ್ತಿತ್ತು (೩೨–೩೩). ಅನಂತರ ಹನುಮಂತನು, ನಾನಾ ವಸ್ತ್ರಾಲಂಕಾರಗಳನ್ನು ಧರಿಸಿ ರತ್ನಗಂಬಳಿಯ ಮೇಲೆ ಮಲಗಿದ್ದ ಸಾವಿರಾರು ಸ್ತ್ರೀಯರನ್ನು ನೋಡಿ ದನು. ಅವರೆಲ್ಲರೂ ಬಹು ಹೊತ್ತು ಕ್ರೀಡಿಸುತ್ತಿದ್ದು, ಮಧ್ಯರಾತ್ರಿಯಾದ ಮೇಲೆ ಮದ್ಯಪಾನದ ಅಮಲಿನಿಂದ ಮೈಮರೆತು ನಿದ್ರಿಸುತ್ತಿದ್ದರು. ಒಡವೆಗಳ ಸದ್ದು ಅಡಗಿತ್ತು. ರಾತ್ರಿಯ ಹೊತ್ತು ಹಂಸ, ದುಂಬಿಗಳ ಶಬ್ದವಿಲ್ಲದೆ

*

ಶಾಂತವಾದ ತಾವರೆಯ ಕೊಳದಂತೆ ಅಂತಃಪುರವು ಕಾಣಿಸಿತು (೩೪–೩೫). ಬಾಯನ್ನು ತೆರೆಯದೆ, ಕಣ್ಣು ಮುಚ್ಚಿಕೊಂಡು ನಿದ್ರಿಸುತ್ತಿದ್ದ ಆ ಸ್ತ್ರೀಯರ ಮುಖಕಮಲಗಳನ್ನು ಹನುಮಂತನು ನೋಡುತ್ತ ಹೋದನು. 'ಈ ಮುಖ ಪದ್ಮಗಳು ಹಗಲುಹೊತ್ತು ಅರಳಿ ಈಗ ಮುಚ್ಚಿಕೊಂಡಿವೆ. ಇವು ಅರಳಿದಾಗ ನಿಜವಾಗಿಯೂ ದುಂಬಿಗಳು ಬಂದು ಮತ್ತೆ ಮುತ್ತಿಕೊಳ್ಳುತ್ತವೆ!' ಎಂದು ಅವನು ಭಾವಿಸಿದನು. ಏಕೆಂದರೆ, ಆ ಚೆಲುವೆಯರ ಮುಖಗಳು ಎಲ್ಲ ಬಗೆಯಲ್ಲಿಯೂ ತಾವರೆಗಳಿಗೆ ಸಮವಾಗಿದ್ದವು (೩೬–೩೯). ಆ ಭವನಾಂಗಣವು ಶರತ್ಕಾಲದಲ್ಲಿ ನಕ್ಷತ್ರಪುಂಜಗಳಿಂದ ರಂಜಿಸುವ ಗಗನತಲದಂತೆ ಆ ಸ್ತ್ರೀಯರಿಂದ ಶೋಭಿಸುತ್ತಿದ್ದಿತು. ಸುಂದರಾಂಗನಾಪರಿವೃತನಾದ ರಾಕ್ಷಸರಾಜನು, ತಾರಾಪರಿವಾರದಿಂದೊಡಗೂಡಿದ ಚಂದ್ರನೆಂದೂ, ಆ ಸ್ತ್ರೀಯರು ಪುಣ್ಯಶೇಷವಿರುವಾಗಲೇ ಭೂಮಿಗೆ ಉರುಳಿದ ತಾರೆಗಳೆಂದೂ ಹನುಮಂತನು ತಿಳಿದುಕೊಂಡನು (೪೦–೪೨). ಏಕೆಂದರೆ, ಅವರ ದೇಹಕಾಂತಿಯು ನಕ್ಷತ್ರಗಳ ಕಾಂತಿಯಂತೆಯೇ ಇತ್ತು. ಆ ಪ್ರಮದೆಯರು ಮದ್ಯಪಾನಮಾಡಿ ನೃತ್ಯಾದಿ ಕ್ರೀಡೆಗಳನ್ನು ಮಾಡುತ್ತಿರುವಾಗ ಹೂಮಾಲೆ, ಜಡೆ, ಒಡವೆಗಳು ಜಾರಿ ಸಡಿಲವಾಗಲು, ಹಾಗೆಯೇ ಮೈಮರೆತು ನಿದ್ರಿಸುತ್ತಿದ್ದರು. ಕೆಲವರ ತಿಲಕಗಳು ಓರೆಯಾಗಿದ್ದವು. ಕೆಲವರ ಕಾಲಂದಿಗೆಗಳು ದೂರ ಹೋಗಿ ಬಿದ್ದಿದ್ದವು (೪೩–೪೫). ಕೆಲವರ ಮುತ್ತಿನಹಾರಗಳು ಜಾರಿಬಿದ್ದಿದ್ದವು. ಕೆಲವರು ಅವುಗಳನ್ನು ಮೈಗೆ ಸುತ್ತಿಕೊಂಡಿದ್ದರು. ಕೆಲವರ ಸೀರೆ ಸಡಿಲಿತ್ತು. ಕೆಲವರ ಬಳಿ ಕಾಂಚಿಗಳು (ಡಾಬು) ಉರುಳಿಬಿದ್ದಿದ್ದವು. ಅವರನ್ನು ನೋಡಿದರೆ, ಹೆಣ್ಣು ಕುದುರೆಗಳು ಆಯಾಸವನ್ನು ಪರಿಹರಿಸಿಕೊಳ್ಳುವುದಕ್ಕಾಗಿ, ಜೀನನ್ನು ಬೀಳಿಸಿ ಉರುಳಾಡುತ್ತಿರುವುವೋ ಎಂಬಂತೆ ಕಾಣುತ್ತಲಿತ್ತು. ಕೆಲವರ ಕುಂಡಲಗಳು ಜಾರಿಬಿದ್ದು, ಅದರ ಹೂಮಾಲೆಗಳು ತೀಡಿಹೋದ್ದರಿಂದ, ಆ ಸ್ತ್ರೀಯರು ಆನೆಯು ಎಳೆದುಹಾಕಿದ ಬಳ್ಳಿಗಳಂತೆ ಕಾಣುತ್ತಿದ್ದರು. ಕೆಲವು ತರುಣಿಯರ ಸ್ತನಮಧ್ಯದಲ್ಲಿದ್ದ ದೊಡ್ಡಹಾರಗಳೂ ವೈಡೂರ್ಯಮಣಿಗಳೂ ನಿದ್ರಿಸುತ್ತಿರುವ ಹಂಸಗಳಂತೆ ಶೋಭಿಸುತ್ತಿದ್ದವು (೪೬–೪೯). ಇನ್ನು ಕೆಲವು ಸ್ತ್ರೀಯರು ಸುವರ್ಣಹಾರವನ್ನು ಧರಿಸಿದ್ದರಿಂದ ಅವರ ಸ್ತನಗಳು ಚಕ್ರವಾಕ ಪಕ್ಷಿಗಳಂತೆಯೂ, ಜಘನಗಳು ಪುಲಿನ (ಮರಳುದಿಣ್ಣೆ) ಗಳಂತೆಯೂ ಕಾಣು

ತ್ತಿದ್ದವು. ಆದ್ದರಿಂದ ಆ ನಾರಿಯರೆಲ್ಲರೂ ಹಂಸ ಮುಂತಾದ ನೀರುಹಕ್ಕಿಗಳಿಂದ ಗೆಲುವುಗೊಂಡ ನದಿಗಳಂತೆ ಕಂಗೊಳಿಸುತ್ತಿದ್ದರು. ಅವರ ಚಿನ್ನದ ಗೆಜ್ಜೆಗಳು ಕಮಲದ ಮೊಗ್ಗುಗಳಂತೆಯೂ, ಮುಖಗಳು ಪದ್ಮಗಳಂತೆಯೂ, ನಿದ್ರೆಯಲ್ಲಿಯೂ ಮಾಡುತ್ತಿದ್ದ ಶೃಂಗಾರಚೇಷ್ಟೆಗಳು ತಮ್ಮೆಡೆಗೆ ಜನರನ್ನು ಎಳೆಯುವ ಮೊಸಳೆಗಳಂತೆಯೂ, ಪಾರ್ಶ್ವಗಳಲ್ಲಿ ಹರಡಿದ್ದ ಲಾವಣ್ಯಪ್ರಭೆಯು ತೀರಗಳಂತೆಯೂ ಇದ್ದುದರಿಂದ ಅವರು ನದಿಗಳಂತೆಯೇ ಕಂಡರು (೫೦–೫೨). ಹಲವು ಚೆಲುವೆಯರ ಕರಚರಣಾದಿ ಕೋಮಲಾಂಗಗಳಲ್ಲಿಯೂ ಸ್ತನಗಳಲ್ಲಿಯೂ ವಿರಾಜಿಸುತ್ತಿದ್ದ ಒಡವೆಗಳು, (ಬಳ್ಳಿಗಳಿಗೆ ಮುತ್ತಿದ) ದುಂಬಿಗಳಂತೆ ಕಂಡವು! ಆ ತರುಣಿಯರು ಉಟ್ಟಿದ್ದ ಚಿತ್ರವರ್ಣದ ಸೊಗಸಾದ ಸೀರೆಯ ಸೆರಗುಗಳು ಮುಖಗಳ ಬಳಿಯಲ್ಲಿ ಉಸಿರಿನ ಗಾಳಿಯಿಂದ ಪತಾಕೆಗಳಂತೆ ಅಲ್ಲಾಡುತ್ತಿದ್ದವು. ಕೆಲವರ ಕಿವಿಯೋಲೆಗಳೂ ಮೆಲ್ಲಗೆ ಚಲಿಸುತ್ತಿದ್ದವು. ಸಹಜವಾಗಿಯೇ ಸುವಾಸನೆಯನ್ನು ಬೀರುವ ನಿಃಶ್ವಾಸಮಾರುತವು ಮದ್ಯದಿಂದ ಇನ್ನೂ ಹೆಚ್ಚು ಸುಗಂಧವನ್ನು ಚೆಲ್ಲುತ್ತ ರಾವಣನಿಗೆ ಸುಖಕರವಾಗಿ ಸುಳಿಯುತ್ತಿತ್ತು (೫೩–೫೬). ರಾವಣನಲ್ಲಿ ಬಹಳ ಪ್ರೇಮವನ್ನಿಟ್ಟಿದ್ದ ಕೆಲವು ಸ್ತ್ರೀಯರು ಬಳಿಯಲ್ಲಿ ಮಲಗಿದ್ದ ಸವತಿಯರ ಮುಖಗಳನ್ನು ನಿದ್ದೆಗಣ್ಣಿನಲ್ಲಿ ರಾವಣನ ಮುಖವೆಂದೇ ತಿಳಿದು ಚುಂಬಿಸುತ್ತಿದ್ದರು! (೫೭–೫೮). ಆಗ ಸವತಿಯರು ತಮ್ಮನ್ನು ರಾವಣನೇ ಚುಂಬಿಸುತ್ತಿರುವನೆಂದು ತಿಳಿದು ಹಿಗ್ಗುತ್ತಿದ್ದರು! ಕೆಲವರು ತಮ್ಮ ತೋಳಿನಮೇಲೆ ತಲೆಯಿಟ್ಟು ಮಲಗಿದ್ದರು. ಕೆಲವರು ಬಟ್ಟೆಯನ್ನು ಸುತ್ತಿ ತಲೆದಿಂಬಿನಂತೆ ಮಾಡಿಕೊಂಡಿದ್ದರು. ಒಬ್ಬಳ ಎದೆಯಮೇಲೆ ಇನ್ನೊಬ್ಬಳು, ಅವಳ ಭುಜದಮೇಲೆ ಮತ್ತೊಬ್ಬಳು, ಅವಳ ತೊಡೆಯಮೇಲೆ ಮಗದೊಬ್ಬಳು, ಅವಳ ತೋಳಿನಮೇಲೆ ಬೇರೊಬ್ಬಳು—ಹೀಗೆ ತಲೆಯಿಟ್ಟು ಸಾಲುಸಾಲಾಗಿ ಮಲಗಿದ್ದರು! (೫೯–೬೧). ಮದ್ಯಪಾನದಿಂದಲೂ ಕಾಮದಿಂದಲೂ ಮತ್ತರಾದ ಆ ಸ್ತ್ರೀಯರು ಒಬ್ಬೊಬ್ಬರ ಮೃದುವಾದ ಅಂಗಸ್ಪರ್ಶದಿಂದ ಹಿಗ್ಗುತ್ತ, ತೋಳಿನಮೇಲೆ ತೋಳು ಚಾಚಿ ಹೂಮಾಲೆಯಂತೆ ಸಾಲಾಗಿ ಮಲಗಿದ್ದರು (೬೨–೬೩). ಆ ಯುವತಿಯರ ಗುಂಪು ರಾವಣನ ವಸಂತಕಾಲದ ಹೂದೋಟದಂತೆ ರಮ್ಯವಾಗಿತ್ತು. ಸುಂದರಿಯರೇ ಪುಷ್ಪಲತೆಗಳು; ಕಣ್ಣು, ಮೂಗು ಮುಂತಾದ ಅಂಗಗಳೂ ಆಭರಣಗಳೂ ನಾನಾ ಬಗೆಯ ಹೂಗಳು; ಕೇಶಪಾಶ,

ಹುಬ್ಬುಗಳೇ ದುಂಬಿಗಳು; ಭುಜಗಳೇ ಕೊಂಬೆಗಳು (೬೪–೬೬). ಅವರು ಮಲಗಿದ್ದ ಸನ್ನಿವೇಶದಲ್ಲಿ ಅವರ ಆಭರಣಗಳು, ಸೀರೆಗಳು, ಹಾರಗಳು, ಕೈಕಾಲುಗಳು ಯಾರಯಾರದ್ದೆಂದು ವಿಂಗಡಿಸಿ ತಿಳಿಯುವುದು ಕೂಡ ದುಷ್ಕರವಾಗಿತ್ತು. ಸುವರ್ಣದೀಪಸ್ತಂಭಗಳಲ್ಲಿ ನಿಶ್ಚಲವಾಗಿ ಉರಿಯುತ್ತಿದ್ದ ದೀಪಗಳು 'ರಾವಣನು ನಿದ್ರಿಸುತ್ತಿದ್ದಾನೆ. ಭಯವಿಲ್ಲ' ಎಂದುಕೊಂಡು ಆ ಸುಂದರಿಯರನ್ನೇ ದಿಟ್ಟಿಸಿ ನೋಡುತ್ತಿರುವಂತೆ ಭಾಸವಾಯಿತು! (೬೭–೬೮). ಆ ಸ್ತ್ರೀಯರಲ್ಲಿ ಬಹುಮಂದಿ ರಾಜಕನ್ನಿಕೆಯರನ್ನೂ ದೇವಗಂಧರ್ವಾದಿ ಸ್ತ್ರೀಯರನ್ನೂ ರಾವಣನು ಯುದ್ಧದಲ್ಲಿ ಗೆದ್ದು ತಂದಿದ್ದನು. ಆದರೆ ಅವರೆಲ್ಲರೂ ರಾವಣನಲ್ಲಿ ಅನುರಕ್ತರಾದವರು. ಕೆಲವು ತರುಣಿಯರು ತಾವಾಗಿಯೇ ರಾವಣನನ್ನು ಮೋಹಿಸಿ ಬಂದವರು (೬೯). ಸೀತಾದೇವಿಯೊಬ್ಬಳನ್ನು ಬಿಟ್ಟು, ತನ್ನಲ್ಲಿ ಅನುರಾಗವಿಲ್ಲದ ಯಾವ ಸ್ತ್ರೀಯನ್ನೂ ರಾವಣನು ಬಲಾತ್ಕಾರವಾಗಿ ತಂದಿರಲಿಲ್ಲ. ಅಲ್ಲಿದ್ದವರಲ್ಲಿ ಯಾವಳೂ ರಾವಣನನ್ನು ಬಿಟ್ಟು ಇನ್ನೊಬ್ಬನನ್ನು ಕಾಮಿಸಿದವಳೂ ಅಲ್ಲ; ವರಿಸಿದವಳೂ ಅಲ್ಲ (೭೦). ಆ ಸ್ತ್ರೀಯರಲ್ಲಿ ಕುಲಹೀನೆಯಾಗಲಿ, ಕುರೂಪಿಯಾಗಲಿ, ಕೌಶಲ್ಯವಿಲ್ಲದವಳಾಗಲಿ ಅಥವಾ ರಾವಣನ ಪ್ರೇಮಕ್ಕೆ ಪಾತ್ರಳಲ್ಲದವಳಾಗಲಿ ಯಾವಳೂ ಇರಲಿಲ್ಲ (೭೧). ಹನುಮಂತನು ಅವರನ್ನು ನೋಡಿ ತನ್ನ ಮನಸ್ಸಿನಲ್ಲಿ 'ಈ ರಾಕ್ಷಸಸ್ತ್ರೀಯರಂತೆ, ಸೀತಾದೇವಿಯೂ ಪತಿಯಾದ ಶ್ರೀರಾಮನ ಬಳಿಯೇ ಇದ್ದಿದ್ದರೆ, ರಾವಣನ ಸೌಭಾಗ್ಯಕ್ಕೆ ಎಣೆ ಇರುತ್ತಿರಲಿಲ್ಲ. ಆಗ ರಾಮನಿಂದ ಇವನಿಗೆ ಯಾವ ತೊಂದರೆಯೂ ಉದ್ಭವಿಸುತ್ತಿರಲಿಲ್ಲ' ಎಂದುಕೊಂಡನು (೭೨). ಮರುಕ್ಷಣದಲ್ಲಿ 'ಈ ರಾಕ್ಷಸಿಯರಿಗೂ ಸೀತೆಗೂ ಏನು ಹೋಲಿಕೆ? ಇವರೆಲ್ಲರಿಗಿಂತ ಸೀತೆಯು ಗುಣವಂತೆ. ರಾವಣನು ಇಷ್ಟು ವೈಭವಶಾಲಿಯಾರೂ ಸೀತೆಯನ್ನು ತಂದು ಎಂತಹ ದುಷ್ಕೃತ್ಯವನ್ನು ಮಾಡಿದನು!' ಎಂದು ವಿಷಾದಪಟ್ಟನು (೭೩).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಒಂಬತ್ತನೆಯ ಸರ್ಗ

## ಸರ್ಗ ೧೦

ಹನುಮಂತನು ರಾವಣನ ಅಂತಃಪುರದಲ್ಲಿ ನಿದ್ರಿಸುತ್ತಿದ್ದ ಸ್ತ್ರೀಯರನ್ನೂ ರಾವಣನನ್ನೂ ಕಂಡುದು. ಮಂಡೋದರಿಯನ್ನು ನೋಡಿ ಸೀತೆಯೆಂದು ಭ್ರಮಿಸುವುದು.

ಹನುಮಂತನು ಅಲ್ಲಲ್ಲಿ ನೋಡುತ್ತ ಮುಂದೆ ಹೋಗಲು, ರತ್ನಭೂಷಿತವಾದ ಒಂದು ದಿವ್ಯ ಶಯನಮಂಟಪವನ್ನು ಕಂಡನು. ಅದರಲ್ಲಿ ಸುತ್ತಲೂ ದಂತ, ಚಿನ್ನ, ವೈಡೂರ್ಯಾದಿ ರತ್ನಗಳಿಂದ ಅಲಂಕೃತವಾಗಿ, ಅಮೂಲ್ಯವಾದ ಹಾಸಿಗೆಗಳನ್ನು ಹಾಸಿದ್ದ ಮಂಚಗಳಿದ್ದವು (೧–೨). ಮಧ್ಯದಲ್ಲಿ ತಲೆಯಕಡೆ ಪೂರ್ಣಚಂದ್ರನಂತಿರುವ ಶ್ವೇತಛತ್ರವು ವಿರಾಜಿಸುತ್ತಿದ್ದಿತು. ಅದರ ಕೆಳಗೆ ಸುವರ್ಣನಿರ್ಮಿತವಾಗಿ ಸೂರ್ಯನಂತೆ ಪ್ರಜ್ವಲಿಸುತ್ತಲೂ, ರಕ್ತಾಶೋಕ ಪುಷ್ಪಗಳಿಂದ ಅಲಂಕೃತವಾಗಿಯೂ ಇರುವ ಒಂದು ದಿವ್ಯವಾದ ಮಂಚವಿತ್ತು (೩–೪). ಸುತ್ತಲೂ ಯಂತ್ರನಿರ್ಮಿತಪ್ರತಿಮೆಗಳು ಬೀಸಣಿಗೆಯಿಂದ ಗಾಳಿ ಹಾಕುತ್ತಿದ್ದವು. ಆ ಸ್ಥಳವು ಸುಗಂಧದ್ರವ್ಯಗಳಿಂದ ಘಮಘಮಿಸುತ್ತಿತ್ತು. ಮಂಚದಮೇಲೆ ಶ್ರೇಷ್ಠವಾದ ಜಮಖಾನಗಳನ್ನೂ ಮೃದುವಾದ ಉಣ್ಣೆಯ ಬಟ್ಟೆಗಳನ್ನೂ ಹಾಸಿದ್ದರು. ಸುತ್ತಲೂ ಸುಗಂಧಿಯಾದ ಹೂಮಾಲೆಗಳು ತೂಗಾಡುತ್ತಿದ್ದವು (೫–೬). ಹನುಮಂತನು ಅವೆಲ್ಲವನ್ನೂ ಗಮನಿಸುತ್ತ ಮುಂದೆ ಬರಲು, ಮಂಚದಮೇಲೆ ಸಾಕ್ಷಾತ್ ರಾವಣನೇ ಮಲಗಿ ನಿದ್ರಿಸುತ್ತಿದ್ದನು! ಮೇಘದಂತೆ ಕಪ್ಪುದೇಹದ ಆ ರಾವಣನು ಕಿವಿಯಲ್ಲಿ ಪ್ರಜ್ವಲಿಸುವ ಕುಂಡಲಗಳನ್ನು ಧರಿಸಿ, ಚಿನ್ನದ ಜರತಾರಿಯುಳ್ಳ ರೇಷ್ಮೆಯ ದುಕೂಲವನ್ನು ಉಟ್ಟಿದ್ದನು. ಮೈಗೆಲ್ಲ ರಕ್ತಚಂದನವನ್ನು ಬಳಿದುಕೊಂಡಿದ್ದ ಅವನು, ಸಂಜೆಯಹೊತ್ತು ಮಿಂಚಿನಿಂದ ಕೂಡಿದ ಸಗುಗೆಂಪಾದ ಮೋಡದಂತೆ ಕಂಗೊಳಿಸುತ್ತಿದ್ದನು (೭–೮). ರೂಪವಂತನೂ ದಿವ್ಯಾಭರಣಧಾರಿಯೂ ಆದ ರಾವಣನು ಅರಳಿದ ಮರಗಳಿಂದ ಸಹಿತವಾದ ಮಂದರಪರ್ವತದಂತೆ ಮಲಗಿದ್ದನು (೯). ರಾಕ್ಷಸಸ್ತ್ರೀಯರಿಗೆ ಪ್ರಿಯನಾದ ಆ ರಾಕ್ಷಸೇಂದ್ರನು ರಾತ್ರಿಯಲ್ಲಿ ಬಹಳಹೊತ್ತಿನವರೆಗೆ ಕುಡಿದು, ಕ್ರೀಡಿಸಿ ಈಗ ಮೈಮರೆತು ವೈಭವೋಪೇತವಾದ ಹಾಸಿಗೆಯಲ್ಲಿ ನಿದ್ರಿಸುತ್ತಿದ್ದನು (೧೦–೧೧). ಬುಸುಗುಟ್ಟುವ ಮಹಾಸರ್ಪದಂತೆ ಉಸಿರುಬಿಡುತ್ತಿದ್ದ ರಾವಣನನ್ನು ಕಂಡೊಡನೆ, ಹನುಮಂತನು

ಗಾಬರಿಗೊಂಡವನಂತೆ ಅವನನ್ನು ನೋಡಲಾರದೆ ಹಿಂದಕ್ಕೆ ಸರಿದನು. ನೋವಾನವಾರ್ಗವಾಗಿ ಇನ್ನೊಂದು ವೇದಿಕೆಯಮೇಲೆ ಹತ್ತಿ ಮದಿಸಿ ಮಲಗಿದ್ದ ರಾವಣನನ್ನು ನೋಡುತ್ತ ಕುಳಿತನು (೧೨–೧೩). ಅವನ ಹಾಸಿಗೆಯು ಮದ್ದಾನೆಯು ನುಗ್ಗಿದ ಗಿರಿನದಿಯಂತೆ ಕಲಕಿಹೋಗಿದ್ದಿತು. ಚಿನ್ನದ ಭುಜಕೀರ್ತಿಗಳಿಂದ ಅಲಂಕೃತವಾಗಿ ಹಾಸಿಗೆಯಮೇಲೆ ಚಾಚಿದ್ದ ಅವನ ಬಾಹುಗಳು ಇಂದ್ರಧ್ವಜಗಳಂತೆ ಶೋಭಿಸುತ್ತಿದ್ದವು (೧೪–೧೫). ಆ ಬಾಹುಗಳ ಒಂದು ಪಾರ್ಶ್ವದಲ್ಲಿ ಐರಾವತದ ಕೋರೆಯ ಹಲ್ಲಿನಿಂದಾದ ಗಾಯ; ಇನ್ನೊಂದು ಕಡೆ ವಜ್ರಾಯುಧದ ಪ್ರಹಾರದಿಂದಾದ ಗುರುತು; ಇನ್ನೊಂದು ಜಾಗದಲ್ಲಿ ವಿಷ್ಣುವಿನ ಚಕ್ರದ ಪೆಟ್ಟಿನಿಂದಾದ ಕಲೆ! (೧೬). ಪುಷ್ಟವಾಗಿಯೂ, ಬಲಸಂಪನ್ನವಾಗಿಯೂ ಮೈಯಳತೆಗೆ ತಕ್ಕುದಾಗಿಯೂ ಇದ್ದ ಆ ತೋಳುಗಳು, ಶುಭಲಕ್ಷಣಯುಕ್ತವಾದ ಉಗುರುಗಳಿಂದಲೂ ಹೆಬ್ಬೆರಳುಗಳಿಂದಲೂ ಶೋಭಿಸುತ್ತಿದ್ದವು. ಆನೆಯ ಸೊಂಡಿಲುಗಳಂತಿದ್ದ ಆ ತೋಳುಗಳು ಐದುಹೆಡೆಯ ಸರ್ಪಗಳಂತೆ ಹಾಸಿಗೆಯಲ್ಲಿ ಚಾಚಿಕೊಂಡಿದ್ದವು (೧೭–೧೮). ಆ ತೋಳುಗಳು ಮೊಲದ ರಕ್ತದಂತೆ ಕೆಂಪಾದ ದಿವ್ಯಚಂದನದಿಂದ ಲೇಪಿಸಲ್ಪಟ್ಟಿದ್ದವು. ಉತ್ತಮ ಸ್ತ್ರೀಯರಿಂದ ಒತ್ತಲ್ಪಟ್ಟ ಆ ತೋಳುಗಳು ಎಷ್ಟೋ ಮಂದಿ ಯಕ್ಷ, ಪನ್ನಗ, ಗಂಧರ್ವರನ್ನು, ದೇವ ದಾನವರನ್ನು ಗೋಳಾಡಿಸಿದ್ದವು! (೧೯–೨೦). ಹಾಸಿಗೆಯಮೇಲಿದ್ದ ಆ ಭುಜಗಳು ಮಂದರಪರ್ವತದ ಮೇಲೆ ಮಲಗಿದ್ದ ಕ್ರುದ್ಧಸರ್ಪಗಳಂತೆ ಕಾಣಿಸಿದವು. ಆ ಭುಜಗಳಿಂದ ರಾವಣನು ಶಿಖರಸಹಿತವಾದ ಪರ್ವತದಂತೆ ಕಾಣುತ್ತಿದ್ದನು (೨೧–೨೨). ಆ ರಾಕ್ಷಸೇಂದ್ರನು ಉಸಿರುಬಿಡುವಾಗ ಅನೇಕ ಬಗೆಯ ಹೂಗಳ ಪರಿಮಳವೂ ಮೃಷ್ಟಾನ್ನದ ವಾಸನೆಯೂ ಮದ್ಯದ ಗಂಧವೂ ಹೊರಗೆ ಬಂದು ಶಯನಗೃಹವನ್ನೇ ವ್ಯಾಪಿಸುತ್ತಿತ್ತು! (೨೩–೨೪). ಅವನ ತಲೆಯಮೇಲೆ ಸ್ವಲ್ಪ ಕದಲಿದ ಮುಕ್ತಾಭೂಷಿತಕಾಂಚನ ಕಿರೀಟವೂ ಕಿವಿಯ ಕುಂಡಲಗಳೂ ವಕ್ಷಸ್ಥಳದಲ್ಲಿ ಶೋಭಿಸುತ್ತಿದ್ದ ಚಂದನಲಿಪ್ತ ಮುಕ್ತಾಹಾರವೂ ಉಟ್ಟಿದ್ದ ಜರತಾರಿ ದುಕೂಲವೂ ಹೊದೆದ ಪೀತಾಂಬರವೂ ರಕ್ತನೇತ್ರನಾದ ರಾವಣನ ರಾಜತೇಜಸ್ಸನ್ನು ಬೆಳಗಿಸುತ್ತಿದ್ದವು (೨೫–೨೭). ಸರ್ಪದಂತೆ ಉಸಿರಾಡಿಸುತ್ತ ಶುಭ್ರವಾದ ಹಾಸಿಗೆಯಮೇಲೆ ಉದ್ದಿನರಾಶಿಯನ್ನು ಪೇರಿಸಿದಂತೆ ಇದ್ದ

ರಾವಣನು, ಗಂಗಾಪ್ರವಾಹದಲ್ಲಿಳಿದ ಆನೆಯಂತೆ ಕಾಣುತ್ತಿದ್ದನು! (೨೮). ಶಯನ ಮಂಟಪದ ನಾಲ್ಕೂ ಕಡೆಯಲ್ಲಿಯೂ ಸುವರ್ಣದ ದೀಪಸ್ತಂಭಗಳು ಉರಿಯುತ್ತಿರಲು, ಮಿಂಚುಗಳ ಬೆಳಕಿನಲ್ಲಿ ಕಾಣುವ ಮೇಘದಂತೆ ತೋರುತ್ತಿದ್ದನು (೨೯). ಆಮೇಲೆ ಕಾಲಿನ ಕಡೆಯಲ್ಲಿ ಮಲಗಿದ್ದ ರಾವಣನ ಪತ್ನಿಯರನ್ನು ಆಂಜನೇಯನು ನೋಡಿದನು (೩೦). ಅವರೆಲ್ಲರೂ ಚಂದ್ರಮುಖಿಯರು. ವಜ್ರವೈಡೂರ್ಯಗಳನ್ನು ಕೆತ್ತಿದ ಕುಂಡಲಗಳನ್ನೂ, ಹೂಮಾಲೆಗಳನ್ನೂ ಧರಿಸಿದವರು. ನೃತ್ಯವಾದ್ಯಗಳಲ್ಲಿ ನಿಪುಣೆಯರು. ರತ್ನಾಭರಣಭೂಷಿತೆಯರು. ರಾವಣನ ತೋಳುತೆಕ್ಕೆಗೆ ಭಾಗಿಗಳು (೩೧–೩೨). ಅವರೆಲ್ಲರೂ ವಜ್ರವೈಡೂರ್ಯಖಚಿತವಾದ ಕರ್ಣಕುಂಡಲಗಳನ್ನೂ ತೋಳ್ಬಂದಿಗಳನ್ನೂ ಧರಿಸಿದ್ದರು. ನಕ್ಷತ್ರಸದೃಶವಾದ ಅವರ ಕುಂಡಲಗಳಿಂದಲೂ, ಚಂದ್ರನಿಗೆಣೆಯಾದ ಮುಖಗಳಿಂದಲೂ ಆ ಶಯನ ಮಂಟಪವು ಆಕಾಶದಂತೆ ಶೋಭಿಸುತ್ತಿತ್ತು (೩೩–೩೪). ಆ ರಾಕ್ಷಸತರುಣಿಯರು ನೃತ್ಯಾದಿ ಕ್ರೀಡೆಗಳಿಂದ ಬಳಲಿ ತಮಗೆ ತೋರಿದ ಸ್ಥಳದಲ್ಲಿ ಮಲಗಿದ್ದರು (೩೫). ಒಬ್ಬ ನೃತ್ಯಕೋವಿದೆಯು ಕೈಕಾಲುಗಳನ್ನು ನೃತ್ಯಭಂಗಿಯಲ್ಲಿಯೇ ಇಟ್ಟುಕೊಂಡು ನಿದ್ರಿಸುತ್ತಿದ್ದಳು! ಇನ್ನೊಬ್ಬಳು ನದಿಯಲ್ಲಿ ತೇಲಿಹೋಗುತ್ತಿರುವ ತಾವರೆ ಬಳ್ಳಿಯು ಅಕಸ್ಮಾತ್ ದೋಣಿಯೊಂದನ್ನು ಸುತ್ತಿಕೊಂಡಂತೆ ವೀಣೆಯನ್ನು ಅಪ್ಪಿಕೊಂಡು ಮಲಗಿದ್ದಳು. ಮತ್ತೊಬ್ಬಳು ಕಂಕುಳಲ್ಲಿ ಮೃದಂಗವನ್ನಿಟ್ಟುಕೊಂಡದ್ದರಿಂದ, ಮಗುವನ್ನಪ್ಪಿಕೊಂಡು ಮಲಗಿದ ನಾರಿಯಂತೆ ಕಾಣುತ್ತಿದ್ದಳು (೩೬–೩೮). ಮಗದೊಬ್ಬಳು ಬಹುಕಾಲದಮೇಲೆ ಅಗಲಿಬಂದ ಕಾಂತನನ್ನು ಅಪ್ಪಿಕೊಳ್ಳುವಂತೆ ತಮಟೆಯನ್ನು ಅಪ್ಪಿ ಮಲಗಿದ್ದಳು! ಒಬ್ಬ ಸುಂದರಿಯು ರಹಸ್ಯದಲ್ಲಿ ಪ್ರಿಯನನ್ನು ಆಲಿಂಗಿಸಿಕೊಳ್ಳುವಂತೆ ಕೊಳಲನ್ನು ಆಲಿಂಗಿಸಿಕೊಂಡಿದ್ದಳು! ಇನ್ನೊಬ್ಬ ನೃತ್ಯಕುಶಲೆಯಾದ ತರುಣಿಯು ತನ್ನ ಪತಿಯೊಡನೆ ನಿದ್ರಿಸುವಂತೆ ಪಕ್ಕದಲ್ಲಿ ವೀಣೆಯನ್ನು ಇಟ್ಟುಕೊಂಡಿದ್ದಳು! (೩೯–೪೧). ಒಬ್ಬ ಯುವತಿಯು ಬಂಗಾರದಂತೆ ಮಿರುಗುವ ತನ್ನ ಅವಯವಗಳಿಂದ ಒಂದು ಮದ್ದಲೆಯನ್ನು ತಬ್ಬಿಕೊಂಡಿದ್ದಳು. ಇನ್ನೊಬ್ಬಳು ಪಣವವೆಂಬ ವಾದ್ಯವನ್ನು ಮಗ್ಗುಲಲ್ಲಿಟ್ಟುಕೊಂಡು ಮೈಮರೆತು ನಿದ್ರಿಸುತ್ತಿದ್ದಳು. ಒಂದು ಪಕ್ಕದಲ್ಲಿ ಪತಿಯನ್ನೂ ಇನ್ನೊಂದು ಪಕ್ಕದಲ್ಲಿ ಮಗುವನ್ನೂ ಮಲಗಿಸಿಕೊಳ್ಳುವಂತೆ, ಎರಡು ಪಕ್ಕ

ಗಳಲ್ಲಿಯೂ ಡಿಂಡಿಮುವಾದ್ಯಗಳನ್ನು ಇರಿಸಿಕೊಂಡವಳು ಇನ್ನೊಬ್ಬಳು! (೪೨–೪೪). ಆಡಂಬರ ಎಂಬ ವಾದ್ಯವನ್ನು ತೋಳಿನಿಂದ ಆಲಿಂಗಿಸಿ ಇನ್ನೊಬ್ಬ ಕಮಲಪತ್ರಾಕ್ಷಿಯು ಮದವೇರಿ ಮಲಗಿದ್ದಳು! ಒಬ್ಬ ಸುಂದರಿಯು ಮೈಮರೆತು ನೀರಿನ ಪಾತ್ರೆಯನ್ನು ಕವುಚಿಕೊಂಡುದರಿಂದ, ನೀರು ಚಿಮುಕಿಸಿದ ವಸಂತ ಕಾಲದ ಹೂಮಾಲೆಯಂತೆ ಶೋಭಿಸುತ್ತಿದ್ದಳು (೪೫–೪೬). ಒಬ್ಬಳು ಸುವರ್ಣಕಲಶದಂತಿದ್ದ ತನ್ನ ಸ್ತನಗಳನ್ನೇ ಅಪ್ಪಿಕೊಂಡಿದ್ದಳು. ಒಬ್ಬ ಚಂದ್ರ ಮುಖಿಯಾದ ಕಮಲನೇತ್ರೆಯು ತನ್ನ ಸಖಿಯನ್ನೇ ಅಲಿಂಗಿಸಿ ಮೈಮರೆತು ಮಲಗಿದ್ದಳು (೪೭–೪೮). ಅನೇಕ ಕಾಮಿನಿಯರು ಸ್ತನಗಳಿಂದ ಕಾಮುಕ ರನ್ನು ಗಾಢವಾಗಿ ಆಲಿಂಗಿಸಿಕೊಳ್ಳುವಂತೆ ನಾನಾ ಬಗೆಯ ವಾದ್ಯಗಳನ್ನು ಆಲಿಂಗಿಸಿಕೊಂಡು ಮಲಗಿದ್ದರು (೪೯). ಆಂಜನೇಯನು ಆ ಹೆಂಗಸರನ್ನು ನೋಡುತ್ತ ಸ್ವಲ್ಪದೂರದಲ್ಲಿ ಪ್ರತ್ಯೇಕವಾದ ಮಂಚದಮೇಲೆ ಮಲಗಿದ್ದ ಪರಮ ಸುಂದರಿಯಾದ ಸ್ತ್ರೀಯೊಬ್ಬಳನ್ನು ಕಂಡನು. ಆಕೆಯು ಮುತ್ತಿನ ಆಭರಣ ಗಳನ್ನು ಧರಿಸಿ, ತನ್ನ ಸೌಂದರ್ಯದಿಂದ ಅಂತಃಪುರಕ್ಕೇ ಭೂಷಣಪ್ರಾಯ ಳಾಗಿದ್ದಳು (೫೦–೫೧). ಚಿನ್ನದ ಮೈಬಣ್ಣದಿಂದ ಕಂಗೊಳಿಸುತ್ತಿದ್ದ ಆ ಸುಂದರಾಂಗಿಯು, ರಾವಣನ ಅಂತಃಪುರಕ್ಕೆ ಒಡತಿಯಾದ ಮಂಡೋದರಿ. ಹನುಮಂತನು ಅವಳ ರೂಪವನ್ನೂ ಯೌವನಸಂಪತ್ತನ್ನೂ ನೋಡಿ ಇವಳೇ ಸೀತೆಯೆಂದು ಭ್ರಮಿಸಿ ಆನಂದದಿಂದ ಹಿಗ್ಗಿಹೋದನು (೫೨–೫೩). ಅವನು ಆನಂದಪರವಶನಾಗಿ ಬಾಲವನ್ನು ಬಡಿದನು! ಬಾಲವನ್ನೆತ್ತಿ ಮುತ್ತುಕೊಟ್ಟನು! ಹರ್ಷದಿಂದ ಹಿಗ್ಗಿ ಹಾಡುತ್ತ ಕುಣಿದಾಡಿದನು! ಇಲ್ಲಿಂದಲ್ಲಿಗೆ ತಿರುಗಾಡಿದನು! ಸ್ತಂಭಗಳನ್ನು ಹತ್ತಿ ಧುಮುಕಿದನು! ಹೀಗೆ ತನ್ನ ಕಪಿಚೇಷ್ಟೆಗಳನ್ನೆಲ್ಲಾ ಒಂದು ಕ್ಷಣದಲ್ಲಿ ತೋರಿಸಿಬಿಟ್ಟನು! (೫೪).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಹತ್ತನೆಯ ಸರ್ಗ

## ಸರ್ಗ ೧೧

ಹನುಮಂತನು ಮಂಡೋದರಿಯನ್ನು ಸೀತೆಯಲ್ಲವೆಂದು ನಿಶ್ಚಯಿಸಿ ಪಾನಭೂಮಿಯಲ್ಲಿ ಹುಡುಕಿದುದು. ಪಾನಭೂಮಿವರ್ಣನೆ. ಪರಸ್ತ್ರೀಯರನ್ನು ನೋಡಿದ್ದರಿಂದ ಅವನಿಗಾದ ಚಿಂತೆ.

ಆಮೇಲೆ ಹನುಮಂತನು ಮತ್ತೆ 'ಎಂದಿಗಾದರೂ ಉಂಟೆ? ಸರ್ವಥಾ ಇವಳು ಸೀತೆಯಲ್ಲ' ಎಂದು ನಿರ್ಧರಿಸಿ 'ಸೀತೆ ಎಲ್ಲಿರಬಹುದು?' ಎಂದು ದೊಡ್ಡ ಚಿಂತೆಗೊಳಗಾದನು (೧). 'ಶ್ರೀರಾಮನನ್ನಗಲಿ ಸೀತಾದೇವಿಯು ಹೀಗೆ ನಿದ್ರೆಮಾಡುವಳೆ? ಮೊದಲು ಆಹಾರವನ್ನೇ ಬಿಡುವಳು. ಹೀಗೆ ಅಲಂಕಾರವನ್ನು ಮಾಡಿಕೊಂಡಾಳೆ? ಅವಳು ಮದ್ಯಪಾನಮಾಡುವುದೆಂದ ರೇನು? ರಾಮಚಂದ್ರನನ್ನು ಬಿಟ್ಟು ದೇವೇಂದ್ರನನ್ನೂ ಅವಳು ಮನ್ನಿಸ ತಕ್ಕವಳಲ್ಲ. ಶ್ರೀರಾಮನಿಗೆ ಎಣೆಯಾದ ಇನ್ನೊಬ್ಬ ಪುರುಷನೇ ಇಲ್ಲ. ಇವಳು ಯಾರೋ ಬೇರೆಯವಳು' ಎಂದು ನಿಶ್ಚಯಿಸಿ ಪಾನಶಾಲೆಯಲ್ಲಿ ಮತ್ತೆ ಹುಡುಕುತ್ತ ತಿರುಗಿದನು (೨-೩). ಅಲ್ಲಿ ಅನೇಕ ಸ್ತ್ರೀಯರು ಪಗಡೆಯಾಟ, ಸಂಗೀತ, ನೃತ್ಯಗಳಿಂದ ಬಳಲಿ ಮದ್ಯಪಾನದಿಂದ ಪ್ರಜ್ಞೆದಪ್ಪಿ ನಿದ್ರೆಮಾಡು ತ್ತಿದ್ದರು. ಅನೇಕರು ತಮ್ಮ ಮೃದಂಗಾದಿ ವಾದ್ಯಗಳನ್ನೂ ಚಿಕ್ಕ ಪೀಠಗಳನ್ನೂ ತಲೆದಿಂಬಾಗಿ ಇಟ್ಟುಕೊಂಡು ಮಲಗಿದ್ದರು (೪-೫). ಕೆಲವರು ಹಾಸಿದ ರತ್ನಗಂಬಳಿಗಳಲ್ಲಿ ನಿದ್ರಿಸುತ್ತಿದ್ದರು. ಅವರಲ್ಲಿ ಅನೇಕ ಹೆಂಗಸರು 'ಅವಳ ರೂಪ ಹೀಗೆ', 'ಇವಳ ಹಾಡು ಹೀಗೆ' ಎಂದು ನಿದ್ರೆಯಲ್ಲಿಯೇ ಕನವರಿಸು ತ್ತಿದ್ದರು. ಬಳಿಯಲ್ಲಿದ್ದ ಇನ್ನೊಂದು ಪಾನಭೂಮಿಯಲ್ಲಿ ಹೀಗೆಯೇ ಕ್ರೀಡಿಸಿ ನಿದ್ರಿಸುತ್ತಿದ್ದ ಸಾವಿರಾರು ಯುವತಿಯರನ್ನು ಹನುಮಂತನು ನೋಡಿದನು (೬-೯). ಆ ಸ್ತ್ರೀಯರಿಂದ ಪರಿವೃತನಾದ ರಾಕ್ಷಸೇಶ್ವರನು ಹಸುಗಳ ಮಂದೆ ಯಲ್ಲಿರುವ ಮಹಾವೃಷಭದಂತೆಯೂ ಹೆಣ್ಣಾನೆಗಳ ಮಧ್ಯದಲ್ಲಿರುವ ಸಲಗ ದಂತೆಯೂ ಶೋಭಿಸುತ್ತಿದ್ದನು (೧೦-೧೧). ಹೀಗೆ ಸಕಲಭೋಗ್ಯವಸ್ತು ಗಳಿಂದ ತುಂಬಿದ ರಾವಣನ ಪಾನಭೂಮಿಯನ್ನು ಹನುಮಂತನು ಕಂಡನು. ಪಾನಭೂಮಿಯ ಒಂದು ಕಡೆಯಲ್ಲಿ ಜಿಂಕೆ, ಹಂದಿ, ನವಿಲು, ಕೋಳಿ ಮುಂತಾದ ನಾನಾವಿಧ ಮೃಗಪಕ್ಷಿಗಳ ಮಾಂಸವನ್ನು ದೊಡ್ಡ ದೊಡ್ಡ ಚಿನ್ನದ ಕಡಾಯಿ ಗಳಲ್ಲಿ ತುಂಬಿದ್ದರು. ಕೆಲವನ್ನು ತಿಂದಿದ್ದರು. ಕೆಲವನ್ನು ಸ್ವಲ್ಪ ತಿಂದು

ಮಿಗಿಸಿದ್ದರು. ಇದಲ್ಲದೆ ಉತ್ತಮವಾದ ಲೇಹ್ಯಗಳೂ, ಪಾನಕಗಳೂ, ನಾನಾ ಪ್ರಕಾರದ ಭಕ್ಷ್ಯಭೋಜ್ಯಗಳೂ, ಉಪ್ಪು ಹುಳಿಯು ಹೆಚ್ಚಾಗಿರುವ ರಾಗಷಾಡವವೆಂಬ ವಿವಿಧರೀತಿಯ ಗೊಜ್ಜುಗಳೂ ಯಥೇಷ್ಟವಾಗಿದ್ದವು (೧೨–೧೭). ಆ ಪಾನಭೂಮಿಯು ಅಲ್ಲಲ್ಲಿ ಕಿತ್ತುಬಿದ್ದ ರಾಕ್ಷಸಸ್ತ್ರೀಯರ ಹಾರ ನೂಪುರಾದಿ ಭೂಷಣಗಳಿಂದಲೂ, ಬಗೆಬಗೆಯ ಹಣ್ಣುಗಳಿಂದಲೂ, ಹರಡಿದ ಹೂಗಳಿಂದಲೂ ವಿಶೇಷವಾದ ಕಾಂತಿಯನ್ನು ಪಡೆದಿತ್ತು (೧೮–೧೯). ಅಲ್ಲಲ್ಲಿ ಚದರಿದ ರತ್ನಾಸನಗಳು ಉರಿಯುವ ಬೆಂಕಿಯಂತೆ ವಿರಾಜಿಸುತ್ತಿದ್ದವು. ಕುಶಲರಾದ ಅಡಿಗೆಯವರು ರುಚಿಕರವಾದ ಮಾಂಸಾನ್ನಗಳನ್ನು ಸಿದ್ಧಪಡಿಸಿ ರಾಶಿ ಹಾಕಿದ್ದರು. ಅಲ್ಲಿ ಮರಗಳಿಂದ ಭಟ್ಟಿ ಇಳಿಸಿದ ಶ್ರೇಷ್ಠ ಜಾತಿಯ ಮದ್ಯಗಳೂ, ಸಕ್ಕರೆ, ಜೇನು, ಪುಷ್ಪರಸ, ಹಣ್ಣಿನ ರಸಗಳಿಂದ ತಗೆದ ವಿವಿಧ ಜಾತಿಯ ಮದ್ಯಗಳೂ ಕಂಗೊಳಿಸುತ್ತಿದ್ದವು (೨೦–೨೨). ಆ ಮದ್ಯಗಳನ್ನು ಚಿನ್ನ ಬೆಳ್ಳಿಗಳಲ್ಲಿ ಮಾಡಿದ ವಿವಿಧಾಕಾರದ ಪಾತ್ರೆಗಳಲ್ಲಿ ತುಂಬಿದ್ದರು. ಅವುಗಳಲ್ಲಿ ಅರ್ಧ ಕುಡಿದು ಮುಗಿಸಿದ ಪಾತ್ರೆಗಳು ಕೆಲವು; ನಿಶ್ಶೇಷವಾಗಿ ಕುಡಿದಿಟ್ಟ ಪಾತ್ರೆಗಳು ಕೆಲವು; ಕುಡಿಯದೆ ಮದ್ಯವನ್ನು ತುಂಬಿದ ಪಾತ್ರೆಗಳು ಕೆಲವು; ಹಾಗೆಯೇ ಭಕ್ಷ್ಯಗಳಲ್ಲಿ ಕೆಲವನ್ನು ತಿಂದು, ಕೆಲವನ್ನು ತಿನ್ನದೆ ಉಳಿಸಿದ್ದರು. ಪಾನೀಯಗಳೂ ಖಾದ್ಯಗಳೂ ಮಿಕ್ಕಿದ್ದವು (೨೩–೨೭). ಅವುಗಳನ್ನೆಲ್ಲಾ ನೋಡುತ್ತ ಹೋದ ಹನುಮಂತನು ಒಡೆದು ಬಿದ್ದ ಹೂಜಿಗಳನ್ನೂ, ಉರುಳಾಡಿದ ಗಡಿಗೆಗಳನ್ನೂ, ಚಲ್ಲಾಪಿಲ್ಲಿಯಾಗಿ ಹರಡಿದ್ದ ಹೂಹಣ್ಣುಗಳನ್ನೂ, ಕೆದರಿದ ಹಾಸಿಗೆಗಳನ್ನೂ ಕಂಡನು (೨೮–೨೯). ಅಲ್ಲಿ ಕೆಲವು ಹೆಂಗಸರು ಒಬ್ಬರನ್ನೊಬ್ಬರು ಅಪ್ಪಿಕೊಂಡು ಮಲಗಿದ್ದರು. ಕೆಲವರು ನಿದ್ರೆಯಲ್ಲಿ ಇನ್ನೊಬ್ಬರ ಸೀರೆಯನ್ನು ಸೆಳೆದು ತಮ್ಮ ಮೈಗೆ ಸುತ್ತಿಕೊಂಡಿದ್ದರು! ಅವರ ಉಸಿರಿನ ಗಾಳಿಯಿಂದ ವಸ್ತ್ರಗಳೂ ಪುಷ್ಪಮಾಲೆಗಳೂ ಮೆಲ್ಲಗೆ ಅಲುಗುತ್ತಿದ್ದವು. ಆ ಸ್ಥಳದಲ್ಲಿ ಚಂದನ, ಮದ್ಯ, ಹೂ, ಧೂಪಗಳ ಮೇಲೆ ಬೀಸುತ್ತಿದ್ದ ಗಾಳಿ, ಅವುಗಳ ಸುಗಂಧವನ್ನು ಹೊತ್ತು ಹರಡುತ್ತಲಿತ್ತು (೩೦–೩೪). ಅಲ್ಲಿದ್ದ ಸ್ತ್ರೀಯರಲ್ಲಿ ಕೆಲವರು ನಸುಗಪ್ಪು ಮೈಬಣ್ಣದವರು; ಕೆಲವರು ಬಿಳುಪು; ಕೆಲವರು ಕಪ್ಪು; ಕೆಲವರು ಹೊಂಬಣ್ಣದವರು. ನಿದ್ರಿಸುತ್ತಿದ್ದ ಆ ಸುಂದರಿಯರು ರಾತ್ರಿಯಲ್ಲಿ ಮುಚ್ಚಿದ ಹೂಗಳುಳ್ಳ ಕಮಲದ ಬಳ್ಳಿಗಳಂತೆ ವಿರಾಜಿಸುತ್ತಿದ್ದರು (೩೫–೩೭).

ಹೀಗೆ ಆ ಕಪಿವೀರನು ರಾವಣನ ಅಂತಃಪುರವನ್ನೆಲ್ಲಾ ಹುಡುಕಿದರೂ ಜಾನಕಿಯು ಗೋಚರಿಸಲಿಲ್ಲ. ಆಮೇಲೆ ಹನುಮಂತನಿಗೆ ಈ ಹೆಂಗಸರನ್ನು ತಾನು ನೋಡಿದುದು ಅಧರ್ಮವೆಂದು ದೊಡ್ಡ ಚಿಂತೆ ಉತ್ಪನ್ನವಾಯಿತು (೩೭–೩೮): "ಹೀಗೆ ಅಂತಃಪುರದಲ್ಲಿ ನಿದ್ರಿಸುತ್ತಿರುವ ಪರಸ್ತ್ರೀಯರನ್ನು ನೋಡುವುದು ದೊಡ್ಡ ಅಧರ್ಮ. ನಾನು ಇದುವರೆಗೂ ಪರಸ್ತ್ರೀಯರನ್ನು ಕಣ್ಣೆಟ್ಟು ನೋಡಿದವನಲ್ಲ. ಈಗ ಈ ರಾವಣನ ಹೆಂಡತಿಯರನ್ನು ನೋಡಿ ಮಹಾದೋಷಕ್ಕೆ ಗುರಿಯಾದೆನು" (೩೯–೪೦). ಹೀಗೆ ಚಿಂತಿಸುತ್ತಿರುವಾಗ ಸ್ಥಿರಚಿತ್ತನೂ ವಿವೇಕಿಯೂ ಆದ ಆಂಜನೇಯನಿಗೆ ಸಮಾಧಾನಕರವಾದ ಇನ್ನೊಂದು ವಿವೇಚನೆ ಹುಟ್ಟಿತು (೪೧): "ಇಲ್ಲಿಗೆ ಪರಪುರುಷನು ಬರಲಾರನೆಂಬ ನಿಶ್ಚಯದಿಂದ ಈ ಹೆಂಗಸರು ನಿರ್ಲಜ್ಜರಾಗಿ ಮಲಗಿದ್ದಾರೆ. ಇವರನ್ನೇನೋ ನಾನು ನೋಡಿದೆ. ಆದರೆ ನನ್ನ ಮನಸ್ಸಿನಲ್ಲಿ ಸ್ವಲ್ಪವೂ ವಿಕಾರವಾಗಲಿಲ್ಲ. ಇಂದ್ರಿಯಗಳ ಪ್ರವೃತ್ತಿಗೆ ಮನಸ್ಸೇ ಮೂಲಕಾರಣ. ಪಾಪಪುಣ್ಯಗಳಿಗೆ ಅದೇ ನಿಮಿತ್ತ. ಈ ಮನಸ್ಸು ಪೂರ್ಣವಾಗಿ ನನ್ನ ಸ್ವಾಧೀನದಲ್ಲಿರುವಾಗ ಪಾಪವೇಕೆ ಬರುತ್ತದೆ? (೪೨–೪೩). ಸೀತೆಯನ್ನು ಹುಡುಕಬೇಕಾದರೆ ಸ್ತ್ರೀಯರ ಮಧ್ಯದಲ್ಲಿಯೇ ಹುಡುಕಬೇಕು. ಸ್ತ್ರೀಯನ್ನು ಮೃಗಗಳ ಮಧ್ಯದಲ್ಲಿ ಹುಡುಕುವುದಕ್ಕಾಗುತ್ತದೆಯೆ! ಆದ್ದರಿಂದ ಪರಿಶುದ್ಧ ಮನಸ್ಸಿನಿಂದ ನಾನು ರಾವಣಾಂತಃಪುರದಲ್ಲಿ ಹುಡುಕಿದ್ದೇನೆ. ನನಗೆ ದೋಷವಿಲ್ಲ. ಆದರೆ ಸೀತೆಯು ಮಾತ್ರ ಕಾಣಲಿಲ್ಲ" (೪೪–೪೬). ಹೀಗೆಂದುಕೊಂಡು ಅಂತಃಪುರದಲ್ಲಿ ಎಷ್ಟೋ ದೇವ ಗಂಧರ್ವ ಕನ್ಯೆಯರನ್ನೂ ನಾಗಕನ್ಯೆಯರನ್ನೂ ನೋಡುತ್ತ ಹೋದನು. ಎಷ್ಟು ಸುತ್ತಿದರೂ ಸೀತೆಯನ್ನು ಕಾಣದೆ, ಪಾದಭೂಮಿಯ ಹೊರಭಾಗಕ್ಕೆ ಬಂದು ಚಿಂತಾಕ್ರಾಂತನಾದನು (೪೭–೪೮). ಆ ವಾಯುಪುತ್ರನು ಪಾನಭೂಮಿಯಿಂದ ಹೊರಗೆ ಬಂದು, ಇತರ ಪ್ರದೇಶಗಳಲ್ಲಿ ಮತ್ತೆ ಹುಡುಕಲಾರಂಭಿಸಿದನು (೪೯).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಹನ್ನೊಂದನೆಯ ಸರ್ಗ

# ಸರ್ಗ ೧೨

ಹನುಮಂತನು ಸೀತೆಯನ್ನು ಕಾಣದೆ ಚಿಂತಾಕ್ರಾಂತನಾದುದು. ನಿರಾಶನಾಗುವುದು ಸರಿಯಲ್ಲವೆಂದು ಪುನಃ ರಾವಣನ ಅರಮನೆಯೆಲ್ಲವನ್ನೂ ಹುಡುಕಿ ಸೀತೆಯನ್ನು ಕಾಣದೆ ವ್ಯಥೆಪಡುವುದು.

ಆಮೇಲೆ ಆಂಜನೇಯನು ಅರಮನೆಗೆ ಸೇರಿದ್ದ ಲತಾಗೃಹಗಳನ್ನೂ, ಚಿತ್ರಶಾಲೆಗಳನ್ನೂ, ರಾತ್ರಿವಾಸಕ್ಕೆ ಯೋಗ್ಯವಾದ ಇತರ ಶಾಲೆಗಳನ್ನೂ ಹುಡುಕಿ ಎಲ್ಲಿಯೂ ಸೀತಾದೇವಿಯನ್ನು ಕಾಣದೆ ವ್ಯಥೆಪಡುತ್ತಿದ್ದನು. ಅವನು ತನ್ನ ಮನಸ್ಸಿನಲ್ಲಿ "ಇಷ್ಟು ಶೋಧಿಸಿದರೂ ವೈದೇಹಿಯು ದೊರಕಲಿಲ್ಲ. ಅವಳು ನಿಶ್ಚಯವಾಗಿ ಮರಣವನ್ನು ಹೊಂದಿರಬೇಕು (೧–೨). ಅವಳು ಪತಿವ್ರತೆ, ಸಚ್ಚರಿತ್ರೆ. ಅವಳನ್ನು ಒಲಿಸಿಕೊಳ್ಳಲು ಸಾಧ್ಯವಾಗದೆ ಮರುಳನಾದ ಈ ರಾಕ್ಷಸನು ಆಕೆಯನ್ನು ಸಂಹರಿಸಿಬಿಟ್ಟಿದ್ದಾನೆ. ಅಥವಾ ಕುರೂಪಿಗಳಾದ ಘೋರಾಕಾರದ ಈ ರಾಕ್ಷಸಸ್ತ್ರೀಯರನ್ನು ನೋಡಿ ಸೀತೆಯು ಹೆದರಿ ಪ್ರಾಣವನ್ನು ಬಿಟ್ಟಿರಬೇಕು (೩–೪). ನಾನು ಇಲ್ಲಿಗೆ ಬಂದು ಸೀತೆಯನ್ನು ನೋಡದೆ, ಪರಾಕ್ರಮವನ್ನು ತೋರಿಸದೆ, ವಾನರರೊಡನೆ ಇಷ್ಟು ಕಾಲವನ್ನು ಕಳೆದು ಸುಗ್ರೀವನ ಬಳಿಗೆ ಹೇಗೆ ಹೋಗಲಿ? ಸುಗ್ರೀವನಾದರೋ ಮಹಾಬಲಶಾಲಿ; ಕಠೋರವಾಗಿ ದಂಡಿಸತಕ್ಕವನು (೫). ಅಂತಃಪುರವನ್ನೆಲ್ಲಾ ಹುಡುಕಿ ರಾವಣನ ಹೆಂಗಸರನ್ನು ನೋಡಿದ್ದಾಯಿತು. ಸಾಧ್ವಿಯಾದ ಸೀತೆ ಮಾತ್ರ ಇಲ್ಲ. ನನ್ನ ಶ್ರಮವೆಲ್ಲಾ ವ್ಯರ್ಥವಾಯಿತು. ನಾನು ಹಿಂದಿರುಗಿ ಹೋದರೆ ವಾನರರೆಲ್ಲಾ ಒಟ್ಟಾಗಿ ಬಂದು 'ವೀರನೆ, ಲಂಕೆಗೆ ಹೋಗಿ ಏನು ಮಾಡಿದೆ? ನಮಗೆ ಹೇಳು!' ಎಂದು ಕೇಳುವುದಿಲ್ಲವೆ? (೬–೭). ಸೀತೆಯನ್ನೇ ಕಾಣದೆ ನಾನು ಅವರಿಗೆ ಏನನ್ನು ಹೇಳಲಿ? ಸುಗ್ರೀವನ್ನು ಕೊಟ್ಟ ಅವಧಿ ಮುಗಿದ ಕೂಡಲೇ ಎಲ್ಲರೂ ಮೊದಲಿನಂತೆ ಉಪವಾಸವನ್ನಾರಂಭಿಸುವರು. ವೃದ್ಧನಾದ ಜಾಂಬವಂತನೂ ಅಂಗದನೂ ಇತರ ಕಪಿಗಳೂ ಏನು ಹೇಳಿಯಾರು? (೮–೯). ಛೆ! ಉತ್ಸಾಹಗೆಡಬಾರದು. ಉತ್ಸಾಹವೇ ಸಕಲಸಂಪತ್ತಿಗೂ ಕಾರಣ. ಉತ್ಸಾಹದಿಂದಲೇ ಸುಖ. ಯಾವಾಗಲೂ ಉತ್ಸಾಹವೇ ಸರ್ವ ಕಾರ್ಯಗಳಿಗೂ ಆದಿ. ಯಾವ ಕಾರ್ಯವಾದರೂ ಉತ್ಸಾಹವಿದ್ದರೇ ಸಫಲವಾಗುವುದು. ಆದ್ದರಿಂದ ನಾನು ನಿರಾಶನಾಗದೆ ಪುನಃ ಪ್ರಯತ್ನಮಾಡುತ್ತೇನೆ (೧೦–೧೧).

ನಾನು ಇದುವರೆಗೆ ಹುಡುಕದಿರುವ, ರಾವಣನಿಗೆ ಸೇರಿದ ಎಲ್ಲಾ ಸ್ಥಳಗಳನ್ನು ಹುಡುಕಿಬಿಡುತ್ತೇನೆ. ಈಗ ಪಾನಭೂಮಿ, ಪುಷ್ಪಗೃಹ, ಚಿತ್ರಶಾಲೆ, ಕ್ರೀಡಾ ಗೃಹಗಳನ್ನೆಲ್ಲಾ ನೋಡಿದ್ದಾಯಿತು ಉದ್ಯಾನದ ಬೀದಿಗಳನ್ನೂ ವಿಮಾನ ಗಳನ್ನೂ ನೋಡಿ ಬಂದಿದ್ದೇನೆ. ಉಳಿದ ಎಲ್ಲ ಸ್ಥಳಗಳನ್ನೂ ನೋಡಿಬಿಡು ತ್ತೇನೆ" ಎಂದು ಆಲೋಚಿಸಿ ಹುಡುಕಲಾರಂಭಿಸಿದನು (೧೨–೧೪). ಅಲ್ಲಲ್ಲಿ ನೆಲಮಾಳಿಗೆಗಳನ್ನೂ, ಚೌಕದಲ್ಲಿರುವ ಮಂಟಪಗಳನ್ನೂ, ದೂರದಲ್ಲಿದ್ದ ಚಿಕ್ಕ ಮನೆಗಳನ್ನೂ ಶೋಧಿಸತೊಡಗಿದನು. ಆಂಜನೇಯನು ಮನೆಯಿಂದ ಮನೆಗೆ ನೆಗೆಯುತ್ತ, ಧುಮುಕುತ್ತ, ಅಲ್ಲಲ್ಲಿ ನಿಲ್ಲುತ್ತ, ಹೋಗುತ್ತ, ಬಾಗಿಲನ್ನು ತೆರೆಯುತ್ತ, ಕದಗಳನ್ನು ಬಡಿಯುತ್ತ, ಒಳಗೆ ಹೊಗುತ್ತ, ಹೊರಡುತ್ತ, ಇಳಿಯುತ್ತ, ಹತ್ತುತ್ತ ಎಲ್ಲಾ ಕಡೆಯಲ್ಲಿಯೂ ಸಂಚಾರಮಾಡಿದನು. ಅವನು ಶೋಧಿಸದೇ ಇದ್ದ ನಾಲ್ಕಂಗುಲ ಜಾಗವೂ ಉಳಿಯಲಿಲ್ಲ (೧೫–೧೭). ಪ್ರಾಕಾರದೊಳಗಿನ ಬೀದಿಗಳನ್ನೂ ಚೌಕದಲ್ಲಿನ ವೇದಿಕೆಗಳನ್ನೂ ಕೊಳ ಗಳನ್ನೂ ಬಿಡದೆ ಶೋಧಿಸಿದನು. ಆದರೆ ನಾನಾ ರೂಪದ ವಿಕಾರಿಗಳಾದ ರಾಕ್ಷಸ ಸ್ತ್ರೀಯರನ್ನು ಮಾತ್ರ ಕಂಡನು (೧೮–೧೯) ಹನುಮಂತನು ಚೆಲುವೆಯರಾದ ಎಷ್ಟೋ ಮಂದಿ ವಿದ್ಯಾಧರ ಸ್ತ್ರೀಯರನ್ನು ನೋಡಿದನು. ಜಾನಕಿಯು ಮಾತ್ರ ಕಾಣಲಿಲ್ಲ. ಪೂರ್ಣಚಂದ್ರನಂತೆ ಮುಖವುಳ್ಳ ನಾಗ ಕನ್ನಿಕೆಯರನ್ನು ನೋಡಿದನು. ಶ್ರೀರಾಮನ ಪತ್ನಿಯು ಮಾತ್ರ ಕಾಣಲಿಲ್ಲ. ಬಲಾತ್ಕಾರದಿಂದ ರಾವಣನು ತಂದಿದ್ದ ಎಷ್ಟೋ ಸ್ತ್ರೀಯರನ್ನು ನೋಡಿದನು. ಸುಂದರಿಯಾದ ಸೀತೆಯು ಮಾತ್ರ ಕಾಣಲಿಲ್ಲ (೨೦–೨೨). ಹೀಗೆ ಎಲ್ಲಿ ಹುಡುಕಿದರೂ ಇತರ ಸ್ತ್ರೀಯರು ಕಾಣುತ್ತಿದ್ದರೇ ಹೊರತು, ಜಾನಕಿಯು ಕಾಣುತ್ತಿರಲಿಲ್ಲವಾದ್ದರಿಂದ ಹನುಮಂತನಿಗೆ ಬಹಳ ವಿಷಾದವಾಯಿತು. ಇದುವರೆಗೆ ವಾನರರು ಮಾಡಿದ ಪ್ರಯತ್ನವೂ, ತಾನು ಸಮುದ್ರವನ್ನು ಲಂಘಿಸಿದುದೂ ವ್ಯರ್ಥವಾಯಿತೆಂದು ಅವನಿಗೆ ಬಹಳ ಚಿಂತೆಯಾಯಿತು (೨೩–೨೪). ಕಡೆಯಲ್ಲಿ ತನ್ನ ಪ್ರಯತ್ನವೆಲ್ಲವೂ ವ್ಯರ್ಥವಾಯಿತೆಂದು ಬಗೆದು ಆ ವಾಯುತನಯನು, ತಾನು ನಿಂತಿದ್ದ ವಿಮಾನದಿಂದ ಕೆಳಗಿಳಿದು ಏನೂ ತೋರದೆ ದುಃಖಿತನಾಗಿ ನಿಂತುಕೊಂಡನು (೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಹನ್ನೆರಡನೆಯ ಸರ್ಗ

## ಸರ್ಗ ೧೩

ಹನುಮಂತನು ಸೀತೆಯನ್ನೂ ಶ್ರೀರಾಮಾದಿಗಳನ್ನೂ ಕುರಿತು ನಾನಾವಿಧವಾಗಿ ಚಿಂತಿಸಿ, ಕಡೆಗೆ ಅಶೋಕವನವನ್ನು ಶೋಧಿಸಬೇಕೆಂದು ಉದ್ದೇಶಿಸುವುದು. ತನ್ನ ಪ್ರಯತ್ನ ಸಫಲವಾಗಲೆಂದು ದೇವತೆಗಳನ್ನು ಪ್ರಾರ್ಥಿಸುವುದು.

ಹನುಮಂತನು ವಿಮಾನದಿಂದಿಳಿದಮೇಲೆ ಸ್ವಲ್ಪಹೊತ್ತು ಚಿಂತಿಸಿ ವೇಗದಿಂದ ಪ್ರಾಕಾರದಮೇಲೆ ಹತ್ತಿ ಕುಳಿತು, ಮೇಘಮಧ್ಯದಲ್ಲಿರುವ ಮಿಂಚಿನಂತೆ ಶೋಭಿಸಿದನು. ರಾವಣನ ಅರಮನೆಯನ್ನು ಶೋಧಿಸಿದರೂ ಸೀತೆಯು ಗೋಚರಿಸದೆ ಇದ್ದುದರಿಂದ ತನ್ನಲ್ಲಿಯೇ ಹೀಗೆಂದುಕೊಂಡನು (೧–೨): "ಶ್ರೀರಾಮನ ಹಿತವನ್ನು ಬಯಸಿ ಇಡೀ ಲಂಕಾಪಟ್ಟಣವನ್ನೇ ಹುಡುಕಿದರೂ ಸೀತಾದೇವಿಯನ್ನು ನಾನು ಕಾಣಲಾರದೆ ಹೋದೆನು. ಕೆರೆ, ಕೊಳ, ನದೀ, ತೀರವನ, ಕೋಟೆ, ಪರ್ವತಗಳನ್ನೆಲ್ಲಾ ಸುತ್ತಿದರೂ ಸೀತೆ ಕಾಣಲಿಲ್ಲ. ಗೃಧ್ರರಾಜನಾದ ಸಂಪಾತಿಯಾದರೋ ರಾವಣನ ಪಟ್ಟಣದಲ್ಲಿಯೇ ಇದ್ದಾಳೆಂದು ಹೇಳಿದ್ದಾನೆ. ಆದರೆ ಅವಳನ್ನು ಕಾಣೆನಲ್ಲ (೩–೫). ಆ ಸೀತೆ–ವೈದೇಹಿ–ಮೈಥಿಲಿ–ಜನಕರಾಜತನಯೆ, ಎಂದಿಗಾದರೂ ರಾವಣನನ್ನು ವರಿಸುತ್ತಾಳೆಯೆ? ಸರ್ವಥಾ ಇಲ್ಲ. ಒಂದು ವೇಳೆ ಈ ರಾಕ್ಷಸನು ರಾಮಬಾಣಕ್ಕೆ ಹೆದರಿ ಓಡಿಬರುತ್ತಿರುವಾಗ, ಇವನ ಕೈಸಡಲಿ, ಸೀತೆಯು ಕೆಳಗೆ ಬಿದ್ದುಹೋಗಿರಬಹುದೆ? (೬–೮). ರಾವಣನು ಸೀತೆಯನ್ನು ಅಪಹರಿಸಿಕೊಂಡು ಆಕಾಶ ಮಾರ್ಗದಲ್ಲಿ ಬರುತ್ತಿರುವಾಗ ಕೆಳಗೆ ಭೀಕರವಾದ ಸಮುದ್ರವನ್ನು ಕಂಡು, ದೇವಿಯು ಹೆದರಿ ಎದೆಯೊಡೆದು ಮೃತಳಾಗಿರಬಹುದೆ? ಅಥವಾ ರಾವಣನ ಮುಷ್ಟಿಯ ಹಿಡಿತವನ್ನೂ ವೇಗವನ್ನೂ ಸಹಿಸಲಾರದೆ ದಾರಿಯಲ್ಲಿಯೇ ಸತ್ತು ಹೋಗಿರಬಹುದು (೯–೧೦). ಇಲ್ಲವೆ, ರಾವಣನು ಸಮುದ್ರದಮೇಲೆ ಹಾರಿ ಬರುವಾಗ ಸೀತೆಯು ತಪ್ಪಿಸಿಕೊಳ್ಳುವುದಕ್ಕಾಗಿ ಪ್ರಯತ್ನಿಸಿ ಸಮುದ್ರದಲ್ಲಿ ಜಾರಿ ಬಿದ್ದಿರಬೇಕು. ಅಥವಾ ಈ ನೀಚರಾಕ್ಷಸನು ಸೀತೆಯು ತನ್ನ ವಶವಾಗದ್ದರಿಂದ ಕೋಪಗೊಂಡು ದಿಕ್ಕಿಲ್ಲದ ಅವಳನ್ನು ತಿಂದುಹಾಕಿರಬೇಕು (೧೧–೧೨). ಒಂದುವೇಳೆ ಈ ರಾವಣನ ಹೆಂಡತಿಯರೇ ತಮಗೆ ಸೀತೆ ಸವತಿಯಾದಾಳೆಂಬ ಅಸೂಯೆಯಿಂದ ಅವಳನ್ನು ಭಕ್ಷಿಸಿಬಿಟ್ಟಿರಬಹುದು. ಇಲ್ಲವೆ, ಆ ಸಾಧ್ವಿಯು ಪೂರ್ಣಚಂದ್ರನಿಗೆ ಸದೃಶವಾಗಿ, ಪದ್ಮದಳದಂತೆ ಮನೋಹರವಾದ

ಕಣ್ಣುಗಳುಳ್ಳ ಶ್ರೀರಾಮನ ಮುಖವನ್ನೇ ಸ್ಮರಿಸಿಕೊಳ್ಳುತ್ತ ಅದೇ ಚಿಂತೆಯಿಂದ ಕೊರಗಿ ಪ್ರಾಣವನ್ನು ಬಿಟ್ಟಿರಬೇಕು (೧೩–೧೪) ಆ ಸಂದರ್ಭದಲ್ಲಿಯೂ 'ಹಾ ರಾಮ! ಹಾ ಲಕ್ಷ್ಮಣ! ಹಾ ಅಯೋಧ್ಯೆ!' ಎಂದು ಬಾರಿಬಾರಿಗೂ ಕೂಗಿಕೊಳ್ಳುತ್ತಲೇ ದೇಹವನ್ನು ಬಿಟ್ಟಿರಬೇಕು. ಒಂದು ವೇಳೆ ರಾವಣನು ಅವಳನ್ನು ಎಲ್ಲಿಯೋ ಗುಟ್ಟಾಗಿ ಪಂಜರದ ಗಿಳಿಯಂತೆ ಬಂಧನದಲ್ಲಿಟ್ಟಿರಬಹುದು. ಸೀತಾದೇವಿಯು ಜನಕಮಹಾರಾಜನ ಮಗಳು; ಶ್ರೀರಾಮಚಂದ್ರನ ಧರ್ಮಪತ್ನಿ. ಎಂದಿಗಾದರೂ ಅವಳು ರಾವಣನ ವಶವಾದಾಳೆ? (೧೫–೧೬). ಪತ್ನಿಯಲ್ಲಿ ಅಷ್ಟೊಂದು ಪ್ರೇಮವಿಟ್ಟಿರುವ ಶ್ರೀರಾಮನಿಗೆ ನಾನು ಏನೆಂದು ಹೇಳಲಿ? ಸೀತೆಯು ಕಾಣಲಿಲ್ಲವೆಂದ? ರಾಕ್ಷಸರು ಕೊಂದರೆಂದೆ? ಅಥವಾ ದುಃಖದಿಂದ ತಾನೇ ಮೃತಳಾದಳು ಎಂದೆ? ಏನು ಹೇಳಲೂ ಸಾಧ್ಯವಿಲ್ಲ. ಹೇಳಿದರೂ ಕಷ್ಟ, ಹೇಳದಿದ್ದರೂ ಕಷ್ಟ (೧೭–೧೮). ಈಗ ಏನುಮಾಡಬೇಕು? ಪರಿಸ್ಥಿತಿಯು ಬಹಳ ಬಿಕ್ಕಟ್ಟಿಗೆ ಬಂದಿತು. ಈಗ ಏನು ಮಾಡುವುದು ಸರಿ? (೧೯). ಹೀಗೆಯೇ ನಾನು ಕಿಷ್ಕಿಂಧೆಗೆ ಹೋಗಿಬಿಟ್ಟರೆ ಯಾವ ಪುರುಷಾರ್ಥವನ್ನು ಸಾಧಿಸಿದಂತೆ ಆಯಿತು? ಸಮುದ್ರ ಲಂಘನವೇ ವ್ಯರ್ಥವಾಗುವುದಲ್ಲ (೨೦–೨೧). ಈ ದುರ್ಗಮವಾದ ಲಂಕೆಯನ್ನು ಪ್ರವೇಶಿಸಿ ರಾಕ್ಷಸರ ಮನೆಗಳನ್ನೆಲ್ಲಾ ಹುಡುಕಿನೋಡಿದ್ದೂ ವ್ಯರ್ಥವೇ ಆಗುವುದು. ನಾನು ಕಿಷ್ಕಿಂಧೆಗೆ ಹೊರಟುಹೋದರೆ ಸುಗ್ರೀವನಾಗಲಿ, ವಾನರರಾಗಲಿ ಅಥವಾ ರಾಮಲಕ್ಷ್ಮಣರೇ ಆಗಲಿ ನನ್ನನ್ನು ನೋಡಿ ಏನು ಹೇಳಬಹುದು! (೨೨–೨೩). ನಾನು ಹೋಗಿ ಸೀತೆಯು ಸಿಕ್ಕಲಿಲ್ಲವೆಂಬ ಅಪ್ರಿಯವಾದ ಮಾತನ್ನು ಹೇಳಿದರೆ, ರಾಮನು ಪ್ರಾಣವನ್ನೇ ಬಿಟ್ಟುಬಿಡುವನು. ಕರ್ಣಕಠೋರವೂ ಹೃದಯಭೇದಕವೂ ಆದ ಈ ಕೆಟ್ಟ ಸುದ್ದಿಯನ್ನು ಕೇಳಿ ಶ್ರೀರಾಮನು ಬದುಕುವುದೆಂದರೇನು? ರಾಮನು ಅಂತಹ ಕಷ್ಟಕ್ಕೆ ಸಿಕ್ಕಿ ಸಾಯಲು ನಿಶ್ಚಯಿಸಿರುವುದನ್ನು ತಿಳಿದು, ಅವನಲ್ಲಿ ಅತ್ಯಂತ ಸ್ನೇಹದಿಂದಿರುವ ಲಕ್ಷ್ಮಣನೂ ಜೀವಸಹಿತ ಉಳಿಯುವುದಿಲ್ಲ. ಹೀಗೆ ಅಣ್ಣತಮ್ಮಂದಿರಿಬ್ಬರೂ ಮೃತರಾದದ್ದನ್ನು ಕೇಳಿ ಭರತನು ಸಾಯುವುದು ನಿಶ್ಚಯ (೨೪–೨೬). ಭರತನು ಮೃತನಾದರೆ ಶತ್ರುಘ್ನನೂ ಉಳಿಯುವುದಿಲ್ಲ. ಮಕ್ಕಳೆಲ್ಲರೂ ಸತ್ತುಹೋದಮೇಲೆ ಜನನಿಯರಾದ ಕೌಸಲ್ಯೆ, ಕೈಕೇಯಿ, ಸುಮಿತ್ರೆಯರೂ

ಎಂದೆಂದಿಗೂ ಬದುಕಿರಲಾರರು. ರಾಮನ ಸ್ಥಿತಿಯನ್ನು ಕಂಡು ಸತ್ಯಸಂಧನೂ ಕೃತಜ್ಞನೂ ಆದ ನಮ್ಮ ಸುಗ್ರೀವಮಹಾರಾಜನು ಪ್ರಾಣವನ್ನು ತ್ಯಜಿಸಿಬಿಡುವನು (೨೭–೨೯). ಸುಗ್ರೀವನ ಹೆಂಡತಿಯಾದ ರುಮೆಯು ಪತಿಶೋಕದಿಂದ ಖಿನ್ನಳಾಗಿ ಸಾಯುವಳು. ಮೊದಲೇ ವಾಲಿಯ ಮರಣದಿಂದ ಕೊರಗುತ್ತಿರುವ ತಾರೆಯು, ಸುಗ್ರೀವನೂ ಮೃತನಾದರೆ ಎಂದಿಗೂ ಬದುಕಿರಲಾರಳು. ತಂದೆ ತಾಯಿಗಳೂ ಸುಗ್ರೀವನೂ ಸತ್ತುಹೋದಮೇಲೆ ಅಂಗದಕುಮಾರನು ಎಂದಿಗಾದರೂ ಜೀವಿಸಿರುವನೇ ? (೩೦–೩೨). ಕೀರ್ತಿಶಾಲಿಯಾದ ಸುಗ್ರೀವನು ನಾಮದಾನಗಳಿಂದಲೂ ಅಭಿಮಾನದಿಂದಲೂ ಸಮಸ್ತ ವಾನರರನ್ನೂ ಕಾಪಾಡುತ್ತಿರುವನು. ಅಂತಹ ರಾಜನು ಮೃತನಾದನೆಂದು ತಿಳಿದು ಈ ವಾನರರೆಲ್ಲರೂ ತಲೆಯನ್ನು ಒಡೆದುಕೊಂಡು ಸಾಯುವುದು ನಿಶ್ಚಯ. ಈ ವಾನರರು ಇನ್ನು ಮೇಲೆ ಕಾಡಿನಲ್ಲಾಗಲಿ, ಬೆಟ್ಟಗಳಲ್ಲಾಗಲಿ, ಗುಹೆಗಳಲ್ಲಾಗಲಿ ಸೇರಿ ವಿನೋದದಿಂದ ಕ್ರೀಡಿಸುವ ಆಸೆಯೇ ಇಲ್ಲ (೩೩–೩೫). ಇವರು ಅತ್ಯಂತ ದುಃಖಿತರಾಗಿ ಹೆಂಡತಿ ಮಕ್ಕಳೊಡನೆ ಪರ್ವತಶಿಖರಗಳಿಂದ ಹಾರಿಕೊಂಡು ಪ್ರಾಣಬಿಡುವರು. ಇಲ್ಲವೆ ವಿಷವನ್ನು ಕುಡಿದೋ, ನೇಣುಹಾಕಿಕೊಂಡೋ, ಬೆಂಕಿಯಲ್ಲಿ ಬಿದ್ದೋ, ಉಪವಾಸಮಾಸಮಾಡಿಯೋ ಅಥವಾ ಆಯುಧಗಳಿಂದ ಕತ್ತರಿಸಿಕೊಂಡೋ ಪ್ರಾಣಬಿಡುವರು. ನಾನು ಹೋದಮೇಲೆ ಎಲ್ಲೆಲ್ಲಿಯೂ ರೋದನಧ್ವನಿಯೇ ಪ್ರಾರಂಭವಾಗುವುದು (೩೬–೩೭). ಇಕ್ಷ್ವಾಕುವಂಶವೂ ಕಪಿವಂಶವೂ ನಾಶವಾಗಿಬಿಡುವುವು. ಆದ್ದರಿಂದ ನಾನು ಕಿಷ್ಕಿಂಧೆಗೆ ಹೋಗುವುದೇ ಇಲ್ಲ (೩೮). ಸೀತೆಯನ್ನು ನೋಡದೆ ಸುಗ್ರೀವನ ಬಳಿಗೆ ಹೋಗಲು ನನ್ನಿಂದ ಆಗದು. ನಾನು ಹೋಗದೆ ಇಲ್ಲಿಯೇ ಇದ್ದುಬಿಟ್ಟರೆ ಧರ್ಮಾತ್ಮರಾದ ರಾಮಲಕ್ಷ್ಮಣರು ಸೀತೆಯ ಸುದ್ದಿಯನ್ನು ತಿಳಿಯುವ ಆಸೆಯಿಂದಲಾದರೂ ಜೀವಿಸಿರುವರು. ಕಪಿಗಳೂ ಉಳಿದುಕೊಳ್ಳುವರು. ಆದುದರಿಂದ ನಾನು ತಾನಾಗಿ ಕೈಗೆ ಸಿಕ್ಕಿದ, ಬಾಯಿಗೆ ಬಿದ್ದ ಆಹಾರದಿಂದ ತೃಪ್ತನಾಗಿ, ಯಾವುದಾದರೊಂದು ಮರದ ಬುಡದಲ್ಲಿ ವಾನಪ್ರಸ್ಥನಾಗಿ ನಿಯಮಪಾಲನೆಮಾಡುತ್ತ ಫಲಸಮೃದ್ಧವಾದ ಈ ಸಮುದ್ರತೀರದಲ್ಲಿ ಇದ್ದುಬಿಡುವೆನು (೩೯–೪೧). ಅಥವಾ ಚಿತೆಯನ್ನು ಏರ್ಪಡಿಸಿ ಅಗ್ನಿಯಲ್ಲಿ ಬಿದ್ದುಬಿಡುವೆನು. ಇಲ್ಲವೆ ಪ್ರಾಣವನ್ನು ತ್ಯಜಿಸಲು ನಿಶ್ಚಯಿಸಿ, ಪ್ರಾಯೋಪವೇಶವನ್ನು ಮಾಡುತ್ತಾ ಕುಳಿತುಬಿಡುವೆನು. ನನ್ನ

ದೇಹವನ್ನು ಕಾಗೆಗಳೂ ಕಾಡುಮೃಗಗಳೂ ತಿಂದುಹಾಕಲಿ! ಸೀತಾದೇವಿಯನ್ನು ನೋಡದಿದ್ದರೆ ನೀರಿಗಾದರೂ ಬಿದ್ದು ನಾನು ಪ್ರಾಣಬಿಡುವುದು ನಿಶ್ಚಯ. ಹೀಗೆ ಒಳ್ಳೆಯ ಉದ್ದೇಶಕ್ಕಾಗಿ ಆತ್ಮತ್ಯಾಗ ಮಾಡುವುದನ್ನು ಮಹರ್ಷಿಗಳು ಅನುಮೋದಿಸಿದ್ದಾರೆಂದು ನನ್ನ ಭಾವನೆ (೪೨–೪೪). ನನಗೆ ಲಭಿಸಬೇಕಾಗಿದ್ದ ಯಶೋಮಾಲಿಕೆಯು, ಸೀತಾದೇವಿಯನ್ನು ಕಾಣದೆಹೋದ್ದರಿಂದ ಎಂದೆಂದಿಗೂ ನನಗೆ ಇಲ್ಲದಂತಾಯಿತು. ಮರದ ಕೆಳಗೆ ತಪಸ್ಸುಮಾಡುತ್ತಲಾದರೂ ಇರುವೆನೇ ಹೊರತು, ಸೀತೆಯನ್ನು ಕಾಣದೆ ಎಂದಿಗೂ ನಾನು ಹಿಂದಿರುಗುವುದಿಲ್ಲ. ಬರಿಗೈಯಲ್ಲಿ ನಾನು ಮಹೇಂದ್ರಪರ್ವತಕ್ಕೆ ಹೋದರೆ, ಅಂಗದನೂ ಕಪಿಗಳೂ ಬದುಕಿ ಉಳಿಯುವುದಿಲ್ಲ" (೪೫–೪೬). ಹೀಗೆ ಚಿಂತಿಸಿದಮೇಲೆ ಹನುಮಂತನಿಗೆ ಇನ್ನೊಂದು ಆಲೋಚನೆ ಹುಟ್ಟಿತು: "ಆತ್ಮಹತ್ಯೆ ಸರಿಯಲ್ಲ. ಅದರಲ್ಲಿ ಬಹಳ ದೋಷಗಳುಂಟು. ಬದುಕಿದ್ದರೆ ಒಂದಲ್ಲ ಒಂದು ದಿನ ಒಳ್ಳೆಯದನ್ನು ಕಾಣಬಹುದು. ಆದ್ದರಿಂದ ನಾನು ಸಾಯಬಾರದು. ಜೀವಿಸಿದ್ದರೆ ಶ್ರೇಯಸ್ಸು ಲಭಿಸಿಯೇ ತೀರುವುದು." ಹೀಗೆ ಬಹುವಿಧದಲ್ಲಿ ಹನುಮಂತನು ಕೊರಗುತ್ತಿದ್ದನು (೪೭–೪೮). ಅವನ ಶೋಕಕ್ಕೆ ಪಾರವೇ ಉಳಿಯಲಿಲ್ಲ. ಆಮೇಲೆ ಆ ಕಪಿಶ್ರೇಷ್ಠನು ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು "ಸೀತೆಯು ಸಿಕ್ಕದಿದ್ದರೆ ಹೋಗಲಿ, ಬಲಾಢ್ಯನಾದ ಈ ರಾವಣನನ್ನಾದರೂ ಕೊಂದುಹಾಕಿ ಸೇಡನ್ನು ತೀರಿಸಿಕೊಳ್ಳುತ್ತೇನೆ! ಅಥವಾ ರಾವಣನನ್ನು ಹಿಂಗಟ್ಟುಕಟ್ಟಿ ಸಮುದ್ರದ ಮೇಲೆ ಹಾರುತ್ತ ಸೆಳೆದೊಯ್ದು ರುದ್ರನಿಗೆ ಪಶುವನ್ನೊಪ್ಪಿಸುವಂತೆ ರಾಮನಿಗೆ ಬಲಿಯಾಗಿ ಒಪ್ಪಿಸಿಬಿಡುತ್ತೇನೆ!" ಎಂದು ಆಲೋಚಿಸಿದನು. ಮತ್ತೆ ಯಾವ ನಿಶ್ಚಯವೂ ಇಲ್ಲದೆ ಚಿಂತಾಗ್ರಸ್ತನಾದನು (೪೯–೫೨). ರಾಮಪತ್ನಿಯಾದ ಯಶಸ್ವಿನಿ ಸೀತೆಯು ಕಣ್ಣಿಗೆ ಬೀಳುವವರೆಗೂ ಮತ್ತೆ ಮತ್ತೆ ಈ ಲಂಕೆಯಲ್ಲಿ ಹುಡುಕಿನೋಡುತ್ತೇನೆ. ಸಂಪಾತಿಯೇನೋ ಸೀತೆ ಇಲ್ಲಿಯೇ ಇದ್ದಾಳೆಂದು ಹೇಳಿದ್ದಾನೆ. ಅವನ ಮಾತನ್ನು ನಂಬಿ ರಾಮನನ್ನೇ ನಾನು ಇಲ್ಲಿಗೆ ಕರೆತಂದರೆ ಹೇಗೆ? ಇಲ್ಲಿ ಸೀತೆಯನ್ನು ಕಾಣದಿದ್ದರೆ ರಾಮನು ಕ್ರುದ್ಧನಾಗಿ ನಮ್ಮ ವಂಶವನ್ನೇ ಸುಟ್ಟುಹಾಕಿಬಿಡುವನು! (೫೩–೫೪). ಆದ್ದರಿಂದ ನಾನು ಆಹಾರನಿಯಮದಿಂದ ಜಿತೇಂದ್ರಿಯನಾಗಿ ಇಲ್ಲಿಯೇ ಇದ್ದುಬಿಡುವೆನು. ನನಗೋಸ್ಕರ ಆ ಜನರೆಲ್ಲರೂ ಸಾಯುವುದು ಬೇಡ" ಎಂದು ಚಿಂತಿಸಿದವು

*

(೫೫). "ಓಹೊ ! ಅಲ್ಲಿ ಅಶೋಕ ವೃಕ್ಷಗಳ ಒಂದು ವನ ಗೋಚರಿಸುತ್ತಿದೆ. ಅಲ್ಲಿಗೆ ಹೋಗುವೆನು. ಅದನ್ನು ನಾನು ಹುಡುಕಲಿಲ್ಲ. ಈ ರಾಕ್ಷಸರಿಗೆ ಕಷ್ಟ ಒದಗಲೆಂದು ವಸು ರುದ್ರಾದಿ ದೇವತೆಗಳಿಗೆ ವಂದಿಸುತ್ತೇನೆ. ಈ ರಾಕ್ಷಸರನ್ನು ಜಯಿಸಿ, ತವಸ್ವಿಗೆ ತಪಸ್ಸಿದ್ಧಿಯು ಲಭಿಸುವಂತೆ ಶ್ರೀರಾಮನಿಗೆ ಇಕ್ಷ್ವಾಕುಕುಲ ನಂದಿನಿಯಾದ ಸೀತೆಯು ಲಭಿಸುವಂತೆ ಮಾಡುತ್ತೇನೆ" ಎಂದು ವಾನರ ಶ್ರೇಷ್ಠನು ಒಂದು ಕ್ಷಣಕಾಲ ಆಲೋಚಿಸಿ ಎದ್ದು ನಿಂತನು (೫೬–೫೯). "ಶ್ರೀರಾಮನಿಗೆ ನಮಸ್ಕಾರ! ಲಕ್ಷ್ಮಣನಿಗೆ ನಮಸ್ಕಾರ! ಜನಕಪುತ್ರಿಯಾದ ದೇವಿಗೆ ನಮಸ್ಕಾರ! ರುದ್ರರಿಗೂ ಇಂದ್ರ ಯಮ ವಾಯುದೇವತೆಗಳಿಗೂ, ಚಂದ್ರ ಸೂರ್ಯ ಮರುತ್ತುಗಳಿಗೂ ನಮಸ್ಕಾರ!" ಎಂದು ಅವರೆಲ್ಲರಿಗೂ ನಮಸ್ಕರಿಸಿ, ಸುಗ್ರೀವನಿಗೂ ವಂದಿಸಿ ಅಶೋಕವನದ ಎಲ್ಲಾ ದಿಕ್ಕುಗಳನ್ನೂ ಗಮನಿಸಿ ನೋಡಿದನು(೬೦–೬೧). ಮನಸ್ಸಿನಲ್ಲಿ ಅಶೋಕವನಕ್ಕೇ ಹೋದಂತೆ ಭಾವಿಸಿಕೊಂಡು, ಅಲ್ಲಿ ಏನೇನಿರಬಹುದೆಂದು ಆಲೋಚಿಸಿದನು: "ಅಲ್ಲಿ ಬಹಳ ರಾಕ್ಷಸರು ಇರುತ್ತಾರೆಂಬುದರಲ್ಲಿ ಸಂಶಯವಿಲ್ಲ. ಅದು ಪರಿಷ್ಕಾರಮಾಡಿದ ಉದ್ಯಾನವನ. ಕಾವಲುಗಾರರು ಎಚ್ಚರಿಕೆಯಿಂದ ಕಾಯುತ್ತಿರಬಹುದು. ಭಗವಾನ್ ವಾಯುದೇವನೂ ಅಲ್ಲಿ ಬಿರುಸಾಗಿ ಬೀಸಲಾರನು (೬೨–೬೪). ಒಳ್ಳೆಯದು. ನಾನು ರಾಮನ ಕಾರ್ಯಸಿದ್ಧಿಗಾಗಿಯೂ, ರಾವಣನನ್ನು ವಂಚಿಸುವುದಕ್ಕಾಗಿಯೂ ದೇಹವನ್ನು ಚಿಕ್ಕದಾಗಿ ಮಾಡಿಕೊಂಡಿರುವೆನು. ದೇವತೆಗಳೂ ಋಷಿಗಳೂ ನನ್ನ ಕಾರ್ಯವನ್ನು ಕೈಗೂಡಿಸಲೆಂದು ಪ್ರಾರ್ಥಿಸುತ್ತೇನೆ. ಭಗವಾನ್ ಬ್ರಹ್ಮದೇವನೂ ಇಂದ್ರಾದಿದೇವತೆಗಳೂ ಮಾರ್ಗರಕ್ಷಕರಾದ ಎಲ್ಲ ದೇವತೆಗಳೂ ನನಗೆ ಕಾರ್ಯಸಿದ್ಧಿಯನ್ನು ಅನುಗ್ರಹಿಸಲಿ!" (೬೫–೬೮) ಎಂದು ಪ್ರಾರ್ಥಿಸಿ, "ನನಗೆ ಪೂಜ್ಯಳಾದ ಆ ದೇವಿಯ ಪೂರ್ಣಚಂದ್ರನಂತಹ ನಿಷ್ಕಳಂಕವಾದ ಮುಖವನ್ನು ಯಾವಾಗ ನೋಡುವೆನೋ? ಉಬ್ಬಿ ಎಳಸಾದ ಮೂಗು, ಶುಭ್ರವಾದ ಹಲ್ಲುಗಳು, ಸುಂದರವಾದ ಮುಗುಳುನಗೆ, ಪದ್ಮದಳದಂತಹ ನಯನಗಳು ಆಕೆಗೆ ಇದ್ದಿರಬೇಕು (೬೯). ನೀಚನೂ, ಪಾಪಿಯೂ, ಘೋರ ಕರ್ಮಿಯೂ, ಭಯಂಕರನೂ, ವೇಷಧಾರಿಯೂ ಆದ ರಾವಣನು ಬಲಾತ್ಕಾರದಿಂದ ಅಪಹರಿಸಿ ತಂದ ದಿಕ್ಕಿಲ್ಲದ ಆ ಅಬಲೆಯನ್ನು ನಾನು ನೋಡುವ ಬಗೆ ಹೇಗೆ?" ಎಂದು ಚಿಂತಿಸಿದನು (೭೦).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಹದಿಮೂರನೆಯ ಸರ್ಗ

## ಸರ್ಗ ೧೪

### ಹನುಮಂತನು ಅಶೋಕವನಕ್ಕೆ ಹೋಗಿ ಅದರ ಸೌಂದರ್ಯವನ್ನು ನೋಡುತ್ತ ಸೀತಾದೇವಿಯು ಅಲ್ಲಿಗೆ ಬರಬಹುದೆಂಬ ನಿರೀಕ್ಷಣೆಯಿಂದ ಒಂದು ಶಿಂಶುಪಾವೃಕ್ಷವನ್ನೇರಿ ಕುಳಿತುದು.

ಅನಂತರ ಮಹಾತೇಜಸ್ವಿಯಾದ ಆಂಜನೇಯನು ರಾವಣನ ಅರಮನೆಯಿಂದ ನೆಟ್ಟಗೆ ಅಶೋಕವನದ ಪ್ರಾಕಾರಕ್ಕೆ ನೆಗೆದು, ಅರಳಿದ ನಾನಾ ಬಗೆಯ ವೃಕ್ಷಗಳನ್ನು ನೋಡಿದನು (೧–೨). ವಸಂತಋತುವಿನ * ಆರಂಭವಾದ್ದರಿಂದ ಅಲ್ಲಿ ಸಾಲ, ಅಶೋಕ, ಸಂಪಗೆ, ಉದ್ದಾಲಕ, ನಾಗಕೇಸರ, ಮಾವು ಮೊದಲಾದ ಮರಗಳು ಹೂಬಿಟ್ಟಿದ್ದವು. ಧನುಸ್ಸಿನ ಹೆದೆಯಿಂದ ಚಿಮ್ಮಿದ ಬಾಣದಂತೆ ಆ ಪ್ರಾಕಾರದಿಂದ ನೆಗೆದು, ಅನೇಕ ಲತೆಗಳಿಂದ ಪರಿವೃತವಾದ ಒಂದು ಮಾವಿನ ತೋಪಿನಲ್ಲಿ ಇಳಿದನು (೩–೪). ಆ ತೋಪು ಬೆಳ್ಳಿಯಂತೆಯೂ ಬಂಗಾರದಂತೆಯೂ ಬಣ್ಣವುಳ್ಳ ವಿವಿಧ ವೃಕ್ಷಗಳಿಂದ ತುಂಬಿ ಪಕ್ಷಿಗಳ ಕಿಲಕಿಲ ಧ್ವನಿಯಿಂದ ರಮಣೀಯವಾಗಿದ್ದಿತು. ಅರಳಿದ ಹೂಗಳಿಂದ ಸೂರ್ಯೋದಯವಾದಂತೆ ಬೆಳಗುತ್ತಿದ್ದ ಆ ತೋಟದಲ್ಲಿ ನಾನಾಬಗೆಯ ಮೃಗಗಳೂ ಪಕ್ಷಿಗಳೂ ಇದ್ದವು (೫–೬). ಹೂ ಹಣ್ಣುಗಳಿಂದ ವಿರಾಜಿಸುವ ಮರಗಳೂ ಕೋಗಿಲೆಗಳೂ ಭ್ರಮರಗಳೂ ತುಂಬಿದ್ದವು. ಜನಮನೋಹರವಾದ ವಸಂತಕಾಲವು ಸಮೀಪಿಸಿದ್ದರಿಂದ ಮದಿಸಿದ ನವಿಲುಗಳೂ ಮೃಗಪಕ್ಷಿಗಳೂ ಯಥೇಚ್ಛವಾಗಿ ಅಲೆಯುತ್ತಿದ್ದವು (೭–೮). ಹನುಮಂತನು ರಾಜಪುತ್ರಿಯಾದ ಸೀತೆಯನ್ನು ಹುಡುಕಲು ಧುಮುಕಿದ್ದರಿಂದ ಗಿಡಮರಗಳು ಕದಲಿ, ನಿದ್ರಿಸುತ್ತಿದ್ದ ಹಕ್ಕಿಗಳು ಎಚ್ಚರಗೊಂಡು ಹಾರಾಡತೊಡಗಿದವು. ಅವುಗಳ ರೆಕ್ಕೆಗಳು ಬೀಸಿ ಮರಗಳಿಂದ ನಾನಾವರ್ಣದ ಹೂಗಳು ಚಲ್ಲಿಹೋದವು (೯–೧೦). ಆ ಹೂಗಳಿಂದ ಮುಚ್ಚಿಹೋದ ಹನುಮಂತನು ಪುಷ್ಪಮಯವಾದ ಬೆಟ್ಟದಂತೆ ಕಂಗೊಳಿಸುತ್ತಿದ್ದನು. ಆ ಪುಷ್ಪವಾಟಿಕೆಯಲ್ಲಿ ಮರಗಳ ನಡುವೆ ಬರುತ್ತಿದ್ದ ಪುಷ್ಪಮಯನಾದ ಹನುಮಂತನನ್ನು

---

* ಆ ದಿನ ಫಾಲ್ಗುಣ ಶುದ್ಧ ತ್ರಯೋದಶಿಯಾಗಿತ್ತು. ಹುಣ್ಣಿಮೆಯಿಂದ ಹುಣ್ಣಿಮೆಗೆ ತಿಂಗಳು ಎಂಬ ಕ್ರಮದಲ್ಲಿ ಫಾಲ್ಗುಣ ಶುದ್ಧ ಹುಣ್ಣಿಮೆ ಕಳೆದ ಮೇಲೆ ವಸಂತಕಾಲ ಪ್ರಾರಂಭವಾಗುವುದು.

ನೋಡಿ, ಅಲ್ಲಿದ್ದ ಸಕಲ ಪ್ರಾಣಿಗಳೂ ವಸಂತನೇ ಈ ರೂಪದಲ್ಲಿ ಬರುತ್ತಿದ್ದಾನೆಂದು ಭಾವಿಸಿಕೊಂಡವು ! (೧೧-೧೨). ಉದುರಿದ ಹೂಗಳಿಂದ ಭೂಷಿತವಾದ ವನಭೂಮಿಯು, ಅಲಂಕರಿಸಿಕೊಂಡ ತರುಣಿಯಂತೆ ಸುಂದರವಾಗಿ ತೋರಿತು. ಒಂದೊಂದುಸಲ ಹನುಮಂತನು ಬಲವಾಗಿ ಮರಗಳನ್ನು ಅಲ್ಲಾಡಿಸಿ ಹೂಗಳನ್ನೆಲ್ಲಾ ಉದುರಿಸಿಬಿಡುತ್ತಿದ್ದನು. ಒಂದೊಂದುಸಲ ಹೂ ಹಣ್ಣು ಎಲೆಗಳೆಲ್ಲಾ ಉದುರಿಹೋಗಲು, ಅವು ಮೋಟುಮರಗಳಂತಾಗಿಬಿಡುತ್ತಿದ್ದವು. ಆಗ ಆ ಮರಗಳು ಜೂಜಿನಲ್ಲಿ ವಸ್ತ್ರ ಒಡವೆಗಳನ್ನೆಲ್ಲಾ ಕಳೆದುಕೊಂಡ ಜೂಜುಖೋರರಂತೆ ಕಾಣುತ್ತಿದ್ದವು ! (೧೩-೧೪). ಹೂ ಹಣ್ಣು ಎಲೆಗಳು ಉದುರಿ, ಪಕ್ಷಿಗಳೆಲ್ಲವೂ ಹಾರಿಹೋಗಲಾಗಿ, ಆ ಮರಗಳಲ್ಲಿ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದಂತೆ ದೊಡ್ಡ ಕೊಂಬೆಗಳು ಮಾತ್ರ ಉಳಿದವು (೧೬-೧೭). ಹನುಮಂತನು ತನ್ನ ಬಾಲದಿಂದಲೂ ಕೈಕಾಲುಗಳಿಂದಲೂ ಮರಗಳನ್ನು ತಳ್ಳಿ ಅಲ್ಲಾಡಿಸುತ್ತಿದ್ದನು. ಆಗ ಆ ಅಶೋಕವನವು ತಲೆಗೂದಲು ಕೆದರಿ, ಅಂಗರಾಗವು ಒರಸಿ, ತುಟಿಯು ಮಾಸಿ, ಅಸ್ತವ್ಯಸ್ತಳಾದ ತರುಣಿಯಂತೆ ಕಾಣಿಸುತ್ತಿದ್ದಿತು(೧೮-೧೯). ಮಳೆಗಾಲದಲ್ಲಿ ವಿಂಧ್ಯದ ಮೇಲಿರುವ ಮೇಘಪಂಕ್ತಿಯನ್ನು ಬಿರುಗಾಳಿಯು ಚದರಿಸುವಂತೆ, ಹನುಮಂತನು ಬಳ್ಳಿಗಳ ಪೊದೆಗಳನ್ನು ಕಿತ್ತೆಸೆಯುತ್ತ ಮುಂದೆ ಹೋದನು. ಅವನು ಅಲ್ಲಲ್ಲಿ ರತ್ನ, ಚಿನ್ನ, ಬೆಳ್ಳಿಗಳಿಂದ ನಿರ್ಮಿಸಿದ ಸ್ಥಳಗಳನ್ನೂ ಸ್ವಚ್ಛವಾದ ನೀರಿನಿಂದ ತುಂಬಿ ಮಣಿಮಯ ಸೋಪಾನಗಳಿರುವ ಜಲಾಶಯಗಳನ್ನೂ ಕಂಡನು (೨೦-೨೨). ಆ ಜಲಾಶಯಗಳು ಮುತ್ತು ಹವಳಗಳ ಮರಳುದಿಣ್ಣೆಗಳಿಂದಲೂ, ಸ್ಫಟಿಕದ ನೆಲೆಗಟ್ಟುಗಳಿಂದಲೂ, ಚಿನ್ನದ ತೀರವೃಕ್ಷಗಳಿಂದಲೂ ಪ್ರಕಾಶಿಸುತ್ತಿದ್ದವು. ಅವುಗಳಲ್ಲಿ ತಾವರೆ ಮುಂತಾದ ಹೂಗಳೂ, ಕೂಗುತ್ತಿದ್ದ ಚಕ್ರವಾಕ, ನತ್ಯೂಹ, ಹಂಸ ಮುಂತಾದ ಜಲಪಕ್ಷಿಗಳೂ ತುಂಬಿದ್ದವು (೨೩-೨೪). ತೀರವೃಕ್ಷಗಳಿಂದ ಶೋಭಿಸುವ ನದಿಗಳಲ್ಲಿ ಅಮೃತಮಯವಾದ ನೀರು ಹರಿಯುತ್ತಿತ್ತು. ಜಲಾಶಯದ ಸುತ್ತಲೂ ನಾನಾ ಲತೆಗಳೂ, ಪೊದೆಗಳೂ, ಕಲ್ಪವೃಕ್ಷ, ಕರವೀರ ಪುಷ್ಪಗಳೂ ಪಸರಿಸಿದ್ದವು (೨೫-೨೬). ಹನುಮಂತನು ಮುಂದೆ ಬರಲಾಗಿ ಜಲಧರಸಂಕಾಶವೂ ಉತ್ತುಂಗಶೃಂಗವೂ ಆಗಿ, ಕಲ್ಲುಮಂಟಪಗಳಿಂದಲೂ ನಾನಾ ವೃಕ್ಷಗಳಿಂದಲೂ ಶೋಭಿಸುತ್ತಿದ್ದ ರಮಣೀಯವಾದ ಒಂದು ಬೆಟ್ಟವು ಗೋಚರಿಸಿತು(೨೭-೨೮).

ಪ್ರಣಯಕುಪಿತೆಯಾದ ತರುಣಿಯು ತನ್ನ ಕಾಂತನ ತೊಡೆಯಿಂದ ಇಳಿದು ರಭಸದಿಂದ ಹೊರಟುಹೋಗುವಂತೆ, ಒಂದು ನದಿಯು ಆ ಬೆಟ್ಟದಿಂದ ಧುಮುಕಿ ಹರಿಯುತ್ತಿತ್ತು ! ಅದರ ತೀರದಲ್ಲಿ ಬಾಗಿದ್ದ ಮರಗಳು, ಕುಪಿತೆಯಾದ ಆ ತರುಣಿಯನ್ನು ಸಮಾಧಾನಪಡಿಸುವ ಬಂಧುಗಳಂತೆ ಕಾಣುತ್ತಿದ್ದವು ! (೨೯–೩೦). ಸ್ವಲ್ಪದೂರ ಹರಿದಮೇಲೆ ನದಿಯು ಕೊಂಚ ಬಾಗಿ, ಬೆಟ್ಟದ ಕಡೆಗೆ ತಿರುಗಿತ್ತು. ಆದ್ದರಿಂದ ಮತ್ತೆ ಸಮಾಧಾನಗೊಂಡು ಆ ಚೆಲುವೆಯು ತನ್ನ ಕಾಂತನ ಬಳಿಗೆ ಹಿಂದಿರುಗಿದಂತೆ ಕಾಣಿಸುತ್ತಿತ್ತು (೩೧). ಬೆಟ್ಟದ ಸಮೀಪದಲ್ಲಿ ತಿಳಿನೀರಿನಿಂದ ತುಂಬಿ ನೀರುಹಕ್ಕಿಗಳಿಂದ ಕೂಡಿದ ಅನೇಕ ಸರೋವರಗಳು ಇದ್ದವು. ಯತ್ನನಿರ್ಮಿತವಾದ ಒಂದು ಕೊಳವೂ ಅಲ್ಲಿತ್ತು. ಅದರಲ್ಲಿ ರತ್ನಖಚಿತವಾದ ಸೋಪಾನಗಳೂ ಮುತ್ತಿನ ಮರಳೂ ಇದ್ದವು. ಆ ಅಶೋಕವನವು ವಿವಿಧಮೃಗಗಳಿಂದಲೂ ವಿಶ್ವಕರ್ಮನು ನಿರ್ಮಿಸಿದ ಸೌಧಗಳಿಂದಲೂ ಕೃತ್ರಿಮವನಗಳಿಂದಲೂ ರಂಜಿಸುತ್ತಿತ್ತು (೩೨–೩೪). ಪುನ್ನಾಗ, ಚಂಪಕ ಮುಂತಾದ ವೃಕ್ಷಗಳು ಪುಷ್ಪಫಲಗಳಿಂದ ಪ್ರಜ್ವಲಿಸುತ್ತಿದ್ದವು. ಎಲ್ಲಾ ಮರಗಳೂ ಕೊಡೆಯಂತೆ ಹರಡಿಕೊಂಡಿದ್ದವು. ಪ್ರತಿಯೊಂದು ಮರಕ್ಕೂ ಉನ್ನತವಾದ ವೇದಿಕೆಯೂ ಅದನ್ನು ಹತ್ತಲು ಸುತ್ತಲೂ ಸುವರ್ಣಮಯವಾದ ಕಟ್ಟೆಗಳೂ ಇದ್ದವು (೩೫–೩೬). ಇದೆಲ್ಲವನ್ನೂ ನೋಡುತ್ತ ಹನುಮಂತನು ಮುಂದೆ ಹೋಗಿ ಲತೆಗಳಿಂದ ಪರಿವೃತವಾಗಿಯೂ ಪರ್ಣಗಳಿಂದ ನಿಬಿಡವಾಗಿಯೂ ಸುತ್ತಲೂ ಚಿನ್ನದ ಕಟ್ಟೆಗಳಿಂದ ಶೋಭಿಸುತ್ತಲೂ ಇದ್ದ ಒಂದು ಶಿಂಶಪಾವೃಕ್ಷವನ್ನು ನೋಡಿದನು (೩೭–೩೮). ಆ ವೃಕ್ಷದ ಸುತ್ತಲೂ ಸುಂದರವಾದ ಭೂಪ್ರದೇಶವನ್ನೂ ನೀರಿನ ಕಾಲುವೆಗಳನ್ನೂ ಬೆಂಕಿಯಂತೆ ಜ್ವಲಿಸುವ ಸುವರ್ಣವೃಕ್ಷಗಳನ್ನೂ ಕಂಡನು. ಮೇರುವಿನ ಪ್ರಭೆಯು ಸೂರ್ಯನನ್ನು ಆವರಿಸುವಂತೆ, ಆ ವೃಕ್ಷಗಳ ಪ್ರಭೆಯು ತನ್ನನ್ನು ಆವರಿಸಲಾಗಿ ಹನುಮಂತನು 'ಆಹಾ! ನಾನೊಂದು ಚಿನ್ನದ ಕಪಿಯಾದೆನು!' ಎಂದುಕೊಂಡನು (೩೯–೪೦). ಸುತ್ತಲೂ ಸುವರ್ಣವೃಕ್ಷಗಳಿಂದ ಪರಿವೃತವಾದ ಶಿಂಶಪಾವೃಕ್ಷವು ಗಾಳಿ ಬೀಸಿದಾಗ ನೂರಾರು ಚಿನ್ನದ ಗೆಜ್ಜೆಗಳಂತೆ ಇಂಪಾಗಿ ಧ್ವನಿಗೈಯುವುದನ್ನು ಕಂಡು ಹನುಮಂತನಿಗೆ ವಿಸ್ಮಯವಾಯಿತು. ಅವನು ಚಿಗುರೆಲೆಗಳಿಂದಲೂ ಹೂಗಳಿಂದಲೂ ಮನೋಹರವಾದ ಆ ಮರವನ್ನು ಹತ್ತಿ

ಕುಳಿತನು (೪೧–೪೨). ಅವನು ತನ್ನಲ್ಲಿ "ನಾನು ಇಲ್ಲಿ ಕುಳಿತು ಸೀತಾದೇವಿ ಗಾಗಿ ಸುತ್ತಲೂ ನೋಡುತ್ತಿರುವೆನು. ಶ್ರೀರಾಮನ ದರ್ಶನಕ್ಕಾಗಿ ಹಾತೊರೆ ಯುತ್ತ ದುಃಖಿತಳಾಗಿ ಅವಳು ಇಲ್ಲಿ ಸುಳಿದಾಡಬಹುದು. ಸಂಪಿಗೆ, ಚಂದನ— ಮುಂತಾದ ಮರಗಳಿಂದ ರಮ್ಯವಾದ ಈ ಅಶೋಕವನವು ಆ ದುರಾತ್ಮನಿಗೆ (ರಾವಣನಿಗೆ) ಸೇರಿದ್ದೇ ಸರಿ (೪೩–೪೪). ನೀರುಹಕ್ಕಿಗಳಿಂದ ಮನೋಹರ ವಾದ ತಾವರೆಯ ಬಳ್ಳಿಗಳು ಇಲ್ಲಿರುವುದರಿಂದ ಜಾನಕಿಯು ಇತ್ತ ಬಂದೇ ಬರು ವಳು. ಶ್ರೀರಾಮನ ಪತ್ನಿ ವನಸಂಚಾರ ಕುಶಲೆ. ಶ್ರೀರಾಮನ ಚಿಂತೆಯಿಂದ ಕೊರಗುತ್ತಿರುವಳು. ಸ್ವಲ್ಪವಾದರೂ ಮನಃಶಾಂತಿ ದೊರಕೀತೆಂದು ಆ ಹರಿಣಾಕ್ಷಿಯು ಈ ವನಕ್ಕೆ ಬರದೆ ಇರಲಾರಳು ಅವಳು ಹಿಂದೆ ಅರಣ್ಯದಲ್ಲಿ ಸಂಚರಿಸುತ್ತ ಮೃಗಪಕ್ಷಿಗಳನ್ನು ಪ್ರೀತಿಸುತ್ತಿದ್ದವಳು. ಪತಿವ್ರತೆಯಾದ ಆ ಜನಕಪುತ್ರಿ ಇಲ್ಲಿದ್ದರೆ ತಿರುಗಾಡುತ್ತ ಬಂದೇ ಬರುವಳು (೪೫–೪೯). ಈ ನದಿಯು ತಿಳಿನೀರಿನಿಂದ ತುಂಬಿ ಹರಿಯುತ್ತಿದೆ. ಸೀತಾದೇವಿಯು ಸ್ನಾನಾದಿಪ್ರಾತಃಕೃತ್ಯಗಳನ್ನು ನೆರವೇರಿಸುವುದಕ್ಕಾದರೂ ಇಲ್ಲಿಗೆ ಬಂದೇ ಬರ ಬೇಕು. ಜಾನಕಿಯು ರಾಜಾಧಿರಾಜನಾದ ಶ್ರೀರಾಮಚಂದ್ರನಿಗೆ ಅನುರೂಪ ಳಾದ ಪತ್ನಿ. ಅವಳಿಗೆ ಅನುರೂಪವಾದದ್ದು ಈ ಅಶೋಕವನ. ಚಂದ್ರಮುಖಿ ಯಾದ ಆ ದೇವಿಯು ಬದುಕಿರುವುದೇ ದಿಟವಾದರೆ, ಪವಿತ್ರವಾದ ಈ ನದಿಯ ಬಳಿಗೆ ಬರುವುದು ನಿಶ್ಚಯ" ಎಂದುಕೊಂಡನು (೫೦–೫೨). ಮಹಾತ್ಮನಾದ ಆಂಜನೇಯನು ಈ ರೀತಿ ನಿಶ್ಚಯಿಸಿ, ಹೂಗಳಿಂದಲೂ ಎಲೆಗಳಿಂದಲೂ ದಟ್ಟ ವಾದ ಒಂದು ಸ್ಥಳದಲ್ಲಿ ಮರೆಯಾಗಿ ಕುಳಿತು, ಸೀತೆಗಾಗಿ ಅಶೋಕವನವನ್ನು ಸುತ್ತಲೂ ಗಮನಿಸಿ ನೋಡುತ್ತಿದ್ದನು (೫೩).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಹದಿನಾಲ್ಕನೆಯ ಸರ್ಗ

# ಸರ್ಗ ೧೫

ಹನುಮಂತನು ಸೀತೆಯನ್ನು ಕಂಡು, ವಿವಿಧಕಾರಣಗಳಿಂದ
ಅವಳೇ ಸೀತೆಯೆಂದು ಮನಸ್ಸಿನಲ್ಲಿ ನಿರ್ಧರಿಸುವುದು.

ಹೀಗೆ ಹನುಮಂತನು ಸೀತಾನಿರೀಕ್ಷಣೆಮಾಡುತ್ತ ಶಿಂಶಪಾವೃಕ್ಷದ ಮೇಲೆ ಕುಳಿತು ಸುತ್ತಲೂ ಕಣ್ಣಿಟ್ಟು ನೋಡುತ್ತಿದ್ದನು. ಅಶೋಕವನವಾದರೋ ಕಲ್ಪಲತೆಗಳಿಂದಲೂ ಮರಗಳಿಂದಲೂ ರಮ್ಯವಾಗಿ, ದಿವ್ಯಗಂಧವನ್ನು ಬೀರುತ್ತ ಲಿತ್ತು (೧–೨). ಅಲ್ಲಲ್ಲಿ ಉಪ್ಪರಿಗೆಯ ಮನೆಗಳಿಂದಲೂ ಕೋಗಿಲೆಗಳ ಕೂಗಿನಿಂದಲೂ ನಂದನವನಕ್ಕೆ ಎಣೆಯಾಗಿದ್ದಿತು. ಸುವರ್ಣಮಯವಾದ ಪದ್ಮೋತ್ಪಲಗಳಿರುವ ಕೊಳಗಳಿಂದಲೂ ಬೆಲೆಬಾಳುವ ಪೀಠ, ರತ್ನಕಂಬಳಿ ಗಳಿಂದಲೂ ಅಲಂಕೃತವಾಗಿದ್ದಿತು (೩–೪). ಮರಗಳು ಸರ್ವಋತುಗಳಲ್ಲಿಯೂ ಬಿಡುವ ಹೂಹಣ್ಣುಗಳಿಂದ ರಂಜಿಸುತ್ತಿದ್ದವು. ಅಶೋಕಪುಷ್ಪಗಳು ಉದಯಿಸುವ ಸೂರ್ಯನಂತೆ ಪ್ರಕಾಶಿಸುತ್ತಿದ್ದವು. ಒಮ್ಮೊಮ್ಮೆ ಎಲೆ, ಕೊಂಬೆಗಳೊಂದೂ ಕಾಣದಂತೆ ಹಕ್ಕಿಗಳು ಮರಗಳ ಮೇಲೆ ತುಂಬಿಕೊಳ್ಳುತ್ತಿದ್ದವು (೫–೬). ಅಶೋಕ, ಕರ್ಣಿಕಾರ, ಮುತ್ತುಗ, ಪುನ್ನಾಗ, ಸಪ್ತಪರ್ಣ ಮೊದಲಾದ ಮರಗಳು, ಪುಷ್ಪಭಾರದಿಂದ ನೆಲವನ್ನು ಮುಟ್ಟುವಂತೆ ಬಾಗಿದ್ದವು. ಪುಷ್ಪಗಳ ಪ್ರಭೆಯಿಂದ ಅಶೋಕವನವೇ ಬೆಂಕಿಯಿಂದ ಉರಿಯುತ್ತಿದೆಯೋ ಎಂಬಂತೆ ತೋರುತ್ತಿತ್ತು (೭–೯). ನಾನಾವರ್ಣದ ಅಶೋಕಪುಷ್ಪಗಳು ಅರಳಿದ್ದವು. ಆದ್ದರಿಂದ ಕೆಲವು ಮರಗಳು ಚಿನ್ನದಂತೆಯೂ ಕೆಲವು ಅಗ್ನಿಜ್ವಾಲೆಯಂತೆಯೂ ಕೆಲವು ನೀಲಾಂಜನದಂತೆಯೂ ಶೋಭಿಸುತ್ತಿದ್ದವು. ಅಶೋಕವನವು ನಂದನ ವನ ಚೈತ್ರರಥವನಗಳಂತೆ ಮನೋಹರವಾಗಿ, ಹೂಗಳೆಂಬ ನಕ್ಷತ್ರಗಳಿಂದ ತುಂಬಿದ ಮತ್ತೊಂದು ಗಗನಸ್ಥಳದಂತೆ ವಿರಾಜಿಸುತ್ತಿದ್ದಿತು (೧೦–೧೨). ಪುಷ್ಪಗಳೆಂಬ ಅಸಂಖ್ಯಾತ ರತ್ನಗಳಿಂದ ತುಂಬಿದ್ದ ಐದನೆಯ ಸಾಗರವೋ ಎಂಬಂತೆ ವಿಶಾಲವಾಗಿ, ಮಕರಂದವನ್ನು ಸುರಿಸುವ ಪುಷ್ಪಿತವೃಕ್ಷಗಳಿಂದ ನಿಬಿಡವಾಗಿ, ಮೃಗಪಕ್ಷಿಗಳ ವಿವಿಧ ಧ್ವನಿಗಳಿಂದ ಮನೋಜ್ಞವಾಗಿ, ನಾನಾ ಪುಷ್ಪಗಳ ಸುಗಂಧದಿಂದ ಮನೋಹರವಾದ ಗಂಧಮಾದನ ಪರ್ವತದಂತೆ ಎಸೆಯುತ್ತಿದ್ದಿತು (೧೩–೧೪). ಹನುಮಂತನು ಅದೆಲ್ಲವನ್ನೂ ನೋಡುತ್ತ

ಸ್ವಲ್ಪ ದೂರದಲ್ಲಿ ಚೈತ್ಯಪ್ರಾಸಾದದಂತೆ ವರ್ತುಲಾಕಾರವಾದ ಒಂದು ಉನ್ನತ ಭವನವನ್ನು ಕಂಡನು. ಅದು ಕೈಲಾಸದಂತೆ ಬಿಳುಪಾಗಿ, ಸಾವಿರಾರು ಕಂಭಗಳಿಂದ ಯುಕ್ತವಾಗಿತ್ತು. ಹವಳದ ಮೆಟ್ಟಿಲುಗಳೂ ಬಂಗಾರದ ವೇದಿಕೆಗಳೂ ಕಣ್ಣನ್ನು ಕೋರೈಸುತ್ತಿದ್ದವು. ಆ ಭವನವು ಆಕಾಶವನ್ನು ಭೇದಿಸಿಕೊಂಡು ಹೋಗುವಂತೆ ಎತ್ತರವಾಗಿಯೂ ಸ್ವಚ್ಛವಾಗಿಯೂ ಇತ್ತು (೧೫–೧೮). ಹನುಮಂತನು ಅದನ್ನು ವೀಕ್ಷಿಸುತ್ತಿರುವಾಗ ಅದರ ಬುಡದಲ್ಲಿ ರಾಕ್ಷಸಸ್ತ್ರೀಯರಿಂದ ಪರಿವೃತಳಾಗಿ ಮಲಿನವಸ್ತ್ರವನ್ನುಟ್ಟಿದ್ದ ಒಬ್ಬ ಸ್ತ್ರೀಯನ್ನು ನೋಡಿದನು. ಅವಳು ಬಾರಿಬಾರಿಗೂ ನಿಟ್ಟುಸಿರುಬಿಡುತ್ತ ಉಪವಾಸದಿಂದ ಕೃಶಳಾಗಿ, ಶುಕ್ಲಪಕ್ಷದ ಆರಂಭದಲ್ಲಿರುವ ಚಂದ್ರರೇಖೆಯಂತೆ ಕಾಣಿಸುತ್ತಿದ್ದಳು. ದೇಹಕಾಂತಿಯು ಸ್ವಲ್ಪ ಮಾಸಿಹೋದುದರಿಂದ ಹೊಗೆಯು ಆವರಿಸಿದ ಅಗ್ನಿಜ್ವಾಲೆಯಂತೆ ತೋರುತ್ತಿದ್ದಳು (೧೯–೨೦). ಮಲಿನವಾದ ಒಂದು ಪಟ್ಟೆಸೀರೆಯನ್ನು ಮೈಗೆ ಸುತ್ತಿಕೊಂಡು ನಿರಾಭರಣಳಾಗಿದ್ದ ಆಕೆ, ಹೂವಿಲ್ಲದೆ ಕೆಸರಿನಿಂದ ಲಿಪ್ತವಾದ ಪದ್ಮಲತೆಯಂತೆ ಇದ್ದಳು. ಅಂಗಾರಕಗ್ರಹದಿಂದ ಪೀಡಿತವಾದ ರೋಹಿಣೀನಕ್ಷತ್ರದಂತೆ, ಅತಿದುಃಖದಿಂದ ಸಂತಪ್ತಳಾಗಿದ್ದಳು (೨೧–೨೨). ದೈನ್ಯದಿಂದಲೂ ದುಃಖದಿಂದಲೂ ಸದಾ ಏನನ್ನೋ ಚಿಂತಿಸುತ್ತಾ ಧಾರಾಕಾರವಾಗಿ ಕಣ್ಣೀರನ್ನು ಸುರಿಸುತ್ತಿದ್ದಳು. ಉಪವಾಸದಿಂದ ಕೃಶಳಾಗಿದ್ದಳು. ಅವಳಿಗೆ ಎತ್ತ ತಿರುಗಿದರೂ ಪ್ರಿಯಜನರಿಲ್ಲದೆ ಘೋರರಾಕ್ಷಸಿಯರೇ ಕಾಣಿಸುತ್ತಿದ್ದರು. ಆದ್ದರಿಂದ ತನ್ನ ಗುಂಪಿನಿಂದ ತಪ್ಪಿ ಬಂದು, ನಾಯಿಗಳ ಮಧ್ಯದಲ್ಲಿ ಸಿಕ್ಕಿದ ಹೆಣ್ಣು ಜಿಂಕೆಯಂತೆ ಇದ್ದಳು (೨೩–೨೪). ಕೃಷ್ಣಸರ್ಪದಂತೆ ಕಪ್ಪಾಗಿಯೂ ನೀಳವಾಗಿಯೂ ಇದ್ದ ವೇಣಿಯು ಬೆನ್ನಮೇಲೆ ಲಂಬಿಸಿದ್ದುದರಿಂದ, ಶರತ್ಕಾಲದಲ್ಲಿ ದಟ್ಟವಾದ ವನರಾಜಿಯಿಂದ ವಿರಾಜಿಸುವ ಭೂದೇವಿಯಂತೆ ತೋರುತ್ತಿದ್ದಳು (೨೫). ಆಂಜನೇಯನು ಸುಖಾರ್ಹಳೂ ಕಷ್ಟವನ್ನು ಅರಿಯದವಳೂ ವಿಶಾಲಾಕ್ಷಿಯೂ ಆದ ಆ ಸ್ತ್ರೀಯನ್ನು ಗಮನಿಸಿ ನೋಡಿ, ಇವಳು ಸೀತೆಯೇ ಸರಿಯೆಂದು ಅನೇಕ ಕಾರಣಗಳಿಂದ ಊಹಿಸಿದನು: 'ಹಿಂದೆ ಕಾಮರೂಪಿಯಾದ ರಾವಣನು ಅಪಹರಿಸಿಕೊಂಡು ಹೋಗುತ್ತಿದ್ದ ಸ್ತ್ರೀಯನ್ನು ನಾನು ದೂರದಿಂದ ನೋಡಿದ್ದೆನು. ಅವಳಂತೆಯೇ ಇವಳು ಇದ್ದಾಳೆ' ಎಂದುಕೊಂಡು ಅವಳನ್ನೇ ನೋಡಲಾರಂಭಿಸಿದನು (೨೬–೨೭). ಪೂರ್ಣಚಂದ್ರಾನನೆಯಾದ

ಆ ದೇವಿಯು ತನ್ನ ಪ್ರಭೆಯಿಂದ ಸಮಸ್ತ ದಿಕ್ಕುಗಳನ್ನು ಬೆಳಗುತ್ತಿದ್ದಳು. ಕಪ್ಪಾದ ಕೇಶರಾಶಿ, ತೊಂಡೆಯ ಹಣ್ಣಿನಂತಹ ತುಟಿ, ಕೃಶವಾದ ನಡು, ಕಮಲದ ಎಸಳಿನಂತಹ ಕಣ್ಣುಗಳು, ಮನೋಜ್ಞವಾದ ಮೈಕಟ್ಟು—ಅವಳು ಸಾಕ್ಷಾತ್ ಮನ್ಮಥನ ರತಿಯಂತೆ ಇದ್ದಳು. ಪೂರ್ಣಚಂದ್ರನ ಬೆಳದಿಂಗಳಂತೆ, ಅವಳನ್ನು ನೋಡಿದರೆ ಜಗತ್ತಿಗೇ ಒಂದು ಹರ್ಷವಾಗುತ್ತಿತ್ತು (೨೮–೩೦). ಆಕೆಯು ತಪಸ್ವಿನಿಯಂತೆ ನೆಲದಮೇಲೆ ಕುಳಿತು, ಹೆದರಿದ ಸರ್ಪಿಣಿಯಂತೆ ನಿಟ್ಟುಸಿರು ಬಿಡುತ್ತಿದ್ದಳು. ವ್ಯಥೆಯಿಂದ ಬಾಡಿಹೋದ್ದರಿಂದ ಹೊಗೆ ಸುತ್ತಿದ ಅಗ್ನಿಜ್ವಾಲೆಯಂತಿದ್ದಳು (೩೧–೩೨). ಅರ್ಥನಿಶ್ಚಯವಿಲ್ಲದ ಸ್ಮೃತಿಯಂತೆ, ಕ್ಷೀಣವಾದ ಸಂಪತ್ತಿನಂತೆ, ವಿಧಿಗೆಟ್ಟ ಶ್ರದ್ಧೆಯಂತೆ, ಭಗ್ನವಾದ ಆಸೆಯಂತೆ, ವಿಘ್ನಸಹಿತವಾದ ತಪಃಸಿದ್ಧಿಯಂತೆ, ಕಲುಷಗೊಂಡ ಬುದ್ಧಿಯಂತೆ, ಮಿಥ್ಯಾಪವಾದಕ್ಕೆ ಒಳಗಾದ ಕೀರ್ತಿಯಂತೆ (೩೩–೩೪), ಶ್ರೀರಾಮನ ವಿರಹದಿಂದ ದುಃಖಿತಳಾಗಿ, ರಾಕ್ಷಸನಿಗೆ ಸೆರೆಸಿಕ್ಕಿ ಕೃಶಳಾಗಿ, ಜಿಂಕೆಯಂತೆ ಸುತ್ತಲೂ ವೀಕ್ಷಿಸುವ ಅಬಲೆಯಾಗಿ, ಅಶ್ರುನೇತ್ರೆಯಾಗಿ, ಮ್ಲಾನಮುಖಿಯಾಗಿ (೩೫–೩೬), ಮಲಿನಗಾತ್ರೆಯಾಗಿ, ದೀನಳಾಗಿ, ಅಲ್ಪಾಭರಣಳಾಗಿ, ಕಾರ್ಮೋಡಗಳಿಂದ ಸುತ್ತಲ್ಪಟ್ಟ ಚಂದ್ರನ ಕಾಂತಿಯಂತೆಯೂ ಅಭ್ಯಾಸಮಾಡದೆ ಕ್ಷೀಣವಾದ ವಿದ್ಯೆಯಂತೆಯೂ ವ್ಯಾಕರಣ ಸಂಸ್ಕಾರವಿಲ್ಲದೆ ಸರಿಯಾದ ಅರ್ಥವನ್ನು ಬೋಧಿಸದಿರುವ ವಾಣಿಯಂತೆಯೂ ರೂಪಾಂತರವನ್ನು ಹೊಂದಿದ್ದ ಆ ಸೀತಾದೇವಿಯನ್ನು ನೋಡಿ, 'ಇವಳು ಸೀತೆ ಹೌದೊ ಅಲ್ಲವೊ' ಎಂದು ಹನುಮಂತನಿಗೆ ಮತ್ತೆ ಸಂದೇಹ ಉಂಟಾಯಿತು (೩೭–೩೯). ಆಮೇಲೆ ಹನುಮಂತನು ಆ ರಾಜಕುಮಾರಿಯನ್ನು ಚೆನ್ನಾಗಿ ನೋಡಿ 'ಇವಳು ಸೀತೆಯೇ ಹೌದು' ಎಂದು ಊಹಿಸಿದನು. ಏಕೆಂದರೆ, ಸೀತೆಯ ಮೈಮೇಲೆ ಯಾವ ಆಭರಣಗಳಿದ್ದುವೆಂದು ಶ್ರೀರಾಮನು ಹೇಳಿದ್ದನೋ ಅವುಗಳನ್ನು ಹನುಮಂತನು ಲಕ್ಷಿಸಿ ನೋಡಿದನು (೪೦–೪೧): "ಇವಳ ಕರ್ಣಕುಂಡಲಗಳೂ ಶ್ವದಂಷ್ಟ್ರ ಎಂಬ ಹೂವಿನ ಆಕಾರದ ಕರ್ಣಾಭರಣಗಳೂ ರತ್ನ ಮತ್ತು ಹವಳಗಳಿಂದ ಸುಂದರವಾದ ಹಸ್ತಾಭರಣಗಳೂ ಮಾಸಿಹೋಗಿದ್ದರೂ, ಶ್ರೀರಾಮನು ಹೇಳಿದಂತಹ ಒಡವೆಗಳೇ ಸರಿ. ಅವನು ಹೇಳಿದುದರಲ್ಲಿ ಕೆಲವು ಒಡವೆಗಳು ಇಲ್ಲದಿದ್ದರೂ, ಇರತಕ್ಕವುಗಳು ಮಾತ್ರ ಅವನು ಹೇಳಿದವುಗಳೇ (೪೨–೪೪). ಹೊಂಬಣ್ಣದ

ರೇಶ್ಮೆಯ ಉತ್ತರೀಯವು ಬೀಳುವಾಗ ಮರದಲ್ಲಿ ಸಿಕ್ಕಿಕೊಂಡುದನ್ನು ಋಷ್ಯಮೂಕಪರ್ವತದಲ್ಲಿ ವಾನರರು ನೋಡಿದರಲ್ಲವೆ? ಆಗ 'ಝಣಝಣ' ಎಂದು ಶಬ್ದಮಾಡುತ್ತ ಅಮೂಲ್ಯವಾದ ಆಭರಣಗಳು ನೆಲದಮೇಲೆ ಬಿದ್ದು ಹೋದುವು. ಅವೆಲ್ಲವನ್ನೂ ಈಕೆಯೇ ಬಿಸುಟಿರಬೇಕು (೪೫–೪೬). ಇವಳು ಧರಿಸಿದ ಈ ಸೀರೆಯು ಬಹಳ ಮಾಸಿಹೋಗಿದ್ದರೂ, ಬಣ್ಣದಲ್ಲಿಯೂ ಆಕಾರ ದಲ್ಲಿಯೂ ಆ ಉತ್ತರೀಯದಂತೆಯೇ ಇದೆ. ಶ್ರೀರಾಮನ ಕಣ್ಣಿಗೆ ಕಾಣಿಸ ದಿದ್ದರೂ ಅವನ ಮನಸ್ಸಿನಲ್ಲಿ ಸ್ಥಿರವಾಗಿ ನೆಲೆಸಿದ ಅವನ ಪ್ರಿಯಪತ್ನಿಯಾದ ಸಾಧ್ವಿ ಈ ಕನಕಾಂಗಿಯೇ ಹೌದು (೪೭–೪೮). ಶ್ರೀರಾಮನು ಯಾರಿ ಗೋಸ್ಕರ ಕೊರಗಿ ಸಂಕಟಪಡುತ್ತಿರುವನೋ ಆ ಸೀತಾದೇವಿ ಇವಳೇ ಸರಿ. ಅಬಲೆಯಾದ ಸ್ತ್ರೀಯೊಬ್ಬಳು ರಾಕ್ಷಸನ ಕೈಗೆ ಸಿಕ್ಕಿದಳಲ್ಲಾ ಎಂಬ ಕಾರುಣ್ಯ ಒಂದು, ತನ್ನನ್ನೇ ನಂಬಿಬಂದವಳನ್ನು ರಕ್ಷಿಸಲು ಆಗಲಿಲ್ಲವಲ್ಲಾ ಎಂಬ ವ್ಯಥೆ ಒಂದು, ಕೈಹಿಡಿದ ಹೆಂಡತಿ ಎಂಬ ಚಿಂತೆ ಒಂದು, ತನಗೆ ಅತ್ಯಂತ ಪ್ರಿಯಳೆಂಬ ಮೋಹ ಒಂದು. ಹೀಗೆ ನಾಲ್ಕೂ ವಿಧದಲ್ಲಿ ಇವಳಿಗಾಗಿಯೇ ಕೊರಗುತ್ತಿರು ವನು (೪೯–೫೦). ಈ ದೇವಿಯ ರೂಪಲಕ್ಷಣಗಳಿಗೆ ಅನುರೂಪನಾದವನು ಶ್ರೀರಾಮನೇ. ಆತನ ರೂಪಲಕ್ಷಣಗಳಿಗೆ ಅನುರೂಪಳಾದವಳು ಈಕೆಯೇ. ಇವಳ ಮನಸ್ಸು ರಾಮನಲ್ಲಿಯೂ ಅವನ ಮನಸ್ಸು ಇವಳಲ್ಲಿಯೂ ನೆಲೆಸಿ ಹೋಗಿದೆ. ಆದ್ದರಿಂದಲೇ ಇವರಿಬ್ಬರೂ ಪರಸ್ಪರ ದರ್ಶನವಾದೀತೆಂಬ ಆಸೆ ಯಿಂದ ಈಗಲೂ ಜೀವಿಸಿದ್ದಾರೆ (೫೧–೫೨). ಆಹಾ! ಇಂತಹ ಪ್ರಿಯಪತ್ನಿ ಯನ್ನಗಲಿಯೂ ಪ್ರಭುವಾದ ರಾಮನು ದೇಹವನ್ನಿಟ್ಟುಕೊಂಡಿರುವನಲ್ಲ! ದುಃಖದಿಂದ ಕುಸಿದುಹೋಗಲಿಲ್ಲವಲ್ಲ! ಇದು ಇನ್ನೊಬ್ಬರಿಂದ ಸಾಧ್ಯವಿಲ್ಲ!" ಎಂದು ಮನಸ್ಸಿನಲ್ಲಿಯೇ ಗುಣಿಸಿದನು. ಆಮೇಲೆ ಹನುಮಂತನು ಸೀತೆಯನ್ನು ಕಂಡುದಕ್ಕಾಗಿ ಸಂತೋಷದಿಂದ ಉಬ್ಬಿ ರಾಮನನ್ನು ಧ್ಯಾನಿಸುತ್ತ "ಈ ಸತೀ ಮಣಿಯನ್ನು ಕೈಹಿಡಿದ ಶ್ರೀರಾಮನೇ ಭಾಗ್ಯಶಾಲಿ; ಈಕೆಗಾಗಿ ಅವನು ಪಡುತ್ತಿರುವ ಮಹಾಪ್ರಯತ್ನ ಯೋಗ್ಯವೇ ಸರಿ" ಎಂದು ಶ್ರೀರಾಮನನ್ನು ಕೊಂಡಾಡಿದನು (೫೩–೫೪).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಹದಿನೈದನೆಯ ಸರ್ಗ

## ಸರ್ಗ ೧೬

ಹನುಮಂತನು ಸೀತೆಯ ಶುಭಲಕ್ಷಣಗಳನ್ನು ಪ್ರಶಂಸಿಸಿ, ಆಕೆಯ ದುರ್ದಶೆಯನ್ನು ಕಂಡು ವ್ಯಥೆಪಟ್ಟುದು.

ಆಂಜನೇಯನು ಸ್ತೋತ್ರಾರ್ಹಳಾದ ಸೀತಾದೇವಿಯನ್ನೂ ಗುಣಾಭಿರಾಮನಾದ ಶ್ರೀರಾಮಚಂದ್ರನನ್ನೂ ಕೊಂಡಾಡಿ, ಸೀತೆಯ ದುರವಸ್ಥೆಯನ್ನು ಕಂಡು ಮತ್ತೆ ಚಿಂತಾಕುಲನಾದನು. ಅವನ ಕಣ್ಣಲ್ಲಿ ನೀರು ತುಂಬಿತು. ತನ್ನಲ್ಲಿಯೇ ಗೋಳಾಡಲಾರಂಭಿಸಿದನು (೧–೨): "ವಿನೀತನಾದ ಲಕ್ಷ್ಮಣನಿಗೆ ಪರಮಪೂಜ್ಯಳೂ ಶ್ರೀರಾಮನಿಗೆ ಪ್ರಾಣಕಾಂತೆಯೂ ಆದ ಸೀತೆಯೂ ಹೀಗೆ ದುಃಖಪೀಡಿತಳಾದಮೇಲೆ, ಕಾಲಗತಿಯನ್ನು ಮೀರುವವರಾರು? ಇವಳು ರಾಮಲಕ್ಷ್ಮಣರ ಪರಾಕ್ರಮವನ್ನೂ ಉದ್ಯಮವನ್ನೂ ಚೆನ್ನಾಗಿ ಬಲ್ಲಳು. ಆದ್ದರಿಂದಲೇ ಮಳೆಗಾಲದಲ್ಲಿಯೂ ಹೆಚ್ಚು ಕ್ಷೋಭೆಗೊಳ್ಳದ ಗಂಗಾನದಿಯಂತೆ, ಪೂರ್ತಿಯಾಗಿ ತಾಳ್ಮೆಯನ್ನು ಕಳೆದುಕೊಂಡಿಲ್ಲ (೩–೪). ಸ್ವಭಾವ, ವಯಸ್ಸು, ನಡತೆ, ಕುಲ ಮತ್ತು ಶುಭಲಕ್ಷಣಗಳಲ್ಲಿ ಈ ಸೀತೆಗೆ ರಾಮನೇ ತಕ್ಕ ಪತಿ. ರಾಮನಿಗೆ ಇವಳೇ ತಕ್ಕ ಪತ್ನಿ" ಎಂದು ಹೇಳಿಕೊಳ್ಳುತ್ತ, ಲಕ್ಷ್ಮೀದೇವಿಯಂತಿದ್ದ ಆ ಸೀತೆಯನ್ನು ನೋಡುತ್ತಿರುವಾಗ ಹನುಮಂತನಿಗೆ ಶ್ರೀರಾಮನ ಸ್ಮರಣೆಯಾಗಿ, ಅವನೇ ಕಣ್ಣಿಗೆ ಕಟ್ಟಿದಂತಾಯಿತು (೫–೬). "ಶ್ರೀರಾಮನು ಮಹಾಬಲಶಾಲಿಯಾದ ವಾಲಿಯನ್ನೂ ರಾವಣನಂತೆ ಪರಾಕ್ರಮಿಯಾದ ಕಬಂಧನನ್ನೂ ಸಂಹಾರಮಾಡಿದುದು ಇವಳಿಗೋಸ್ಕರವೇ ಅಲ್ಲವೆ? ಮಹೇಂದ್ರನು ಶಂಬರಾಸುರನನ್ನು* ವಧಿಸಿದಂತೆ, ವೀರನಾದ ವಿರಾಧನನ್ನು ವಧಿಸಿದುದೂ ಈಕೆಗಾಗಿಯೇ (೭–೮). ಜನಸ್ಥಾನದಲ್ಲಿ ಭಯಂಕರರಾದ ಹದಿನಾಲ್ಕುಸಾವಿರ ರಾಕ್ಷಸರನ್ನು ದಿವ್ಯಾಸ್ತ್ರಗಳಿಂದ ಕೊಂದು, ಖರ ದೂಷಣ ತ್ರಿಶಿರರನ್ನೂ ಶ್ರೀರಾಮನು ಕೊಂದಿದ್ದಾನೆ. ವಾಲಿಗೆ ಸೇರಿ ಅತಿದುರ್ಲಭವಾಗಿದ್ದ ವಾನರಾಧಿಪತ್ಯವೂ ಇವಳ ನಿಮಿತ್ತದಿಂದಲೇ ಸುಗ್ರೀವನಿಗೆ ಸೇರಿಹೋಯಿತು! (೯–೧೧). ಮಹಾಸಾಗರವನ್ನು ದಾಟಿ ಲಂಕಾನಗರವನ್ನೆಲ್ಲಾ ನಾನು ಹುಡುಕಿದುದೂ ಈ ವಿಶಾಲಾಕ್ಷಿಗೋಸ್ಕರ. ಹೆಚ್ಚೇನು? ಇವಳಿಗಾಗಿ

---

* ಈ ಶಂಬರನು ಬೇರೊಬ್ಬ ರಾಕ್ಷಸನು. ಪ್ರದ್ಯುಮ್ನನು ಕೊಂದ ಶಂಬರನಲ್ಲ.

ಶ್ರೀರಾಮನು ಸಮುದ್ರಾಂತವಾದ ಭೂಲೋಕವನ್ನೇ–ವಿಶ್ವವನ್ನೇ–ತಲೆಕೆಳಗು ಮಾಡಿದರೂ ಅದು ಯುಕ್ತವೆಂದೇ ನನಗೆ ತೋರುತ್ತದೆ (೧೨–೧೩). ಈ ಸೀತಾದೇವಿಯೊಡನೆ ಹೋಲಿಸಿದರೆ ಮೂರುಲೋಕದ ಆಧಿಪತ್ಯವೂ ಕೂಡ ಇವಳ ಒಂದು ಅಂಶಕ್ಕೆ ಸಾಟಿಯಾಗುವುದಿಲ್ಲ. ಪುಣ್ಯಾತ್ಮನೂ ಮಹಾತ್ಮನೂ ಆದ ಜನಕಮಹಾರಾಜನ ಮಗಳು ಇವಳು; ಮಹಾಪತಿವ್ರತೆ (೧೪–೧೫). ಯಜ್ಞಕ್ಕಾಗಿ ಭೂಮಿಯನ್ನು ನೇಗಿಲಿನಿಂದ ಉಳುವಾಗ ಕಮಲರೇಣುವಿನಂತಿರುವ ಧೂಳಿಯಿಂದ ವ್ಯಾಪ್ತಳಾಗಿ ಭೂಮಿಯಿಂದ ಎದ್ದುಬಂದ ಅಯೋನಿಜೆ ಇವಳೇ. ಪರಿಶುದ್ಧಚರಿತನೂ ವೀರಾಧಿವೀರನೂ ಆದ ದಶರಥಮಹಾರಾಜನ ಹಿರಿಯ ಸೊಸೆಯೆಂದು ಕೀರ್ತಿಗಳಿಸಿದವಳು ಇವಳೇ (೧೬–೧೭). ಇವಳೇ ಧರ್ಮಜ್ಞನೂ ಕೃತಜ್ಞನೂ ವಿದ್ವಾಂಸನೂ ಆದ ಶ್ರೀರಾಮಚಂದ್ರನ ಪ್ರಿಯ ಪತ್ನಿ; ರಾಕ್ಷಸರ ಕೈಗೆ ಸಿಕ್ಕಿಬಿಟ್ಟಿರುವವಳು. ಅರಮನೆಯ ಸಕಲಭೋಗಗಳನ್ನೂ ಪರಿತ್ಯಜಿಸಿ, ಕಷ್ಟಗಳನ್ನು ಲೆಕ್ಕಿಸದೆ, ಪತಿಯಮೇಲಿನ ಪ್ರೇಮಕ್ಕೆ ವಶಳಾಗಿ ನಿರ್ಜನವಾದ ವನಕ್ಕೆ ಹೊರಟುಬಂದವಳು (೧೮–೧೯). ಪತಿಸೇವೆಯಲ್ಲಿ ನಿರತಳಾಗಿ ಕಾಡಿನಲ್ಲಿ ಸಿಕ್ಕಿದ ಗೆಡ್ಡೆಗೆಣಸುಗಳಿಂದಲೇ ತೃಪ್ತಿಪಡುತ್ತಿದ್ದವಳು. ವನವನ್ನೇ ಮನೆಯೆಂದು ತಿಳಿದುಕೊಂಡಿದ್ದವಳು. ಈ ಶುಭಾಂಗಿಯು ಸದಾ ಕಿರುನಗೆಯಿಂದ ಮಾತನಾಡುತ್ತ ಇರಬೇಕಾದವಳು. ಇಂತಹವಳಿಗೆ ಈ ವಿಪತ್ತು ಬರಬಾರದು! ಈ ಘೋರಯಾತನೆಯನ್ನು ಸಹಿಸಿಕೊಂಡಿರುವಳಲ್ಲ! (೨೦–೨೧). ಬಾಯಾರಿದವನು ಅರವಟ್ಟಿಗೆಗಾಗಿ ಹಾತೊರೆಯುವಂತೆ, ರಾಮನು ರಾವಣನಿಂದ ಪೀಡಿತಳಾದ ಈ ಶೀಲಸಂಪನ್ನೆಯನ್ನು ನೋಡಲು ತವಕಪಡುತ್ತಿರುವನು (೨೨). ರಾಜ್ಯಭ್ರಷ್ಟನಾದ ರಾಜನಿಗೆ ರಾಜ್ಯವು ದೊರಕಿದಂತೆ, ರಾಮನಿಗೆ ಇವಳು ಲಭಿಸಿದಾಗ ಅವನ ಆನಂದಕ್ಕೆ ಪಾರವಿದ್ದೀತೆ? ಈಕೆಯಾದರೋ ಸಮಸ್ತ ಭೋಗಗಳನ್ನೂ ವರ್ಜಿಸಿ, ಬಂಧುಗಳಿಲ್ಲದ ಈ ದೇಶದಲ್ಲಿ ರಾಮನನ್ನು ನೋಡುವ ಆಶೋತ್ತರದಿಂದಲೇ ಬದುಕಿದ್ದಾಳೆ (೨೩–೨೪). ಇವಳು ಎದುರಿಗಿರುವ ರಾಕ್ಷಸಿಯರನ್ನೂ ಕಾಣಳು! ಹೂಹಣ್ಣುಗಳಿರುವ ಮರಗಳನ್ನೂ ಕಾಣಳು! ಮನಸ್ಸಿನಲ್ಲಿ ನೆಟ್ಟಿರುವ ರಾಮನೊಬ್ಬನನ್ನೇ ಕಾಣುತ್ತಿದ್ದಾಳೆ! ಎಷ್ಟಾದರೂ ಸ್ತ್ರೀಯರಿಗೆ ಪತಿಯೇ ಪರಮಭೂಷಣ. ಆ ಭೂಷಣವೂ ಇಲ್ಲದುದರಿಂದ ಇವಳ ಸೌಂದರ್ಯವೇ ಕಂದಿದಂತಿರುವುದು

(೨೫–೨೬). ಇಂತಹ ಪ್ರಿಯಪತ್ನಿಯನ್ನಗಲಿಯೂ ಪ್ರಭುವಾದ ರಾಮನು ಇದುವರೆಗೆ ದೇಹವನ್ನಿಟ್ಟುಕೊಂಡಿರುವನಲ್ಲ! ದುಃಖದಿಂದ ಕುಸಿದುಹೋಗ ಲಿಲ್ಲವಲ್ಲ! ಇದು ಇನ್ನೊಬ್ಬರಿಂದ ಸಾಧ್ಯವಿಲ್ಲ! ಸುಖಾರ್ಹಳಾಗಿರುವ ಇವಳ ಕಷ್ಟವನ್ನು ಕಂಡು, ಅರಣ್ಯವಾಸಿಯಾದ ನನ್ನ ಮನಸ್ಸು ಕೂಡ ದುಃಖದಿಂದ ಕಂಗೆಟ್ಟುಹೋಗಿದೆ! (೨೭–೨೮). ಭೂದೇವಿಯಂತೆ ತಾಳ್ಮೆಯುಳ್ಳ ಈ ಚೆಲುವೆಯನ್ನು ಕಾಡಿನಲ್ಲಿ ರಾಮಲಕ್ಷ್ಮಣರು ರಕ್ಷಿಸುತ್ತಿದ್ದರು. ಅವಳನ್ನು ಈಗ ಕೆಟ್ಟಕಣ್ಣಿನ ಈ ರಾಕ್ಷಸಿಯರು ಕಾಯಬೇಕಾಗಿ ಬಂದಿತೆ! ಹಿಮದ ಬಾಧೆ ಯಿಂದ ಕಂದಿದ ಕಮಲಿನಿಯಂತೆ, ವ್ಯಸನಪರಂಪರೆಯಿಂದ ಇವಳು ಪೀಡಿತ ಳಾಗಿರುವಳು. ಗಂಡುಹಕ್ಕಿಯನ್ನಗಲಿದ ಚಕ್ರವಾಕಿಯಂತೆ ಶೋಚನೀಯ ವಾದ ಅವಸ್ಥೆಯನ್ನು ಪಡೆದಿದ್ದಾಳೆ (೨೯–೩೦). ವಿರಹಪೀಡಿತೆಯಾದ ಈ ಸೀತೆಗೆ ಪುಷ್ಪಭಾರದಿಂದ ಬಗ್ಗಿದ ಅಶೋಕವೃಕ್ಷಗಳು ಇನ್ನೂ ದುಃಖವನ್ನೇ ಹೆಚ್ಚಿಸುತ್ತವೆ. ಅದೂ ಸಾಲದೆಂದು ವಸಂತಕಾಲದ ಚಂದ್ರನು ಶೀತಲಕಿರಣ ಗಳನ್ನು ಬೀರುತ್ತ ಏರಿಬಂದಿದ್ದಾನೆ!" (೩೧). ಹೀಗೆ ಚಿಂತಿಸುತ್ತ ಇವಳು ಸೀತೆಯೇ ಸರಿಯೆಂದು ನಿಶ್ಚಯಿಸಿ, ಬಲಾಢ್ಯನಾದ ಆ ವಾನರೋತ್ತಮನು ಶಿಂಶಪಾವೃಕ್ಷದಲ್ಲಿ ಕುಳಿತಿದ್ದನು (೩೨).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಹದಿನಾರನೆಯ ಸರ್ಗ

---

## ಸರ್ಗ ೧೭

ಹನುಮಂತನು ಸೀತೆಗೆ ಕಾವಲಾಗಿದ್ದ ರಾಕ್ಷಸಿಯರನ್ನು ನೋಡುತ್ತ, ಸೀತೆಯನ್ನು ನೋಡಿದೆನೆಂಬ ಹರ್ಷದಿಂದ ಶಿಂಶಪಾವೃಕ್ಷದಲ್ಲಿ ಕುಳಿತಿರುವುದು.

ಆಗ ಬಿಳಿನೈದಿಲೆಯಂತೆ ಶುಭ್ರನಾದ ಚಂದ್ರನು, ನಿರ್ಮಲವಾದ ನೀರಿನಲ್ಲಿ ಹಂಸವು ಈಜಿಬರುವಂತೆ, ಆಕಾಶದಲ್ಲಿ ಸಾಗುತ್ತ ಬಂದನು. ಅವನು ಎಲ್ಲೆಡೆಯೂ ತನ್ನ ಕಾಂತಿಯನ್ನು ಪ್ರಸರಿಸಿ ಹನುಮಂತನಿಗೆ ಸಹಾಯಮಾಡುತ್ತಿರುವನೋ ಎಂಬಂತೆ ಶೀತಲಕಿರಣಗಳನ್ನು ಚೆಲ್ಲುತ್ತಿದ್ದನು (೧–೨). ಭಾರದಿಂದ ನೀರಿನಲ್ಲಿ ಮುಳುಗಿಹೋಗುತ್ತಿರುವ ನೌಕೆಯಂತೆ, ಶೋಕಭಾರದಿಂದ ಕುಸಿದುಹೋಗು

ತ್ತಿರುವ ಸೀತಾದೇವಿಯನ್ನು ಆಂಜನೇಯನು ನೋಡುತ್ತಲೇ ಇದ್ದನು. ಹಾಗೆಯೇ ಸ್ವಲ್ಪ ದೂರದಲ್ಲಿ ಕಾವಲಿದ್ದ ಘೋರಾಕೃತಿಯ ರಾಕ್ಷಸಿಯರನ್ನು ನೋಡಿದನು (೩–೪). ಅವರಲ್ಲಿ ಕೆಲವರಿಗೆ ಒಂದೇ ಕಣ್ಣು! ಕೆಲವರಿಗೆ ಒಂದೇ ಕಿವಿ! ಕೆಲವರಿಗೆ ಮುಸುಕು ಹಾಕಿದಂತೆ ಅಗಲವಾದ ಕಿವಿ! ಕೆಲವರಿಗೆ ಕಿವಿಯೇ ಇಲ್ಲ! ಕೆಲವರಿಗೆ ಚೂಪಾದ ಕಿವಿ! ಕೆಲವರಿಗೆ ಮೇಲ್ಮುಖವಾದ ಮೂಗು! ಒಬ್ಬಳಿಗೆ ದಪ್ಪ ತಲೆ! ಒಬ್ಬಳಿಗೆ ತೆಳ್ಳಗೆ ಉದ್ದವಾದ ಕತ್ತು! ಒಬ್ಬಳಿಗೆ ತಲೆಯಲ್ಲಿ ಹರಕು ಕೂದಲು! ಒಬ್ಬಳಿಗೆ ಕೂದಲೇ ಇಲ್ಲ! ಮತ್ತೊಬ್ಬಳಿಗೆ ಕಂಬಳಿಯನ್ನು ಹೊದೆದುಕೊಂಡಂತೆ ಮೈಯೆಲ್ಲಾ ಕೂದಲು! (೫–೫). ಉದ್ದವಾದ ಹಣೆ ಕಿವಿಗಳುಳ್ಳವಳೊಬ್ಬಳು! ಭಾರಿ ಹೊಟ್ಟೆಯಮೇಲೆ ಜೋತಾಡುವ ಮೊಲೆಯುವಳೊಬ್ಬಳು! ಜೋಲುದುಟಿ, ಜೋಲುಮುಖ, ಜೋಲು ಮೊಳಕಾಲುಳ್ಳವರು ಕೆಲವರು! ಒಬ್ಬಳು ಕುಳ್ಳಿ, ಒಬ್ಬಳು ಲಂಬಿ, ಒಬ್ಬಳು ಗೂನು ಬೆನ್ನಿ! ಮತ್ತೊಬ್ಬಳು ವಿಕಾರಿ, ಗಿಡ್ಡಿ! ಮತ್ತೊಬ್ಬಳು ಘೋರರೂಪಿ, ಮಗದೊಬ್ಬಳು ಸೊಟ್ಟಮೋರೆಯುವಳು! ಒಬ್ಬಳು ಕೆಂಗಣ್ಣಿನವಳು, ಇನ್ನೊಬ್ಬಳು ಕೆಟ್ಟ ಮೋರೆಯುವಳು! (೭–೮). ಎಲ್ಲರೂ ವಿಕಾರರೂಪಿಗಳು. ಕೆಲವರು ಕಂದುಬಣ್ಣದವರು. ಕೆಲವರು ಕಪ್ಪು ಬಣ್ಣದವರು. ಎಲ್ಲರೂ ಕೋಪಿಷ್ಠರು, ಜಗಳಗಂಟರು. ಅವರು ಶೂಲ, ಮುದ್ಗರ ಮೊದಲಾದ ಆಯುಧಗಳನ್ನು ಹಿಡಿದಿದ್ದರು. ಕೆಲವರ ಮುಖಗಳು ಹಂದಿ, ಜಿಂಕೆ, ಹುಲಿ, ಕೋಣ, ಮೇಕೆ ಮತ್ತು ನರಿಗಳ ಮುಖಗಳಂತೆ ಇದ್ದವು! ಕೆಲವು ರಾಕ್ಷಸಿಯರ ಪಾದಗಳು ಆನೆ, ಒಂಟೆ, ಕುದುರೆಗಳ ಪಾದಗಳನ್ನು ಹೋಲುತ್ತಿದ್ದವು! ಕೆಲವರ ತಲೆ ದೇಹದಲ್ಲಿ ಹುದುಗಿಹೋಗಿದ್ದಿತು! (೯–೧೦). ಕೆಲವರಿಗೆ ಒಂದೇ ಕೈ! ಕೆಲವರಿಗೆ ಒಂದೇ ಕಾಲು! ಎಷ್ಟೋ ರಾಕ್ಷಸಿಯರ ಕಿವಿಗಳು ಕತ್ತೆ, ಕುದುರೆ, ಎತ್ತು, ಆನೆ ಮತ್ತು ಸಿಂಹದ ಕಿವಿಗಳಂತೆ ಇದ್ದವು! ಮೂಗಿಲ್ಲದವರೂ, ಉದ್ದ ಮೂಗಿನವರೂ, ಅಡ್ಡಮೂಗಿನವರೂ, ವಿಕಾರದ ಮೂಗಿನವರೂ, ಆನೆಯ ಸೊಂಡಿಲಿನಂತಹ ಮೂಗಿನವರೂ, ಹಣೆಯ ಬಳಿ ಉಸಿರಾಡುವ ಮೂಗಿನವರೂ ಇದ್ದರು (೧೧–೧೨). ಕೆಲವು ರಾಕ್ಷಸಿಯರ ಕಾಲು ಆನೆಯ ಕಾಲಿನಂತಿತ್ತು. ಕೆಲವರದು ಬಹು ದೊಡ್ಡ ಹೆಜ್ಜೆ. ಎತ್ತಿಗಿರುವಂತೆ ಕೆಲವರ ಪಾದಕ್ಕೆ ಗೊರಸುಗಳಿದ್ದವು! ಕೆಲವರ ತಲೆಗೂದಲು ಹೆಜ್ಜೆಯವರೆಗೂ ಜೋಲುತ್ತಿತ್ತು. ದಪ್ಪ

ಕುತ್ತಿಗೆಯವರೂ ದೊಡ್ಡ ಮೊಲೆಯವರೂ ಅನೇಕರಿದ್ದರು. ಕೆಲವರಿಗೆ ಕಣ್ಣು ಬಹಳ ದೊಡ್ಡದು. ಕೆಲವರ ನಾಲಿಗೆ ಬಹಳ ಉದ್ದ. ಕೆಲವರಿಗೆ ಹಸುವಿನಂತಹ ಮೋರೆ! ಕೆಲವರಿಗೆ ಹಂದಿಯ ಮೋರೆ! ಕೆಲವರಿಗೆ ಕೆಂಪು ಕೂದಲು! ಆ ರಾಕ್ಷಸಿಯರು ಮದ್ಯವನ್ನು ಕುಡಿಯುತ್ತ, ಮಾಂಸವನ್ನು ತಿನ್ನುತ್ತ ಮೈ ಮೇಲೆ ರಕ್ತವನ್ನು ಹೊಯ್ದುಕೊಂಡಿದ್ದರು. ನೋಡಿದರೆ ಮೈ ರೋಮಾಂಚ ಗೊಳ್ಳುವಷ್ಟು ಅವರು ಭಯಂಕರವಾಗಿದ್ದರು. ಹನುಮಂತನು ಅವರೆಲ್ಲರನ್ನೂ ನೋಡಿದನು (೧೫–೧೭). ಒಂದು ವಿಶಾಲವಾದ ಶಿಂಶಪಾವೃಕ್ಷದ ಸುತ್ತಲೂ ಆ ರಾಕ್ಷಸಿಯರು ಕಾವಲಾಗಿದ್ದರು. ಆ ಮರದ ಅಡಿಯಲ್ಲಿ ಒಂದು ಕಡೆ ರಾಜ ಪುತ್ರಿಯಾದ ಸೀತಾದೇವಿಯು, ಮುಖದಲ್ಲಿ ಸ್ವಲ್ಪವೂ ಕಳೆಯಿಲ್ಲದೆ ಜಡೆಗಟ್ಟಿದ ಕೇಶರಾಶಿಯುಳ್ಳವಳಾಗಿ, ದೈನ್ಯದಿಂದ ಶೋಕಿಸುತ್ತ ಕುಳಿತಿದ್ದಳು (೧೮–೧೯). ಪುಣ್ಯವು ಕ್ಷಯಿಸಿದ ಮೇಲೆ ಆಕಾಶದಿಂದ ಬಿದ್ದ ತಾರೆಯೋ ಎಂಬಂತೆ ಶೋಚನೀಯಳೂ ಪತಿವ್ರತಾ ಧರ್ಮದಿಂದ ವಿಖ್ಯಾತಳಾದರೂ ಪತಿದರ್ಶನ ಭಾಗ್ಯದಿಂದ ವಂಚಿತಳೂ ಆಗಿದ್ದಳು. ಆ ದೇವಿಯು ಶ್ರೇಷ್ಠವಾದ ಆಭರಣ ಗಳಿಲ್ಲದಿದ್ದರೂ ಪತಿಪ್ರೇಮವೆಂಬ ಆಭರಣದಿಂದಲೇ ಶೋಭಿಸುತ್ತಿರುವಳು. ಅವಳು ರಾಕ್ಷಸರಾಜನ ಸೆರೆಗೆ ಸಿಕ್ಕಿ ಎಲ್ಲಾ ಬಂಧುಗಳಿಂದಲೂ ರಹಿತಳು (೨೦–೨೧). ಹಿಂಡಿನಿಂದ ತಪ್ಪಿ ಸಿಂಹಗಳ ಮಧ್ಯದಲ್ಲಿ ಸಿಕ್ಕಿಕೊಂಡ ಹೆಣ್ಣಾನೆಯಂತೆ ಶೋಚನೀಯಳು. ಶರತ್ಕಾಲದ ಮೋಡಗಳಿಂದ ಆವೃತವಾದ ಚಂದ್ರಲೇಖೆಯಂತೆ ಮ್ಲಾನಕಾಂತಿಯಾಗಿರುವಳು. ಪತಿಯ ಸಾಮೀಪ್ಯ ವಿಲ್ಲದುದರಿಂದ, ವಾದ್ಯಗಾರನು ನುಡಿಸದೆ ಬಿಟ್ಟಿರುವ ವೀಣೆಯಂತೆ ಮಲಿನ ರೂಪಳು. ಶ್ರೀರಾಮನ ಜೊತೆಯಲ್ಲಿಯೇ ಇರಲು ಅರ್ಹಳು; ರಾಕ್ಷಸಿಯರ ಬಳಿ ಇರಬಾರದವಳು (೨೨–೨೩). ಕ್ರೂರಗ್ರಹಗಳು ಮುತ್ತಿಕೊಂಡಿರುವ ರೋಹಿಣಿಯಂತೆ ರಾಕ್ಷಸಿಯರ ಮಧ್ಯದಲ್ಲಿ ಶೋಕಸಂತಪ್ತಳಾಗಿರುವಳು. ಹೀಗೆ ಮಲಿನಳಾಗಿ, ಒಡವೆಯಿಲ್ಲದೆ, ಹೂವಿಲ್ಲದ ಬಳ್ಳಿಯಂತೆ ಶೋಚನೀಯಳೂ ಸುಂದರಿಯೂ ಆದ ಸೀತಾದೇವಿಯನ್ನು ಆಂಜನೇಯನು ಲಕ್ಷ್ಯವಿಟ್ಟು ನೋಡು ತ್ತಿದ್ದನು (೨೪–೨೫). ಕೊಳೆಯಾದ ಸೀರೆಯನ್ನುಟ್ಟುಕೊಂಡಿದ್ದ ಜಾನಕಿಯು, ಕೆಸರು ಹತ್ತಿದ ತಾವರೆಯ ಗಿಡದಂತೆ ಒಂದು ರೀತಿಯಲ್ಲಿ ಶೋಭಿಸದಿದ್ದರೂ ಚೆಲುವೆಯಾಗಿಯೇ ಇದ್ದಳು. ದುಃಖದಿಂದ ಮುಖವು ಬಾಡಿಹೋಗಿದ್ದರೂ

ಗಂಡನ ಪರಾಕ್ರಮವನ್ನು ನೆನೆದು ಧೈರ್ಯವನ್ನು ತಂದುಕೊಳ್ಳುತ್ತಿದ್ದಳು (೨೬–೨೭). ಈಗ ಶೀಲ ಒಂದೇ ಆ ನೀಲನಯನೆಯನ್ನು ರಕ್ಷಿಸುತ್ತಿತ್ತು. ಆಗಾಗ ಹೆದರಿ ಜಿಂಕೆಯಂತೆ ಸುತ್ತಲೂ ನೋಡುತ್ತ, ಚಿಗುರಿದ ಮರಗಳನ್ನು ಸುಟ್ಟುಬಿಡುವಳೋ ಎಂಬಂತೆ ಬಿಸಿಯಾಗಿ ನಿಟ್ಟುಸಿರು ಬಿಡುತ್ತ, ಶೋಕದ ರಾಶಿಯಂತೆ, ದುಃಖದ ಅಲೆಯಂತೆ ಕಾಣಿಸುತ್ತಿದ್ದಳು (೨೮–೩೦). ಮಾಟವಾದ ಆಕೃತಿಯುಳ್ಳ ಆ ಕೃಶಾಂಗಿಯನ್ನು ನೋಡಿ ಹನುಮಂತನು, ಅವಳ ಸ್ಥಿತಿಗಾಗಿ ಶೋಕಪಟ್ಟರೂ ಮೈಥಿಲಿಯನ್ನು ಕಂಡೆನೆಂಬ ಹರ್ಷದಿಂದ ಕಣ್ಣುಗಳಲ್ಲಿ ಆನಂದಬಾಷ್ಪಗಳನ್ನು ಹರಿಸಿದನು. ಶ್ರೀರಾಮನ ಅನುಗ್ರಹದಿಂದಲೇ ಇವಳನ್ನು ಕಂಡೆನೆಂಬ ಭಾವನೆಯಿಂದ ರಾಮನಿಗೂ ಲಕ್ಷ್ಮಣನಿಗೂ ನಮಸ್ಕರಿಸಿ, ಶಿಂಶಪಾವೃಕ್ಷದಲ್ಲಿ ಮರೆಯಾಗಿ ಕುಳಿತಿದ್ದನು (೩೧–೩೨).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಹದಿನೇಳನೆಯ ಸರ್ಗ

---

## ಸರ್ಗ ೧೮

ರಾವಣನು ರಾಕ್ಷಸಸ್ತ್ರೀಯರೊಡನೆ ಸೀತೆಯನ್ನು ನೋಡುವುದಕ್ಕಾಗಿ ಬರುವುದು.

ಹೀಗೆ ಆಂಜನೇಯನು ಪುಷ್ಪಿತವಾದ ಅಶೋಕವನದಲ್ಲಿ ಹುಡುಕಿ ಇವಳೇ ಸೀತೆಯೆಂದು ನಿಶ್ಚಯಿಸುವುದರೊಳಗೆ ಬೆಳಗಿನ ಜಾವವಾಗುತ್ತ ಬಂದಿತು. ಕಡೆಯ ಜಾವದಲ್ಲಿ ವೇದವೇದಾಂಗಗಳನ್ನು ಬಲ್ಲ ಯಾಜ್ಞಿಕರಾದ ಬ್ರಹ್ಮರಾಕ್ಷಸರು ವೇದಘೋಷ ಮಾಡಲಾರಂಭಿಸಿದರು (೧–೨). ಇಂಪಾಗಿ ಮಂಗಳವಾದ್ಯಧ್ವನಿಗಳು ಮೊಳಗಲು ರಾವಣನಿಗೆ ನಿದ್ರೆಯಿಂದ ಎಚ್ಚರವಾಯಿತು. ಆ ಪ್ರತಾಪಶಾಲಿಯು ಸಡಿಲಿದ ವಸ್ತ್ರಾಭರಣವುಳ್ಳವನಾಗಿ ಎದ್ದು ಕುಳಿತಾಗ ಸೀತೆಯ ಸ್ಮರಣೆಯಾಯಿತು (೩–೪). ಕಾಮೋನ್ಮತ್ತನಾದ ಅವನ ಮನಸ್ಸು ಸೀತೆಯಲ್ಲಿ ನೆಟ್ಟುಹೋಗಿತ್ತು. ಕಾಮವಿಕಾರವನ್ನು ಅವನು ತಡೆದುಕೊಳ್ಳಲಾರದೆ ಹೋದನು. ಒಡನೆಯೇ ಸರ್ವಾಭರಣಗಳಿಂದ ಭೂಷಿತನಾಗಿ ಅಪೂರ್ವವಾದ ಸೊಬಗನ್ನು ಬೀರುತ್ತ, ಪುಷ್ಪಫಲಗಳಿಂದ ಮನೋಹರವಾದ ಅಶೋಕವನದ ಕಡೆಗೆ ಹೊರಟನು (೫–೬). ಅಶೋಕವನವಾದರೊ

ಪುಷ್ಕರಿಣಿಗಳಿಂದಲೂ ಬಗೆಬಗೆಯ ಹೂಗಳಿಂದಲೂ ಮದಿಸಿದ ಪಕ್ಷಿಗಳಿಂದಲೂ ತುಂಬಿರುವುದು. ಸುಂದರವಾದ ಮೃಗಗಳು ಸಂಚರಿಸುತ್ತಿರುವುವು. ಮಾಗಿದ ಹಣ್ಣುಗಳು ಅಲ್ಲಲ್ಲಿ ಉದುರಿಬಿದ್ದಿರುವುವು. ರತ್ನಖಚಿತವಾದ ಸುವರ್ಣತೋರಣಗಳಿರುವ ಉದ್ಯಾನವೀಥಿಗಳನ್ನು ನೋಡುತ್ತ ರಾವಣನು ಅಶೋಕವನದೊಳಕ್ಕೆ ಬಂದನು (೭–೯). ದೇವಗಂಧರ್ವಸ್ತ್ರೀಯರು ದೇವೇಂದ್ರನನ್ನು ಹಿಂಬಾಲಿಸಿ ಬರುವಂತೆ ನೂರಾರು ಸ್ತ್ರೀಯರು ರಾವಣನನ್ನು ಅನುಸರಿಸಿ ಬರುತ್ತಿದ್ದರು. ಕೆಲವು ಸ್ತ್ರೀಯರು ಚಿನ್ನದ ದೀಪಸ್ತಂಭಗಳನ್ನು ಹಿಡಿದು ಅವನ ಮುಂದೆ ಬರುತ್ತಿದ್ದರು. ಕೆಲವರು ಚಾಮರವನ್ನೂ ಬೀಸಣಿಗೆಯನ್ನೂ ಬೀಸುತ್ತ ಪಕ್ಕದಲ್ಲಿ ಬರುತ್ತಿದ್ದರು (೧೦–೧೧). ಇನ್ನು ಕೆಲವರು ಚಿನ್ನದ ಕಲಶಗಳಲ್ಲಿ ನೀರನ್ನು ಹೊತ್ತು ತರುತ್ತಿದ್ದರು. ಹಿಂದುಗಡೆ ಕೆಲವು ಹೆಂಗಸರು ದುಂಡಾದ ಆಕೃತಿಯ ಉತ್ತಮಾಸನಗಳನ್ನು ತರುತ್ತಿದ್ದರು. ಅವನ ಪಕ್ಕದಲ್ಲಿ ಒಬ್ಬಳು ರತ್ನಮಯವಾದ ಥಾಲಿಯಲ್ಲಿ ಮದ್ಯವನ್ನು ತುಂಬಿಕೊಂಡು ಬಲಗೈಯಲ್ಲಿ ಹಿಡಿದಿದ್ದಳು (೧೨–೧೩). ಇನ್ನೊಬ್ಬಳು ರಾಜಹಂಸದಂತೆಯೂ ಪೂರ್ಣಚಂದ್ರನಂತೆಯೂ ಶುಭ್ರವಾಗಿರುವ ಚಿನ್ನದ ಕೋಲಿನ ಶ್ವೇತಚ್ಛತ್ರವನ್ನು ಹಿಡಿದು ರಾವಣನ ಹಿಂದೆ ಹೋಗುತ್ತಿದ್ದಳು. ಆ ಸ್ತ್ರೀಯರಿಗೆ ಇನ್ನೂ ನಿದ್ರೆಯು ಕಳೆದಿರಲಿಲ್ಲವಾದ್ದರಿಂದ ಕಣ್ಣುಗಳು ತೊಳಲುತ್ತಿದ್ದವು. ಅವರೆಲ್ಲರೂ ಮೇಘದೊಡನೆ ಮಿಂಚುಗಳು ಬರುವಂತೆ ರಾವಣನನ್ನು ಹಿಂಬಾಲಿಸಿ ಬಂದಿದ್ದರು (೧೪–೧೫). ನಿದ್ರೆಯ ತೊಳಲಾಟದಿಂದ ಅವರ ಹಾರಕೇಯೂರಗಳು ಜಾರಿದ್ದವು. ಗಂಧಲೇಪನವು ಒರಸಿಹೋಗಿತ್ತು. ಜಡೆಗಳು ಕೆದರಿದ್ದವು. ಮುಖವು ಬೆವರಿತ್ತು. ನಿದ್ರೆಯಿಂದಲೂ ಮದ್ಯದ ಮದದಿಂದಲೂ ತೂಕಡಿಸುತ್ತಿದ್ದರು. ಧರಿಸಿದ ಹೂಗಳು ಬಾಡಿ, ಮುಡಿದ ಮಾಲೆ ಜೋಲುತ್ತಿತ್ತು (೧೬–೧೭). ಆದರೂ ಆ ಸ್ತ್ರೀಯರು ರಾವಣನಮೇಲಿದ್ದ ಗೌರವದಿಂದಲೂ ಮೋಹದಿಂದಲೂ ಹಿಂಬಾಲಿಸಿ ಬರುತ್ತಿದ್ದರು. ಕಾಮಾಸಕ್ತನೂ ದುರ್ಮತಿಯೂ ಆದ ರಾವಣನು ಸೀತೆಯನ್ನೇ ನೆನೆಸಿಕೊಳ್ಳುತ್ತ ಮೆಲ್ಲಗೆ ಹೆಜ್ಜೆ ಹಾಕುತ್ತ ಬರುತ್ತಿದ್ದನು (೧೮–೧೯). ಆ ಸಮಯದಲ್ಲಿ ಸ್ತ್ರೀಯರ ಕಾಂಚೀಧ್ವನಿಯೂ ಕಾಲಂದುಗೆಗಳ ಶಬ್ದವೂ ಹನುಮಂತನಿಗೆ ಕೇಳಿಸಿತು. ಇದೇನೆಂಬ ಕುತೂಹಲದಿಂದ ಹನುಮಂತನು ಕತ್ತೆತ್ತಿ ನೋಡುತ್ತಿರಲು, ಮಹಾಪರಾಕ್ರಮಿಯಾದ ರಾವಣನು

ಅಶೋಕವನದ ಬಾಗಿಲನ್ನು ದಾಟಿಬರುತ್ತಿದ್ದನು (೨೦–೨೧). ಅವನು ಸುತ್ತಲೂ ಹಿಡಿದಿದ್ದ ಗಂಧದೆಣ್ಣೆಯ ದೀವಟಿಗೆಗಳ ಬೆಳಕಿನಲ್ಲಿ ಉಜ್ಜ್ವಲನಾಗಿ ಕಾಣುತ್ತಿದ್ದನು. ಕಾಮ ದರ್ಪ ಮದಗಳಿಂದ ಉಬ್ಬಿದ ಅವನ ಕಣ್ಣುಗಳು ಕೆಂಪೇರಿದ್ದವು. ಹಾಲಿನ ನೊರೆಯಂತೆ ಶುಭ್ರವಾದ ದುಕೂಲವು ಭುಜಕೀರ್ತಿಯಲ್ಲಿ ಸಿಕ್ಕಿಕೊಂಡಾಗ, ಅದನ್ನು ಸರಿಪಡಿಸಿಕೊಳ್ಳುತ್ತ ವಿಲಾಸದಿಂದ ಬರುತ್ತಿದ್ದ ರಾವಣನು ಪುಷ್ಪಧನುಸ್ಸೊಂದಿಲ್ಲದ ಸಾಕ್ಷಾತ್ ಮನ್ಮಥನಂತೆಯೇ ತೋರುತ್ತಿದ್ದನು (೨೨–೨೪). ಆಂಜನೇಯನು ಆ ವೃಕ್ಷದಲ್ಲಿ ಮರೆಯಾಗಿ ಇದ್ದುಕೊಂಡು, ಸಮೀಪಕ್ಕೆ ಬರುತ್ತಿದ್ದ ರಾವಣನನ್ನು ಗಮನಿಸಿ ನೋಡಲಾರಂಭಿಸಿದನು. ಸುತ್ತಲೂ ಸುಂದರಿಯರಾದ ಸ್ತ್ರೀಯರಿಂದ ಪರಿವೃತನಾಗಿ, ಆ ರಾಕ್ಷಸರಾಜನು ಮೃಗಪಕ್ಷಿಗಳ ಧ್ವನಿಯಿಂದ ತುಂಬಿದ ಅಶೋಕವನದೊಳಗೆ ಬರುವುದು ಚೆನ್ನಾಗಿ ಕಾಣಿಸಿತು (೨೫–೨೬). ಮದೋನ್ಮತ್ತನೂ ಮಹಾಬಲನೂ ವಿಶ್ರವಸ್ಸಿನ ಮಗನೂ ಆದ ರಾಕ್ಷಸೇಶ್ವರನು ನಕ್ಷತ್ರಗಳಿಂದ ಪರಿವೃತನಾದ ಚಂದ್ರನಂತೆ, ಬಹುಮಂದಿ ಚೆಲುವೆಯರಿಂದ ಪರಿವೃತನಾಗಿ ಬರುತ್ತಿರುವುದು ಹನುಮಂತನಿಗೆ ಗೋಚರಿಸಿತು (೨೮–೨೯). "ಆಗ ಅರಮನೆಯಲ್ಲಿ ನಿದ್ರೆ ಮಾಡುತ್ತಿದ್ದ ಮಹಾಬಾಹುವಾದ ರಾವಣನೇ ಇವನು" ಎಂದು ಹನುಮಂತನು ನಿರ್ಧರಿಸಿ, ಅವನನ್ನು ಸರಿಯಾಗಿ ನಿರೀಕ್ಷಿಸುವುದಕ್ಕಾಗಿ ತಾನಿದ್ದ ಕೊಂಬೆಯಿಂದ ಕೆಳಗಿಳಿದು ಇನ್ನೊಂದು ಕೊಂಬೆಯಲ್ಲಿ ಅಡಗಿ ಕುಳಿತನು. ವಾಯುಪುತ್ರನಾದ ಆಂಜನೇಯನು ಉಗ್ರತೇಜೋವಂತನಾದರೂ ರಾವಣನ ತೇಜಸ್ಸಿನೆದುರಿಗೆ ಪ್ರಕಟವಾಗಿ ಕಾಣಿಸಿಕೊಳ್ಳುವ ಧೈರ್ಯ, ಆಗ ಅವನಿಗೆ ಬರಲಿಲ್ಲ. ರಾವಣನು ಚೆಲುವೆಯಾದ ಸೀತೆಯನ್ನು ನೋಡುವುದಕ್ಕಾಗಿ ಅವಳ ಬಳಿಗೆ ಬಂದನು (೩೦–೩೨).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಹದಿನೆಂಟನೆಯ ಸರ್ಗ

# ಸರ್ಗ ೧೯

ರಾವಣನ ಭಯದಿಂದ ಕಂಪಿಸುತ್ತಿದ್ದ ಜಾನಕಿಯ ವರ್ಣನೆ.

ಇತ್ತಲಾಗಿ ಜಾನಕಿಯು, ಯೌವನಸಂಪನ್ನನಾದ ರಾವಣನು ಉತ್ತಮಾಭರಣಗಳನ್ನು ಧರಿಸಿಕೊಂಡು ತನ್ನ ಕಡೆಗೆ ಬರುತ್ತಿರುವುದನ್ನು ಕಂಡು ಬಿರುಗಾಳಿಗೆ ಸಿಕ್ಕಿದ ಬಾಳೆಯಗಿಡದಂತೆ ನಡುಗಲಾರಂಭಿಸಿದಳು. ಆ ವಿಶಾಲಾಕ್ಷಿಯು ತನ್ನ ಉದರಪ್ರದೇಶ ಮತ್ತು ಸ್ತನಗಳು ಕಾಣದಂತೆ ತೊಡೆಗಳನ್ನೂ ತೋಳುಗಳನ್ನೂ ಬಾಗಿಸಿಕೊಂಡು ಕುಳಿತು ಕಣ್ಣೀರು ಸುರಿಸತೊಡಗಿದಳು (೧–೨). ಸಮುದ್ರದಲ್ಲಿ ಭಾರದಿಂದ ಮುಳುಗಿಹೋಗುತ್ತಿರುವ ನೌಕೆಯಂತೆ ದುಃಖಾರ್ತಳಾಗಿ, ರಾಕ್ಷಸೀಪರಿವೃತಳಾದ ಸೀತೆಯನ್ನು ರಾವಣನು ಕಂಡನು (೩–೪). ಅವಳಾದರೊ ಮರದಿಂದ ಮುರಿದು ಕೆಡವಿದ ಶಾಖೆಯಂತೆ ಬರಿಯ ನೆಲದಮೇಲೆ ಕುಳಿತು ಪಾತಿವ್ರತ್ಯವೆಂಬ ವ್ರತದಲ್ಲಿ ನಿಷ್ಠಳಾಗಿರುವಳು. ಮಲಿನಳಾಗಿದ್ದ ಆ ಸೀತಾದೇವಿಯು ಕೆಸರು ಹತ್ತಿದ ತಾವರೆಯ ಬಳ್ಳಿಯಂತೆ ಒಂದು ಬಗೆಯಲ್ಲಿ ಶೋಭೆಯಿಲ್ಲದಿದ್ದರೂ, ಚೆಲುವೆಯಾಗಿಯೇ ಕಾಣಿಸುತ್ತಿರುವಳು (೫–೬). ಆಕೆಯು ತನ್ನ ಮನಸ್ಸೆಂಬ ರಥಕ್ಕೆ ಸಂಕಲ್ಪಗಳೆಂಬ ಕುದುರೆಗಳನ್ನು ಕಟ್ಟಿ ಶ್ರೀರಾಮನ ಬಳಿಗೆ ವೇಗವಾಗಿ ಹೋಗುತ್ತಿರುವಳೋ ಎಂಬಂತೆ ಅವನನ್ನೇ ಧ್ಯಾನಿಸುತ್ತಿರುವಳು. ಏಕಾಕಿನಿಯಾಗಿ ಶೋಕದ ಕೊನೆಯನ್ನೇ ಕಾಣದೆ ರಾಮನನ್ನೇ ಧ್ಯಾನಿಸುತ್ತ ಅತ್ತು ಅತ್ತು ಕೃಶಳಾಗಿಹೋಗಿರುವಳು (೭–೮). ಮಣಿಮಂತ್ರಗಳಿಂದ ನಿರುದ್ಧವಾದ ಸರ್ಪಿಣಿಯಂತೆ ಹೊರಳುತ್ತ, ಕೇತುವಿಗೆ ಸಿಕ್ಕಿದ ರೋಹಿಣೀನಕ್ಷತ್ರದಂತೆ ಸಂಕಟಪಡುತ್ತಿರುವಳು. ಪರಿಶುದ್ಧವಾದ ಆಚಾರವುಳ್ಳ ಧಾರ್ಮಿಕವಂಶದಲ್ಲಿ ಹುಟ್ಟಿ, ಅದೇ ವಿಧವಾದ ಉತ್ತಮ ವಂಶದಲ್ಲಿ ವಿವಾಹಸಂಸ್ಕಾರವನ್ನು ಪಡೆದಿದ್ದರೂ, ಕೇವಲ ದುಷ್ಕುಲದಲ್ಲಿ ಹುಟ್ಟಿದವಳಂತೆ ಶೋಚನೀಯಳಾಗಿರುವಳು (೯–೧೦). ಮಿಥ್ಯಾಪವಾದಕ್ಕೆ ಒಳಗಾದ ಕೀರ್ತಿಯಂತೆ, ಆವೃತ್ತಿಯಿಲ್ಲದೆ ಕ್ಷೀಣವಾದ ವಿದ್ಯೆಯಂತೆ, ಗತಿಸಿಹೋದ ಪ್ರಖ್ಯಾತಿಯಂತೆ, ಅವಮಾನಗೊಳಿಸಿದ ಶ್ರದ್ಧೆಯಂತೆ, ವಿತಂಡಾವಾದಕ್ಕೆ ಸಿಕ್ಕಿದ ಪ್ರಜ್ಞಾಶಕ್ತಿಯಂತೆ, ಭಗ್ನವಾದ ಆಸೆಯಂತೆ, ತಡೆಹಿಡಿಯಲ್ಪಟ್ಟ ಅಭಿವೃದ್ಧಿಯಂತೆ, ತಿರಸ್ಕೃತವಾದ ರಾಜಾಜ್ಞೆಯಂತೆ, ಉತ್ಪಾತಕಾಲದಲ್ಲಿ ಬೆಂಕಿಬಿದ್ದ

ಉರಿಯುತ್ತಿರುವ ದಿಕ್ಕಿನಂತೆ, ಕದ್ದುತಂದ ಪೂಜಾದ್ರವ್ಯದಂತೆ, ಕಿತ್ತೆಸೆದ ತಾವರೆಯ ಬಳ್ಳಿಯಂತೆ, ವೀರರು ಹತರಾಗಿರುವ ಸೇನೆಯಂತೆ, ಗಾಢವಾದ ಕತ್ತಲೆಯಲ್ಲಿ ಮಿಣುಗುವ ದೀಪದಂತೆ, ಒಣಗುತ್ತಿರುವ ನದಿಯಂತೆ ಅತ್ಯಂತ ಶೋಚನೀಯಳಾಗಿರುವಳು (೧೧–೧೪). ಆ ಜಾನಕಿಯು ಪತಿತರು ಮುಟ್ಟಿದ ಯಜ್ಞವೇದಿಕೆಯ ಹಾಗೆ, ನಂದಿಹೋಗುತ್ತಿರುವ ಅಗ್ನಿಜ್ವಾಲೆಯ ಹಾಗೆ, ಗ್ರಹಣ ಹಿಡಿದ ಹುಣ್ಣಿಮೆಯ ರಾತ್ರಿಯ ಹಾಗೆ ಕಾಣುತ್ತಿರುವಳು. ಎಲೆ ಹೂಗಳನ್ನು ಉದುರಿಸಿ, ಹಂಸಪಕ್ಷಿಯನ್ನು ಹೆದರಿಸಿ, ಆನೆಯು ಸೊಂಡಿಲಿಂದ ಕಿತ್ತುತಂದ ತಾವರೆಯ ಬಳ್ಳಿಯಂತೆ ಗೋಚರಿಸುವಳು (೧೫–೧೬). ಅಡ್ಡಗಟ್ಟೆಯನ್ನು ಕಟ್ಟಿ ನೀರನ್ನು ಬೇರೆಯ ಕಡೆಗೆ ತಿರುಗಿಸಿದಾಗ ಕ್ಷೀಣವಾಗುವ ನದಿಯಂತೆ ಪತಿಶೋಕದಿಂದ ಕೃಶಳಾಗಿರುವಳು. ಅಂಗಸಂಸ್ಕಾರವಿಲ್ಲದುದ ರಿಂದ ಕೃಷ್ಣಪಕ್ಷದ ರಾತ್ರಿಯಂತೆ ದಿನದಿನವೂ ಕಾಂತಿಹೀನಳಾಗುತ್ತಿರುವಳು. ಕೋಮಲಾಂಗಿಯೂ ಸುಂದರಿಯೂ ದಿವ್ಯವಾದ ಪ್ರಾಸಾದದಲ್ಲಿ ವಾಸಮಾಡ ಲರ್ಹಳೂ ಆಗಿದ್ದರೂ, ಬಿಸಲಲ್ಲಿ ಕಿತ್ತೆಸೆದ ತಾವರೆಯ ಬಳ್ಳಿಯಂತೆ ಸಂಕಟಪಡು ತ್ತಿರುವಳು (೧೭–೧೮). ಗಂಡಾನೆಯಿಂದ ತಪ್ಪಿಸಿ ಹಿಡಿದು ತಂದು ಕಂಬಕ್ಕೆ ಕಟ್ಟಿಹಾಕಿದ ಹೆಣ್ಣಾನೆಯಂತೆ ದುಃಖದಿಂದ ನಿಟ್ಟುಸಿರು ಬಿಡುತ್ತಿರುವಳು. ಹೆಣೆಯದಿರುವ ನೀಳವಾದ ತಲೆಗೂದಲಿನಿಂದ, ಶರತ್ಕಾಲದಲ್ಲಿ ದಟ್ಟವಾದ ವನಪಂಕ್ತಿಯಿಂದ ವಿರಾಜಿಸುವ ಭೂದೇವಿಯಂತೆ ಇರುವಳು (೧೯–೨೦). ಉಪವಾಸ, ಶೋಕ, ಚಿಂತೆ, ಭಯಗಳಿಂದ ಕೃಶಳಾಗಿ ತಪಸ್ಸು ಮಾಡುತ್ತ 'ಶ್ರೀರಾಮನು ರಾವಣನನ್ನು ಸೋಲಿಸಿ ಜಯಶೀಲನಾಗಲಿ' ಎಂದು ಅಂತರಂಗ ದಲ್ಲಿಯೇ ದೇವತೆಗಳನ್ನು ಪ್ರಾರ್ಥಿಸುವಂತೆ ಕೈಜೋಡಿಸಿಕೊಂಡಿರುವಳು (೨೧–೨೨). ದಿಕ್ಕುದಿಕ್ಕಿಗೆ ನೋಡುತ್ತ, ಸುಂದರವಾದ ಕಣ್ಣುಗಳಿಂದ ಬಳಬಳನೆ ನೀರು ಸುರಿಸುತ್ತ, ಶ್ರೀರಾಮನನ್ನೇ ಧ್ಯಾನಿಸುತ್ತಿದ್ದ ಸೀತಾದೇವಿ ಯನ್ನುದ್ದೇಶಿಸಿ, ರಾವಣನು ಆಸೆದೋರಿಸುವ ಮಾತುಗಳನ್ನು ಹೇಳಲುಪಕ್ರಮಿಸಿ ದನು. ಆ ಮಾತುಗಳಿಗೆ ಅವನ ವಧೆಯೇ ಫಲವಾಯಿತು (೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಹತ್ತೊಂಬತ್ತನೆಯ ಸರ್ಗ

# ಸರ್ಗ ೨೦

ರಾವಣನು ಆಸೆಹುಟ್ಟಿಸುವ ಮಾತುಗಳನ್ನು ಹೇಳಿ ತನ್ನನ್ನು ವರಿಸುವಂತೆ ಸೀತೆಯನ್ನು ಪ್ರಾರ್ಥಿಸುವುದು.

ಹೀಗೆ ಸ್ವಲ್ಪವೂ ಉಲ್ಲಾಸವಿಲ್ಲದೆ ದೈನ್ಯದಿಂದ ಕುಳಿತಿದ್ದ ಪತಿವ್ರತೆಯಾದ ಸೀತೆಯನ್ನು ಕುರಿತು ರಾವಣನು ಅಭಿಪ್ರಾಯಗರ್ಭಿತವಾಗಿ ಮಧುರವಾದ ಮಾತುಗಳನ್ನು ಹೇಳಿದನು: "ಎಲೌ ಸುಂದರಿ, ನನ್ನನ್ನು ಕಂಡು ನಿನ್ನ ಅವಯವಗಳನ್ನು ಮುಚ್ಚಿಕೊಳ್ಳುವುದೇಕೆ? ಮುದುರಿಕೊಳ್ಳುವುದೇಕೆ? ಭಯದಿಂದ ನೀನೇ ಮರೆಯಾಗಿಬಿಡಲು ಬಯಸುವೆಯಾ? (೧-೨). ಹೇ ವಿಶಾಲಾಕ್ಷಿ, ನಿನ್ನಲ್ಲಿಯೇ ನಾನು ಮೋಹಗೊಂಡಿದ್ದೇನೆ. ಅನುಗ್ರಹಿಸು. ನೀನು ಸರ್ವಾಂಗ ಸುಂದರಿ. ಸರ್ವರ ಮನಸ್ಸನ್ನೂ ಸೂರೆಗೊಳ್ಳುತ್ತಿರುವೆ. ಯಾರಿಗಾಗಿ ನೀನು ಹೆದರಬೇಕು? ನನ್ನನ್ನು ಬಿಟ್ಟು ಇಲ್ಲಿ ಯಾವ ಪುರುಷರೂ ಇಲ್ಲ. ನನಗಾಗಿ ನೀನು ಭಯಪಡಬೇಕಾಗಿಲ್ಲ (೩-೪). ನಾನು ಅಧರ್ಮಿಯಲ್ಲ. ಪರಸ್ತ್ರೀಗಮನವೂ ಪರಸ್ತ್ರೀಯರನ್ನು ಅಪಹರಿಸಿ ತರುವುದೂ ರಾಕ್ಷಸರಾದ ನಮಗೆ ಕುಲಧರ್ಮ! ಆದರೂ ಕೂಡ ನೀನು ಬಯಸದೆ ಬಲಾತ್ಕಾರವಾಗಿ ನಿನ್ನನ್ನು ನಾನು ಮುಟ್ಟುವುದಿಲ್ಲ. ಮನ್ಮಥನು ನನ್ನನ್ನು ಎಷ್ಟಾದರೂ ಪೀಡಿಸಲಿ! (೫-೬). ಪ್ರಿಯತಮೆ! ನೀನು ಹೆದರಬೇಕಾಗಿಲ್ಲ. ನನ್ನಲ್ಲಿ ವಿಶ್ವಾಸವಿಡು. ನನ್ನಲ್ಲಿ ಗೌರವದಿಂದ ವರ್ತಿಸು. ಹೀಗೆ ಶೋಕದಿಂದ ಕೊರಗಬೇಡ. ಕೇಶವನ್ನು ಬಾಚಿ ಹೆರಳುಹಾಕಿಕೊಳ್ಳದೆ, ನೆಲದಮೇಲೆ ಮಲಗಿ ಚಿಂತೆಮಾಡುತ್ತ, ಕೊಳೆಬಟ್ಟೆಯನ್ನುಟ್ಟು, ಅನಾವಶ್ಯಕವಾಗಿ ಉಪವಾಸಮಾಡುತ್ತಿದ್ದರೆ, ನಿನಗೆ ಬರುವ ಪುರುಷಾರ್ಥವೇನು? (೭-೮) ಜಾನಕಿ, ನನ್ನನ್ನು ಮದುವೆಯಾಗು. ನನ್ನ ಅರಮನೆಯಲ್ಲಿ ನಾನಾಬಗೆಯ ಹೂಗಳೂ ಸುಗಂಧದ್ರವ್ಯಗಳೂ ವಿಚಿತ್ರವಾದ ಬಟ್ಟೆಗಳೂ ದಿವ್ಯಾಭರಣಗಳೂ ಇವೆ. ಶ್ರೇಷ್ಠವಾದ ಮದ್ಯವೂ ಹಾಸಿಗೆಗಳೂ ಪೀಠಗಳೂ ಇವೆ. ಇವೆಲ್ಲವನ್ನೂ ನೀನು ಅನುಭವಿಸಬಹುದು. ಕಿವಿಗೆ ಬೇಕಾದ ಹಾಡನ್ನು ಕೇಳಬಹುದು. ಕಣ್ಣಿಗೆ ಬೇಕಾದ ನೃತ್ಯವನ್ನು ನೋಡಬಹುದು. ಇಷ್ಟಬಂದ ವಾದ್ಯವನ್ನು ಆಲಿಸಬಹುದು (೯-೧೦). ನೀನು ಸ್ತ್ರೀಯರಲ್ಲಿ ರತ್ನವಾಗಿದ್ದೀಯೆ. ನೀನು ಹೀಗೆ ಅನಲಂಕೃತಳಾಗಿರಬಾರದು.

ಸುಂದರಾಂಗಿ, ಒಡವೆಗಳನ್ನು ಧರಿಸು. ನನ್ನ ಬಳಿಗೆ ಬಂದು ನೀನು ಈ ರೀತಿಯಲ್ಲಿರಬಹುದೆ? ನಿನ್ನ ದಿವ್ಯವಾದ ಯೌವನ ಕಳೆದುಹೋಗುತ್ತಿದೆ. ಹರಿದುಹೋದ ನೀರಿನಹಾಗೆಯೇ ಅದು ಮರಳಿ ಹಿಂದಕ್ಕೆ ಬರುವುದಿಲ್ಲ! (೧೧–೧೨). ನಿನಗೆ ಎಣೆಯಾದ ಇನ್ನೊಬ್ಬ ರೂಪವತಿ ಈ ಜಗತ್ತಿನಲ್ಲಿಲ್ಲ. ಬ್ರಹ್ಮನು ನಿನ್ನ ರೂಪವನ್ನು ಸೃಷ್ಟಿಸಿ ಬಳಲಿಹೋಗಿ, ಇನ್ನೊಬ್ಬ ರೂಪವತಿಯನ್ನು ಸೃಷ್ಟಿಸಲಾರದೆ ಸುಮ್ಮನಾಗಿರಬೇಕು. ರೂಪಯೌವನಗಳಿಂದ ಬೀಗುತ್ತಿರುವ ನಿನ್ನನ್ನು ಕಂಡು ಪಿತಾಮಹನೂ ಕಾಮವಶನಾಗದೆ ಹೋಗಲಿಕ್ಕಿಲ್ಲ! (೧೩–೧೪). ಚಂದ್ರಮುಖಿ, ನಿನ್ನ ಯಾವ ಯಾವ ಅಂಗವನ್ನು ನೋಡಿದರೂ ನನ್ನ ಕಣ್ಣು ಅಲ್ಲಿಯೇ ನೆಟ್ಟುಹೋಗುತ್ತದೆ. ಜಾನಕಿ, ನನ್ನ ಹೆಂಡತಿಯಾಗು. ಈ ತಪ್ಪು ತಿಳಿವಳಿಕೆಯನ್ನು ಬಿಟ್ಟುಬಿಡು. ನನ್ನ ಕೈಹಿಡಿದ ಎಲ್ಲಾ ಉತ್ತಮ ಸ್ತ್ರೀಯರ ಮೇಲೂ ನೀನು ಪಟ್ಟದರಾಣಿಯಾಗಿ ಅಧಿಕಾರವನ್ನು ನಡೆಸು (೧೫–೧೬). ಸಮಸ್ತ ಲೋಕಗಳನ್ನು ಗೆದ್ದು ನಾನು ತಂದುಹಾಕಿರುವ ರತ್ನಗಳೆಲ್ಲವೂ ಇನ್ನು ಮೇಲೆ ನಿನ್ನದು. ಈ ರಾಜ್ಯವೇ ನಿನ್ನದು. ನಾನು ಕೂಡ ನಿನಗೆ ಅಧೀನ! ಹೇ ವಿಲಾಸಿನಿ! ಬೇಕಾದರೆ ಈ ನನ್ನ ರಾಜ್ಯವನ್ನೇ ನಿನ್ನ ತಂದೆಯಾದ ಜನಕನಿಗೆ ಒಪ್ಪಿಸಿಬಿಡುತ್ತೇನೆ (೧೭–೧೮). ಈ ವಿಶ್ವದಲ್ಲಿ ನನ್ನನ್ನು ಯುದ್ಧದಲ್ಲಿ ಎದುರಿಸಬಲ್ಲ ಪರಾಕ್ರಮಿಯೊಬ್ಬನೂ ಇಲ್ಲ. ನನ್ನ ಶೌರ್ಯ ಎಷ್ಟೆಂಬುದನ್ನು ನೋಡು! ದೇವಾಸುರರನ್ನು ಸಂಗ್ರಾಮದಲ್ಲಿ ಎಷ್ಟೋ ಸಲ ಸೋಲಿಸಿ ಓಡಿಸಿರುವೆನು. ಅವರಲ್ಲಿ ಯಾರೂ ನನ್ನೆದುರಿಗೆ ನಿಲ್ಲಲಾರರು (೧೯–೨೦). ಸೀತೆ, ನಿನಗೆ ಬೇಕಾದಹಾಗೆ ಶೃಂಗಾರಮಾಡಿಕೊ. ದಿವ್ಯವಾದ ಆಭರಣಗಳನ್ನು ಧರಿಸು. ಶೃಂಗಾರಮಾಡಿಕೊಂಡರೆ ನೀನು ಇನ್ನೂ ಚೆನ್ನಾಗಿ ಕಾಣುವೆ. ನನ್ನನ್ನು ವರಿಸಿ ನನ್ನೊಡನೆ ನಿನಗೆ ಇಷ್ಟಬಂದಂತೆ ಭೋಗವನ್ನು ಅನುಭವಿಸು. ಬೇಕಾದ್ದನ್ನು ಕುಡಿ. ಯಥೇಚ್ಛವಾಗಿ ವಿಹರಿಸು. ಭೂಮಿಯನ್ನೂ ಐಶ್ವರ್ಯವನ್ನೂ ನಿನ್ನ ಮನಸ್ಸಿಗೆ ಬಂದಷ್ಟು ಯಾರಿಗೆ ಬೇಕಾದರೂ ದಾನಮಾಡು (೨೧–೨೩). ಸಂಕೋಚವಿಲ್ಲದೆ ಏನುಬೇಕಾದರೂ ನನಗೆ ಆಜ್ಞೆಮಾಡು. ನಿನ್ನ ಜೊತೆಗೆ ನಿನ್ನ ತವರುಮನೆಯ ಬಂಧುಗಳೆಲ್ಲರೂ ಬಂದು ಬೇಕಾದ ಸುಖವನ್ನು ಅನುಭವಿಸಲಿ! ನನ್ನ ಮಹಾಭಾಗ್ಯವನ್ನೂ ಕೀರ್ತಿಯನ್ನೂ ನೋಡು. ನಾರುಬಟ್ಟೆಯನ್ನುಟ್ಟಿರುವ ರಾಮನಿಂದ ನಿನಗೆ ಆಗಬೇಕಾದ್ದೇನು?

(೨೪–೨೫). ರಾಮನು ಐಶ್ವರ್ಯವನ್ನು ಕಳೆದುಕೊಂಡು, ಜಯದ ಆಸೆಯನ್ನು ಬಿಟ್ಟು, ಕಾಡು ಸೇರಿದ್ದಾನೆ. ವ್ರತಮಾಡುವವನ ಹಾಗೆ ನೆಲದಮೇಲೆ ಮಲಗುತ್ತಿರುವ ಆತನು ಇಷ್ಟು ದಿನ ಬದುಕಿದ್ದಾನೋ ಇಲ್ಲವೋ ! ನನ್ನ ಕೈಗೆ ಸಿಕ್ಕಿದ ನಿನ್ನನ್ನು ರಾಮನಿಗೆ ನೋಡಲು ಕೂಡ ಸಾಧ್ಯವಿಲ್ಲ. ಸಾಲುಗಟ್ಟಿದ ಬಲಾಕಾ ಪಕ್ಷಿಗಳುಳ್ಳ ನೀಲಮೇಘದಿಂದ ಆವರಿಸಲ್ಪಟ್ಟ ಚಂದ್ರಿಕೆಯನ್ನು ನೋಡಲು ಯಾರಿಗೆ ಸಾಧ್ಯ ? (೨೬–೨೭). ಹಿರಣ್ಯಕಶಿಪು ತನ್ನ ಹೆಂಡತಿಯನ್ನು ಇಂದ್ರನಿಂದ ಪುನಃ ಹಿಂದಕ್ಕೆ ಪಡೆದದ್ದುಂಟು.* ಹಾಗೆ ರಾಮನು ಮಾತ್ರ ನಿನ್ನನ್ನು ಪಡೆಯಲಾರನು (೨೮). ಹೇ ವಿಲಾಸಿನಿ ! ನಿನ್ನ ಮುಗುಳ್ನಗೆಯ ಸೊಗಸೆಷ್ಟು ! ದಂತಪಂಕ್ತಿಯ ಚಂದವೇನು ! ಕಣ್ಣಿನ ಚೆಲುವೇನು ! ಗರುಡನು ಹಾವನ್ನೆಳೆಯುವಂತೆ ನನ್ನ ಮನಸ್ಸನ್ನು ಕಿತ್ತು ಎಳೆಯುತ್ತಿರುವೆ ! ನೀನು ಹೀಗೆ ಮಾಸಿದ ಸೀರೆಯನ್ನುಟ್ಟು, ಸಿಂಗರಿಸಿಕೊಳ್ಳದೆ ಕೃಶಳಾಗಿರುವುದನ್ನು ಕಂಡು ನನಗೆ ಬಹಳ ವ್ಯಥೆಯಾಗಿದೆ. ಪತ್ನಿಯರಲ್ಲಿಯೂ ನನ್ನ ಮನಸ್ಸು ನಲಿಯುವುದಿಲ್ಲ (೨೯–೩೦). ಜಾನಕಿ, ನನ್ನ ಅಂತಃಪುರದ ಸ್ತ್ರೀಯರೆಲ್ಲರಿಗೂ ನೀನು ಪ್ರಭುವಾಗು, ಅಂತಃಪುರೇಶ್ವರಿಯಾಗು. ಅಪ್ಸರೆಯರು ಲಕ್ಷ್ಮೀದೇವಿಯನ್ನು ಸೇವಿಸುವಂತೆ, ಶ್ರೇಷ್ಠರಾದ ನನ್ನ ಪತ್ನಿಯರೆಲ್ಲರೂ ಸೇವೆಮಾಡುತ್ತ ನಿನ್ನ ಪರಿಚಾರಿಕೆಯರಾಗಲಿ (೩೧–೩೨). ಸುಶ್ರೋಣಿ, ಕುಬೇರನ ಐಶ್ವರ್ಯವೆಲ್ಲವೂ ನನ್ನ ಮನೆಯಲ್ಲಿ ಬಿದ್ದಿದೆ. ಅವೆಲ್ಲಕ್ಕೂ ನೀನೇ ಒಡತಿಯಾಗು ! ನನ್ನ ರಾಜ್ಯಕ್ಕೂ ನನಗೂ ನೀನೇ ಒಡತಿಯಾಗು ! ದೇವಿ, ತಪಸ್ಸಿನಲ್ಲಾಗಲಿ, ಬಲಪರಾಕ್ರಮಗಳಲ್ಲಾಗಲಿ, ಐಶ್ವರ್ಯ ತೇಜಸ್ಸು ಕೀರ್ತಿಗಳಲ್ಲಾಗಲಿ ರಾಮನು ಸ್ವಲ್ಪವೂ

---

* ಈ ಶ್ಲೋಕದಲ್ಲಿ ಕೀರ್ತಿ ಎಂದರೆ ಕೀರ್ತಿಯಂತಿರುವ ಹೆಂಡತಿಯೆಂದು ವ್ಯಾಖ್ಯಾನಕಾರರು ಹೇಳಿದ್ದಾರೆ. ಭಾಗವತದಲ್ಲಿ ಹಿರಣ್ಯಕಶಿಪುವಿನ ಪತ್ನಿಯನ್ನು ಇಂದ್ರನು ಅಪಹರಿಸಿದ್ದನೆಂದೂ, ನಾರದರ ಸಂಧಾನದಿಂದ ಅವಳು ಪುನಃ ಹಿರಣ್ಯಕಶಿಪುವಿಗೆ ಲಭಿಸಿದಳೆಂದೂ ಪ್ರಹ್ಲಾದನ ಮಾತಿನಿಂದ ಗೊತ್ತಾಗುತ್ತದೆ. ಇಂದ್ರನು ಹಿರಣ್ಯಕಶಿಪುವನ್ನು ಗೆದ್ದು ಅವನ ಕೀರ್ತಿಯನ್ನು ಅಪಹರಿಸಿದನು. ಅನಂತರ ಇನ್ನೊಂದು ಯುದ್ಧದಲ್ಲಿ ಇಂದ್ರನನ್ನು ಸೋಲಿಸಿ ಹಿರಣ್ಯಕಶಿಪು ತನ್ನ ಕೀರ್ತಿಯನ್ನು ಪುನಃ ಸಂಪಾದಿಸಿದನು. ಅದರಂತೆ ಶ್ರೀರಾಮನು ಮಾತ್ರ ನಿನ್ನನ್ನು ಹಿಂದಕ್ಕೆ ಪಡೆಯಲಾರನು ಎಂಬ ಅರ್ಥವೂ ಹೊಂದುತ್ತದೆ. ಹಿರಣ್ಯಕಶಿಪುವಿನ ಪತ್ನಿ ಕಯಾಧೂ.

ನನಗೆ ಸಮನಲ್ಲ (೩೩–೩೪). ನನ್ನನ್ನು ವರಿಸಿ ಯಥೇಚ್ಛವಾಗಿ ಕುಡಿಯುತ್ತ ವಿಹರಿಸು; ಆನಂದಿಸು. ಸಮಸ್ತ ಭೋಗಗಳನ್ನೂ ಅನುಭವಿಸು. ನನ್ನ ಐಶ್ವರ್ಯ, ರಾಜ್ಯಗಳನ್ನು ನಿನಗೆ ಒಪ್ಪಿಸಿಬಿಡುವೆನು. ನಿನ್ನ ತವರುಮನೆಯ ಬಂಧುಗಳೆಲ್ಲರೂ ಬಂದು ಆನಂದದಿಂದ ಹಿಗ್ಗುತ್ತಿರಲಿ. ಹೂಗಳಿಂದ ಬೀಗುತ್ತಿರುವ, ಮಧುಕರಗಳಿಂದ ರಮಣೀಯವಾದ ಕಡಲುತೀರದ ಈ ಉದ್ಯಾನವನಗಳಲ್ಲಿ, ಸುವರ್ಣಹಾರಗಳಿಂದ ಭೂಷಿತಳಾಗಿ ನನ್ನೊಡನೆ ವಿಹರಿಸು" ಎಂದನು (೩೫–೩೬).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಇಪ್ಪತ್ತನೆಯ ಸರ್ಗ

---

## ಸರ್ಗ ೨೧

ಸೀತೆಯು ನಡುವೆ ಒಂದು ಹುಲ್ಲುಕಡ್ಡಿಯನ್ನಿಟ್ಟು, ಮಾತಾಡುವ ನೆಪದಿಂದ ರಾವಣನಿಗೆ ಬುದ್ಧಿವಾದವನ್ನು ಹೇಳುವುದು.

ಆ ರಾಕ್ಷಸನ ಮಾತನ್ನು ಕೇಳಿ ಸೀತೆಯು ಬಹುದುಃಖಿತೆಯಾಗಿ ದೀನಸ್ವರದಿಂದ ಮೆಲ್ಲಗೆ ಉತ್ತರವನ್ನು ಹೇಳತೊಡಗಿದಳು. ಆ ಮಹಾಪತಿವ್ರತೆಯು ತನ್ನ ಪತಿಯನ್ನೇ ಧ್ಯಾನಿಸುತ್ತ ತಡೆಯಲಾರದ ದುಃಖದಿಂದ ನಡುಗುತ್ತಿದ್ದಳು (೧–೨). ನಡುವೆ ಒಂದು ಹುಲ್ಲುಕಡ್ಡಿಯನ್ನಿಟ್ಟು,* ಅದರೊಡನೆ ಮಾತಾಡುತ್ತಿರುವಂತೆ, ರಾವಣನಿಗೆ ಉತ್ತರಕೊಟ್ಟಳು: "ರಾವಣ, ಈ ದುರ್ಬುದ್ಧಿಯನ್ನು ಬಿಡು. ನಿನ್ನವರಲ್ಲಿ ಈ ಸ್ನೇಹವನ್ನು ತೋರಿಸು. ಪಾಪಿಯು ಮುಕ್ತಿಯನ್ನು ಬಯಸುವುದೂ ಒಂದೇ, ನೀನು ನನ್ನನ್ನು ಬಯಸುವುದೂ ಒಂದೇ. ಪತಿಯನ್ನೇ ನಂಬಿರುವ ನಾನು ಇಂತಹ ಹೀನಕೃತ್ಯಕ್ಕೆ ಎಂದಿಗೂ ಮನಸ್ಸು ಕೊಡಲಾರೆ (೩–೪). ಉತ್ತಮಕುಲದಲ್ಲಿ ಹುಟ್ಟಿ ಉತ್ತಮಕುಲವನ್ನು ಸೇರಿ

---

* ಪರಪುರುಷನೊಡನೆ ನೇರವಾಗಿ ಮಾತಾಡುವುದು ಅನುಚಿತವೆಂದು ಮಧ್ಯದಲ್ಲಿ ಹುಲ್ಲುಕಡ್ಡಿಯನ್ನಿಟ್ಟಳು. 'ರಾವಣ, ನೀನು, ನಿನ್ನ ಐಶ್ವರ್ಯ—ಎಲ್ಲವೂ ನನ್ನ ದೃಷ್ಟಿಯಲ್ಲಿ ಒಂದು ತೃಣಕ್ಕೆ ಸಮಾನ!' ಎಂಬ ಭಾವವೂ ಸ್ವಾರಸ್ಯವಾಗಿ ತೋರುತ್ತದೆ.

ದವಳು ನಾನು" ಎಂದು ಹೇಳಿ ಮತ್ತೆ ಕೆಲವು ಧಿಕ್ಕಾರದ ಮಾತುಗಳನ್ನಾಡಿದಳು: "ನಾನು ಪರಸ್ತ್ರೀಯಾದ್ದರಿಂದ ನಿನಗೆ ಯೋಗ್ಯಳಲ್ಲ (೫–೬). ಧರ್ಮವನ್ನು ಪರಿಪಾಲಿಸು. ಒಳ್ಳೆಯ ದಾರಿಯಲ್ಲಿ ನಡೆ. ರಾಕ್ಷಸ! ನಿನ್ನ ಹೆಂಡತಿಯರ ಮರ್ಯಾದೆಯನ್ನು ನೀನು ಕಾಪಾಡುವಂತೆ, ಪರಸ್ತ್ರೀಯರ ಮರ್ಯಾದೆಯನ್ನೂ ನೀನು ಕಾಪಾಡಬೇಡವೆ? ನಿನ್ನಂತೆಯೇ ಇತರರೆಂದು ತಿಳಿದು ನಿನ್ನ ಪತ್ನಿಯರಲ್ಲಿ ನೀನು ಸ್ನೇಹದಿಂದಿರು. ಇಂದ್ರಿಯ ಚಾಪಲ್ಯದಿಂದ ಪರಸ್ತ್ರೀಯರನ್ನು ಕೆಣಕುವ ಬುದ್ಧಿಹೀನನಿಗೆ ಕೇಡು ತಪ್ಪಿದ್ದಲ್ಲ. ಇಲ್ಲಿ ನಿನಗೆ ಬುದ್ಧಿವಾದವನ್ನು ಹೇಳತಕ್ಕ ಸಜ್ಜನರು ಯಾರೂ ಇಲ್ಲವೊ? ಇದ್ದರೂ ಅವರ ಮಾತನ್ನು ನೀನು ಕೇಳುವುದಿಲ್ಲವೊ? (೭–೯). ಸದಾಚಾರವನ್ನು ತೊರೆದು, ನಿನ್ನ ಬುದ್ಧಿ ದುರ್ಮಾರ್ಗದಲ್ಲಿ ಹೋಗುತ್ತಿದೆಯಲ್ಲ. ಸಜ್ಜನರು ಹೇಳುವ ಪಥ್ಯವಾದ ಮಾತನ್ನು ತಳ್ಳಿಹಾಕಿ, ಈ ರಾಕ್ಷಸರೆಲ್ಲರ ವಿನಾಶಕ್ಕೆ ಕಾರಣನಾಗುತ್ತಿರುವೆಯೋ ಹೇಗೆ? ರಾಜನು ದುರ್ಮಾರ್ಗದಲ್ಲಿ ನಿರತನಾದರೆ, ರಾಜ್ಯಗಳು ಎಷ್ಟು ಸಮೃದ್ಧವಾಗಿದ್ದರೂ ನಾಶಹೊಂದುತ್ತವೆ. ನಿನ್ನೊಬ್ಬನ ತಪ್ಪಿನಿಂದ ಈ ಲಂಕಾನಗರವೇ ನಾಶವಾದೀತು (೧೧–೧೨). ರಾವಣ, ತನ್ನ ತಪ್ಪಿನಿಂದಲೇ ಹಾಳಾಗುವವನನ್ನು ನೋಡಿ ಸಮಸ್ತರೂ ಸಂತೋಷಪಡುತ್ತಾರೆ. ಅಂತಹ ಪಾಪಿಗಾಗಿ ಯಾರೂ ಪಶ್ಚಾತ್ತಾಪಪಡುವುದಿಲ್ಲ. ನಿನ್ನಿಂದ ಪೀಡಿತರಾದ ಜನರು ನಿನಗೆ ಕಷ್ಟ ಬಂದಾಗ 'ಈ ಕ್ರೂರಿಗೆ ಸರಿಯಾದ ವಿಪತ್ತು ಬಂದಿದೆ. ಒಳ್ಳೆಯದೇ ಆಯಿತು!' ಎಂದುಕೊಳ್ಳುತ್ತಾರೆ. ನಿನ್ನ ಐಶ್ವರ್ಯಕ್ಕೆ ನಾನು ಮರುಳಾಗತಕ್ಕವಳಲ್ಲ (೧೩–೧೫). ಸೂರ್ಯನಿಂದ ಅವನ ಪ್ರಭೆಯನ್ನು ಬೇರ್ಪಡಿಸಲು ಶಕ್ಯವೆ? ಹಾಗೆ ರಾಘವನಿಂದ ನನ್ನನ್ನು ಬೇರ್ಪಡಿಸಲು ಶಕ್ಯವಿಲ್ಲ. ಲೋಕನಾಥನಾದ ಶ್ರೀರಾಮಚಂದ್ರನ ಭುಜದ ಮೇಲೆ ತಲೆಯಿಟ್ಟು ಮಲಗುತ್ತಿದ್ದ ನಾನು, ಕ್ಷುದ್ರನಾದ ಇನ್ನೊಬ್ಬನ ಭುಜವನ್ನು ಎಂದಿಗಾದರೂ ಆಶ್ರಯಿಸುತ್ತೇನೆಯೆ? (೧೬–೧೭). ವಿದ್ಯಾಭ್ಯಾಸಮಾಡಿ ಸ್ನಾತಕನಾದ ವಿದ್ವಾಂಸನಿಗೆ ವಿದ್ಯೆ ಇರುವಂತೆ, ನಾನು ಶ್ರೀರಾಮನಿಗೆ ಧರ್ಮಪತ್ನಿಯಾಗಿದ್ದೇನೆ. ರಾವಣ, ನಾನು ಬಹಳ ದುಃಖಿತೆಯಾಗಿದ್ದೇನೆ. ಹೆಣ್ಣಾನೆಯನ್ನು ಗಂಡಾನೆಯ ಬಳಿಗೆ ಸೇರಿಸುವಂತೆ ನನ್ನನ್ನು ಶ್ರೀರಾಮನ ಸಂಗಡ ಸೇರಿಸಿಬಿಡು (೧೮). ಲಂಕೆಯನ್ನು ಪಾಲಿಸಬೇಕೆಂದೂ ಇನ್ನೂ ಕೆಲವು ಕಾಲ

ಜೀವಿಸಿರಬೇಕೆಂದೂ ನಿನಗೆ ಇಚ್ಛೆ ಇದ್ದರೆ, ನೀನು ಶ್ರೀರಾಮನೊಡನೆ ಮೈತ್ರಿಯನ್ನು ಬೆಳೆಸು. ಅವನು ಧರ್ಮಜ್ಞ. ಶರಣಾಗತರನ್ನು ಕೈಬಿಡುವುದಿಲ್ಲ (೧೯–೨೦). ಬದುಕುವ ಬಯಕೆಯಿದ್ದರೆ, ರಾಘವನೊಡನೆ ಸ್ನೇಹವನ್ನು ಬೆಳೆಸು. ನನ್ನನ್ನು ಶ್ರೀರಾಮನಿಗೆ ಒಪ್ಪಿಸಿ ಅವನ ಕ್ಷಮೆಯನ್ನು ಕೇಳು. ಇದರಿಂದ ನಿನಗೆ ಶ್ರೇಯಸ್ಸು ಉಂಟು. ಇಲ್ಲದಿದ್ದರೆ ನಿನ್ನ ವಧೆಯಾಗುವುದು ನಿಶ್ಚಯ. ಒಂದು ವೇಳೆ ವಜ್ರಾಯುಧದಿಂದಲಾದರೂ ನೀನು ತಪ್ಪಿಸಿಕೊಳ್ಳಬಹುದು. ಯಮನಿಂದಲೂ ತಪ್ಪಿಸಿಕೊಳ್ಳಬಹುದು (೨೧–೨೩). ಲೋಕನಾಥನಾದ ಶ್ರೀರಾಮನು ಕ್ರುದ್ಧನಾದರೆ ಮಾತ್ರ ನಿನ್ನನ್ನು ಎಂದಿಗೂ ಉಳಿಸುವುದಿಲ್ಲ. ದೇವೇಂದ್ರನ ವಜ್ರಾಯುಧದ ಘೋಷದಂತೆ ಕಠೋರವಾದ ಶ್ರೀರಾಮನ ಧನುಷ್ಟಂಕಾರವನ್ನು ಸದ್ಯದಲ್ಲಿಯೇ ನೀನು ಕೇಳಬೇಕಾದೀತು. ರಾಮಲಕ್ಷ್ಮಣನಾಮಾಂಕಿತಗಳಾದ ಘೋರಬಾಣಗಳು ಸರ್ಪಗಳಂತೆ ಬೆಂಕಿಯನ್ನುಗುಳುತ್ತ, ರಾಕ್ಷಸರನ್ನು ಧ್ವಂಸಮಾಡುತ್ತ, ಈ ಪಟ್ಟಣದೊಳಗೆ ನುಗ್ಗಿಬರುತ್ತವೆ. ಶ್ರೀರಾಮನೆಂಬ ಗರುತ್ಮಂತನು ರಾಕ್ಷಸರೆಂಬ ಸರ್ಪಗಳನ್ನು ಎಳೆದೆಳೆದು ಕೊಂದುಹಾಕುವನು. ಶತ್ರುಗಳನ್ನು ಧ್ವಂಸಮಾಡಿ ನನ್ನ ಗಂಡನು ನನ್ನನ್ನು ಬಿಡಿಸಿಕೊಂಡು ಹೋಗುತ್ತಾನೆ (೨೪–೨೮). ತ್ರಿವಿಕ್ರಮನು ಮೂರು ಹೆಜ್ಜೆಗಳಲ್ಲಿ ರಾಕ್ಷಸರ ವಶವಾಗಿದ್ದ ರಾಜ್ಯಲಕ್ಷ್ಮಿಯನ್ನು ಬಿಡಿಸಿದಂತೆ, ನನ್ನನ್ನು ಸುಲಭವಾಗಿ ಬಿಡಿಸಿಕೊಳ್ಳುತ್ತಾನೆ. ಜನಸ್ಥಾನದಲ್ಲಿ ರಾಕ್ಷಸರೆಲ್ಲರೂ ನಿರ್ನಾಮವಾಗಲು, ಕೈಲಾಗದ ನೀನು ಕಳ್ಳತನದಿಂದ ಈ ಅಕಾರ್ಯವನ್ನು ಮಾಡಿದ್ದೀಯೆ. ಅಧಮ! ಪುರುಷಸಿಂಹರಾದ ಆ ಇಬ್ಬರು ಅಣ್ಣತಮ್ಮಂದಿರೂ ವನಪ್ರದೇಶಕ್ಕೆ ಹೋಗಿರುವಾಗ ನನ್ನನ್ನು ಕದ್ದುತಂದೆಯಲ್ಲವೆ? (೨೯–೩೧). ಆಶ್ರಮದಲ್ಲಿ ರಾಮಲಕ್ಷ್ಮಣರ ಸುಳಿವು ಇದ್ದಿದ್ದರೆ ನೀನು ಬರುತ್ತಿದ್ದೆಯಾ? ಹುಲಿಗಳ ವಾಸನೆ ಇದ್ದಲ್ಲಿಗೆ ನಾಯಿ ಬಂದೀತೆ? ಅವರು ಕಂಡಿದ್ದರೆ ನಿನ್ನ ಎರಡು ಕೈಗಳು ಉಳಿಯುತ್ತಿದ್ದವೆ? ಇಂದ್ರನು ವೃತ್ರಾಸುರನ ಒಂದು ಕೈಯನ್ನು ಕತ್ತರಿಸಿದಂತೆ ನಿನ್ನ ಕೈಯದ್ನು ಕತ್ತರಿಸಿಹಾಕುತ್ತಿದ್ದರು. ಸ್ವಲ್ಪ ದಿನಗಳಲ್ಲಿಯೇ ನನ್ನ ಪತಿಯು ಲಕ್ಷ್ಮಣನೊಡನೆ ಬಂದು, ಸೂರ್ಯನು ತನ್ನ ಕಿರಣಗಳಿಂದ ನೀರನ್ನು ಹೀರುವಂತೆ, ತನ್ನ ಬಾಣಗಳಿಂದ ನಿನ್ನ ಪ್ರಾಣವನ್ನು ಹೀರಿಬಿಡುತ್ತಾನೆ (೩೨–೩೩). ನೀನು ಕುಬೇರನ ಕೈಲಾಸಕ್ಕೆ ಓಡಿಹೋದರೂ

ವರುಣನ ಪಾತಾಳಲೋಕಕ್ಕೆ ಹೋದರೂ ರಾಮಬಾಣಗಳಿಂದ ತಪ್ಪಿಸಿಕೊಳ್ಳಲಾರೆ. ಆಯುಸ್ಸು ತೀರಿದ ಮರವು ಸಿಡಿಲಿನ ಹೊಡೆತಕ್ಕೆ ಸಿಕ್ಕಿದ ಮೇಲೆ ಉಳಿದೀತೆ?" ಎಂದಳು (೩೪).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಇಪ್ಪತ್ತೊಂದನೆಯ ಸರ್ಗ

---

## ಸರ್ಗ ೨೨

ಸೀತೆಯ ಮಾತಿನಿಂದ ರಾವಣನು ಕ್ರುದ್ಧನಾಗಿ, ಅವಳಿಗೆ ಎರಡು ತಿಂಗಳ ಅವಧಿಯನ್ನು ಕೊಟ್ಟು ಎಚ್ಚರಿಕೆ ಹೇಳುವುದು. ಅವಳನ್ನು ಹಾದಿಗೆ ತರಬೇಕೆಂದು ರಾಕ್ಷಸಸ್ತ್ರೀಯರಿಗೆ ಆಜ್ಞಾಪಿಸಿ ಅಂತಃಪುರಕ್ಕೆ ಹಿಂದಿರುಗುವುದು.

ಸೀತೆಯು ಆಡಿದ ಈ ಕ್ರೂರವಾದ ಮಾತನ್ನು ಕೇಳಿ ರಾಕ್ಷಸೇಶ್ವರನು ಹೀಗೆಂದನು: "ಸೀತೆ, ಲೋಕದಲ್ಲಿ ಪುರುಷನು ಸ್ತ್ರೀಯರಿಗೆ ಪ್ರಿಯವಾದ ಮಾತನ್ನು ಹೇಳಿದರೆ, ಅವರು ಪುರುಷನನ್ನು ಪ್ರೀತಿಸುತ್ತಾರೆ. ನೀನು ಮಾತ್ರ ಪ್ರಿಯವಾದ ಮಾತನ್ನು ನಾನು ಹೇಳಿದಷ್ಟೂ ನನ್ನನ್ನು ತಿರಸ್ಕರಿಸುತ್ತಿದ್ದೀಯೆ (೧–೨). ದಾರಿತಪ್ಪಿ ಹೋಗುವ ಕುದುರೆಗಳನ್ನು ಸಾರಥಿಯು ಬಿಗಿಹಿಡಿಯುವಂತೆ, ನನಗೆ ನಿನ್ನಲ್ಲಿರುವ ಕಾಮವು ಉಕ್ಕುತ್ತಿರುವ ನನ್ನ ಕೋಪವನ್ನು ತಡೆಯುತ್ತಿದೆ. ಜನರಿಗೆ ಕಾಮ ಎನ್ನುವುದು ವಿಚಿತ್ರವಾದ ವಕ್ರಸ್ವಭಾವ. ಯಾರ ವಿಷಯದಲ್ಲಿ ಕಾಮವಿರುತ್ತದೆಯೊ, ಅವರ ವಿಷಯದಲ್ಲಿ ದಯೆಯೂ ಸ್ನೇಹವೂ ಹುಟ್ಟಿಬಿಡುತ್ತವೆ (೩–೪). ಆದ್ದರಿಂದ, ಸುಂದರಿ, ನಿನ್ನನ್ನು ಈಗ ಕೊಲ್ಲದೆ ಬಿಟ್ಟಿದ್ದೇನೆ. ನೀನು ವಧಾರ್ಹಳು. ನಿನ್ನ ಮಾನಭಂಗಮಾಡಿದರೂ ತಪ್ಪಲ್ಲ. ಜನರನ್ನು ಮರುಳುಮಾಡುವುದಕ್ಕಾಗಿ ಮುನಿವೇಷವನ್ನು ಧರಿಸಿದ ಕಪಟಿಯಲ್ಲಿ ಅನುರಕ್ತಳಾಗಿದ್ದೀಯೆ. ನೀನಾಡಿದ ಒಂದೊಂದು ಮಾತಿಗೂ ಚಿತ್ರಹಿಂಸೆಮಾಡಿ ನಿನ್ನನ್ನು ವಧಿಸಬೇಕಾಗಿತ್ತು" (೫–೬). ಹೀಗೆ ಹೇಳಿ ರಾವಣನು ಕ್ರೋಧದಿಂದ ಸೀತೆಯನ್ನು ದುರದುರನೆ ನೋಡುತ್ತ— "ನಾನು ಕೊಟ್ಟಿದ್ದ ಒಂದು ವರ್ಷದ ಅವಧಿಯಲ್ಲಿ ಇನ್ನು ಎರಡು ತಿಂಗಳು

ಮಾತ್ರ ಉಳಿದಿವೆ. ಅಷ್ಟರಲ್ಲಿ ನೀನು ನನ್ನ ಹಾಸಿಗೆಯನ್ನು ಏರಲೇಬೇಕು. ಎರಡು ತಿಂಗಳ ಮೇಲೂ ನನ್ನನ್ನು ಗಂಡನೆಂದು ಒಪ್ಪದಿದ್ದರೆ, ಅಡಿಗೆಮನೆಯಲ್ಲಿ ಬೆಳಗಿನ ಊಟವನ್ನು ಸಿದ್ಧಪಡಿಸುವುದಕ್ಕಾಗಿ ನಿನ್ನನ್ನು ಕತ್ತರಿಸಿಹಾಕುತ್ತಾರೆ" ಎಂದನು (೭–೯). ಹೀಗೆ ರಾವಣನು ಜಾನಕಿಯನ್ನು ಹೆದರಿಸುತ್ತಿರಲು, ಅವನೊಡನೆ ಬಂದಿದ್ದ ದೇವಗಂಧರ್ವ ಕನ್ನಿಕೆಯರಿಗೆ ಬಹಳ ವಿಷಾದವಾಯಿತು. ಅವರು ತುಟಿ, ಮುಖ, ಕಣ್ಣುಗಳಿಂದ ಸಂಜ್ಞೆಮಾಡಿ ಸೀತೆಯನ್ನು ಸಮಾಧಾನಪಡಿಸುತ್ತಿದ್ದರು (೧೦–೧೧). ಆಗ ಸೀತೆಯು ಧೈರ್ಯತಾಳಿ ಪಾತಿವ್ರತ್ಯದ ಬಲವಿದ್ದುದರಿಂದ ರಾವಣನಿಗೆ ದಿಟ್ಟತನದ ಉತ್ತರ ಕೊಟ್ಟಳು : "ರಾವಣ, ನಿಜವಾಗಿಯೂ ಇಲ್ಲಿ ನಿನ್ನ ಶ್ರೇಯಸ್ಸನ್ನು ಬಯಸಿ ಹಿತೋಪದೇಶ ಮಾಡತಕ್ಕವರು ಇಲ್ಲವೆಂದೇ ತೋರುತ್ತಿದೆ. ಇಂತಹ ಹೀನಕೃತ್ಯಕ್ಕೆಳಸಿರುವ ನಿನ್ನನ್ನು ತಡೆಯತಕ್ಕವರೇ ಇಲ್ಲವೆ? (೧೨–೧೩). ಇಂದ್ರನಿಗೆ ಶಚಿಯಂತೆ, ಧರ್ಮಾತ್ಮನಾದ ರಾಮನಿಗೆ ಪತ್ನಿಯಾದ ನನ್ನನ್ನು ಮನಸ್ಸಿನಲ್ಲಾದರೂ ಬಯಸುವವನು ಈ ಜಗತ್ತಿನಲ್ಲಿ ನಿನ್ನನ್ನು ಬಿಟ್ಟರೆ ಇನ್ನೊಬ್ಬನಿಲ್ಲ. ಅಧಮ ! ಮಹಾತೇಜಸ್ವಿಯಾದ ಶ್ರೀರಾಮನ ಪತ್ನಿಗೆ ಇಂತಹ ತುಚ್ಛವಾದ ಮಾತನ್ನಾಡಿದೆಯಾ ? ಎಲ್ಲಿ ಹೋಗಿ ಅವನಿಂದ ತಪ್ಪಿಸಿಕೊಂಡೀಯೆ ? ಶ್ರೀರಾಮನೆಂದರೆ ಮದಿಸಿದ ಒಂದು ಮಹಾಗಜ. ಅವನೆದುರಿಗೆ ನೀನು ಒಂದು ಚಿಕ್ಕ ಮೊಲ ! (೧೪–೧೬). ಇಂತಹ ನೀನು ಈ ಇಕ್ಷ್ವಾಕುನಾಥನನ್ನು ನಿಂದಿಸುವುದಕ್ಕೆ ನಾಚಿಕೆಯಾಗುವುದಿಲ್ಲವೆ? ನೀನು ಇನ್ನೂ ಅವನ ಕಣ್ಣಿಗೆ ಬಿದ್ದಿಲ್ಲ. ಅಯೋಗ್ಯ! ನನ್ನನ್ನು ಹೀಗೆ ದಿಟ್ಟಿಸಿ ನೋಡುತ್ತಿರುವ ನಿನ್ನ ಈ ವಿಕಾರವಾದ ಕೆಂಗಣ್ಣುಗಳು ಸಿಡಿದುಬಿದ್ದುಹೋಗಬಾರದೆ? ಆ ಧರ್ಮಾತ್ಮನ ಪತ್ನಿಯಾಗಿ, ದಶರಥಮಹಾರಾಜನಿಗೆ ಸೊಸೆಯಾದ ನನಗೆ ಇಂತಹ ಮಾತನ್ನಾಡುವೆಯಾ ? ನಿನ್ನ ನಾಲಗೆ ಸೀಳಿಹೋಗಬಾರದೆ? (೧೭–೧೯). ನನ್ನ ತೇಜಸ್ಸಿನಿಂದಲೇ ನಿನ್ನನ್ನು ಸುಟ್ಟು ಬೂದಿಮಾಡಬಲ್ಲೆನು. ಆದರೆ ಶ್ರೀರಾಮನು ಅನುಮತಿ ಕೊಟ್ಟಿಲ್ಲವೆಂದೂ ತಪಃಶಕ್ತಿಯು ವ್ಯರ್ಥವಾಗುವುದೆಂದೂ ಸುಮ್ಮನಿದ್ದೇನೆ. ಧೀಮಂತನಾದ ರಾಮನನ್ನು ವಂಚಿಸಿ ನನ್ನನ್ನು ಅಪಹರಿಸಲು ನಿನಗೆ ಶಕ್ತಿ ಎಲ್ಲಿಂದ ಬಂದೀತು ? ನಿನ್ನ ವಧೆಗೋಸ್ಕರ ದೈವವೇ ಗೊತ್ತುಪಡಿಸಿದ ಒಂದು ಏರ್ಪಾಡು ಇದು. ನಾನು ಕುಬೇರನ ತಮ್ಮನೆಂದೂ ಮಹಾಶೂರನೆಂದೂ ಬೇಕಾದಷ್ಟು ಬಲಸಂಪತ್ತಿದೆ

ಯೆಂದೂ ಹೇಳಿಕೊಂಡೆಯಲ್ಲ. ಹಾಗಾದರೆ, ಶ್ರೀರಾಮನನ್ನು ವಂಚಿಸಿ ನನ್ನನ್ನು ಕಳ್ಳತನದಿಂದ ತಂದಿದ್ದೇಕೆ?" ಎಂದಳು (೨೦–೨೨). ಈ ಮಾತನ್ನು ಕೇಳಿ ರಾವಣನು ಕ್ರೂರವಾದ ಕಣ್ಣಾಲಿಗಳನ್ನು ತಿರುಗಿಸುತ್ತ ವೈದೇಹಿಯನ್ನು ದುರ ಗುಟ್ಟಿ ನೋಡತೊಡಗಿದನು. ಅವನಾದರೋ ಮೇಘದಂತೆ ಕಪ್ಪಾಗಿರುವನು; ದೀರ್ಘವಾದ ಬಾಹುಗಳು; ಉಬ್ಬಿದ ಕಂಠ; ಸಿಂಹದಂತಹ ಪರಾಕ್ರಮ. ಕಣ್ಣು ನಾಲಗೆಗಳು ಉರಿಯುವ ಜ್ವಾಲೆಯಂತಿದ್ದವು. ಕೋಪಾವೇಶದಿಂದ ಕಿರೀಟವು ಚಲಿಸುತ್ತಿತ್ತು. ಚಿತ್ರವರ್ಣದ ಮಾಲೆಗಳನ್ನೂ ರಕ್ತವಸ್ತ್ರವನ್ನೂ ಅವನು ಧರಿಸಿದ್ದನು. ಭುಜಕೀರ್ತಿಗಳು ಹೊಳೆಯುತ್ತಿದ್ದವು (೨೩–೨೫). ಅಮೃತಮಂಥನ ಕಾಲದಲ್ಲಿ ಮಂದರಪರ್ವತಕ್ಕೆ ಸುತ್ತಿದ ವಾಸುಕಿಯಂತೆ ದೊಡ್ಡದಾದ ಕಪ್ಪನೆಯ ನಡುಪಟ್ಟಿ. ಅವನು ಪುಷ್ಟವಾದ ಎರಡು ಭುಜ* ಗಳನ್ನು ನೀಡಿ ನಿಂತಿರಲು, ಶಿಖರಗಳಿಂದೊಡಗೂಡಿದ ಮಂದರಪರ್ವತದಂತೆ ಶೋಭಿಸುತ್ತಿದ್ದನು (೨೬–೨೭). ಬಾಲಸೂರ್ಯನಂತೆ ಎಸೆಯುವ ಎರಡು ಕುಂಡಲಗಳನ್ನು ಧರಿಸಿದ್ದನು. ಕಲ್ಪವೃಕ್ಷದಂತೆಯೂ ಸಾಕ್ಷಾತ್ ವಸಂತ ನಂತೆಯೂ ಅಲಂಕಾರಭೂಷಿತನಾಗಿದ್ದರೂ ಅವನು ಶ್ಮಶಾನದಲ್ಲಿರುವ ಗುಂಡಿ ಯಂತೆ ಭಯಂಕರನಾಗಿ ಕಾಣುತ್ತಿದ್ದನು (೨೮–೨೯). ರಾವಣನು ಕೆಂಗಣ್ಣಿ ನಿಂದ ಸೀತೆಯನ್ನು ನೋಡುತ್ತ ಸರ್ಪದಂತೆ ಬುಸುಗುಟ್ಟುತ್ತ "ಎಲೆ, ನೀತಿ ಭ್ರಷ್ಟನಾದ ಆ ದರಿದ್ರನನ್ನು ನಂಬಿರುವೆಯಾ? ಸೂರ್ಯನು ಸಂಧ್ಯಾಕಾಲದ ಕತ್ತಲೆಯನ್ನು ನಾಶಮಾಡುವಂತೆ ನಿನ್ನನ್ನು ಈಗಲೇ ಧ್ವಂಸಮಾಡಿಬಿಡು ತ್ತೇನೆ" ಎಂದು ನುಡಿದು ಸುತ್ತಲೂ ಇದ್ದ ಘೋರರಾಕ್ಷಸಿಯರನ್ನು ಕುರಿತು "ಇತ್ತ ಬನ್ನಿರಿ!" ಎಂದು ಆಜ್ಞಾಪಿಸಿದನು (೩೦–೩೨). ಅವರಿಗೆ ಒಂದು ಕಣ್ಣು, ಒಂದು ಮೂಗು–ಹೀಗೆ ವಿಕಾರವಾದ ದೇಹವಿದ್ದಿತು. ಅವರನ್ನುದ್ದೇಶಿಸಿ "ಎಲೈ ರಾಕ್ಷಸಿಯರೆ, ನೀವೆಲ್ಲರೂ ಸೇರಿ ಈ ಸೀತೆಯು ನನ್ನ ವಶಳಾಗುವಂತೆ ಪ್ರಯತ್ನಮಾಡಿರಿ (೩೩–೩೬). ಸಾಮ ದಾನ ಭೇದೋಪಾಯಗಳನ್ನುಪ ಯೋಗಿಸಿರಿ. ದಂಡೋಪಾಯವನ್ನೂ ನೀವು ಕೈಗೊಳ್ಳಬಹುದು" ಎಂದು

---

* ರಾವಣನು ಕಾಮರೂಪಿಯಾದ್ದರಿಂದ ಯುದ್ಧ ಮುಂತಾದ ಸಂಭ್ರಮ ಕಾಲದಲ್ಲಿ ೧೦ ತಲೆಗಳೂ ೨೦ ಭುಜಗಳೂ ಇರುತ್ತಿದ್ದವು. ಉಳಿದ ಕಾಲದಲ್ಲಿ ೧ ತಲೆ ಮತ್ತು ೨ ಭುಜಗಳು.

ಆಜ್ಞಾಪಿಸಿ, ಕಾಮಕ್ರೋಧಗಳಿಂದ ಆವಿಷ್ಟನಾಗಿ ಜಾನಕಿಯನ್ನು ಹೆದರಿಸುತ್ತಿದ್ದನು (೩೭–೩೮). ಅಷ್ಟರಲ್ಲಿ ಧಾನ್ಯಮಾಲಿನಿ ಎಂಬ ರಾವಣನ ಭಾರ್ಯೆಯೊಬ್ಬಳು ಮುಂದೆ ಬಂದು ರಾವಣನನ್ನು ಅಪ್ಪಿಕೊಂಡು ಹೀಗೆಂದಳು: "ಮಹಾರಾಜ, ಈ ಸೀತೆಯಿಂದ ಆಗಬೇಕಾದ್ದೇನು? ನನ್ನೊಡನೆ ಆನಂದದಿಂದಿರು. ಕಂದಿಹೋಗಿರುವ ಕ್ಷುದ್ರಳಾದ ಈ ಮನುಷ್ಯಸ್ತ್ರೀಯಳಲ್ಲಿ ಪ್ರೇಮವೇಕೆ? ನೀನು ಬಾಹುಬಲದಿಂದ ಸಂಪಾದಿಸಿದ ದಿವ್ಯಭೋಗಗಳನ್ನು ಅನುಭವಿಸುವಂತೆ ಬ್ರಹ್ಮನು ಇವಳ ಹಣೆಯಲ್ಲಿ ಬರೆದಿಲ್ಲ (೩೯–೪೧). ಕಾಮವಿಲ್ಲದವಳನ್ನು ಕಾಮಿಸುವವನಿಗೆ ಶ್ರಮವೇ ಹೊರತು ಸುಖವಿಲ್ಲ. ಕಾಮಿಸಿ ಬಂದವಳನ್ನು ಪ್ರೀತಿಸುವವನಿಗೆ ಬಹಳ ಸುಖವುಂಟು." ಹೀಗೆ ನುಡಿದು ಆ ರಾಕ್ಷಸಿಯು ರಾವಣನನ್ನು ತಡೆದು ನಿಲ್ಲಿಸಿದಳು (೪೨–೪೩). ಆಗ ರಾವಣನು ಗಹಗಹಿಸಿ ನಗುತ್ತ, ಭೂಮಿಯು ನಡುಗುವಂತೆ ಹೆಜ್ಜೆಗಳನ್ನಿಡುತ್ತ ಅಲ್ಲಿಂದ ಹೊರಟು ಸೂರ್ಯಸಂಕಾಶವಾದ ತನ್ನ ಅರಮನೆಯನ್ನು ಪ್ರವೇಶಿಸಿದನು. ದೇವಗಂಧರ್ವಕನ್ಯೆಯರೂ ನಾಗಕನ್ಯೆಯರೂ ಅವನನ್ನು ಹಿಂಬಾಲಿಸಿ ಅರಮನೆಗೆ ಹೋದರು (೪೪–೪೫). ಹೀಗೆ ರಾವಣನು ಧರ್ಮಪರಾಯಣಳಾಗಿ ಭಯದಿಂದ ನಡುಗುತ್ತಿದ್ದ ಸೀತಾದೇವಿಯನ್ನು ಬೆದರಿಸಿ, ವೈಭವೋಪೇತವಾದ ತನ್ನ ಗೃಹಕ್ಕೆ ಕಾಮಮೋಹಿತನಾಗಿಯೇ ಹಿಂದಿರುಗಿ ಬಂದನು (೪೬).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಇಪ್ಪತ್ತೆರಡನೆಯ ಸರ್ಗ

---

## ಸರ್ಗ ೨೩

ರಾವಣನನ್ನು ವರಿಸು ಎಂದು ರಾಕ್ಷಸಿಯರು ಸೀತೆಗೆ ಹೇಳುವುದು.

ರಾವಣನು ಸೀತೆಯನ್ನು ವಶಪಡಿಸಿಕೊಳ್ಳಬೇಕೆಂದು ರಾಕ್ಷಸಿಯರಿಗೆ ಆದೇಶ ಮಾಡಿ ಹೊರಟುಹೋದನು. ಅವನು ಅತ್ತ ಅಂತಃಪುರವನ್ನು ಪ್ರವೇಶಿಸಲು ಇತ್ತ ರಾಕ್ಷಸಿಯರು ಸೀತಾದೇವಿಯನ್ನು ಸುತ್ತುಗಟ್ಟಿದರು (೧–೨). ಅವರು ಕುಪಿತರಾಗಿ ವೈದೇಹಿಯನ್ನು ಕುರಿತು "ಸೀತೆ, ಪುಲಸ್ತ್ಯವಂಶಶ್ರೇಷ್ಠನೂ ಮಹಾತ್ಮನೂ ಆದ ರಾವಣನಿಗೆ ಭಾರ್ಯೆಯಾಗಲು ನೀನು ಏಕೆ ಒಪ್ಪು

ವುದಿಲ್ಲ ?" ಎಂದರು (೩–೪). ಆಮೇಲೆ ಏಕಜಟೆ ಎಂಬ ರಾಕ್ಷಸಿಯು ಕೋಪದಿಂದ ಕಣ್ಣನ್ನು ಕೆಂಪಗೆಮಾಡಿಕೊಂಡು "ಸೀತೆ, ಆರು ಮಂದಿ * ಪ್ರಜಾಪತಿಗಳಲ್ಲಿ ಪುಲಸ್ತ್ಯನೆಂಬವನು ನಾಲ್ಕನೆಯವನು. ಅವನು ಬ್ರಹ್ಮನ ಮಾನಸಪುತ್ರ. ಆತನಿಗೆ ವಿಶ್ರವಸ್ಸು ಎಂಬ ಹೆಸರಿನ ಮಾನಸಪುತ್ರನು ಹುಟ್ಟಿದನು. ಆತನು ಪ್ರಜಾಪತಿಗಳಿಗೆ ಸಮಾನವಾದ ತೇಜಸ್ಸುಳ್ಳವನು (೫–೭). ಆ ವಿಶ್ರವಸ್ಸಿನ ಮಗನೇ ಶತ್ರುಭಯಂಕರನಾದ ಈ ರಾವಣ. ಈ ರಾಕ್ಷಸೇಶ್ವರನಿಗೆ ನೀನು ಭಾರ್ಯೆಯಾಗುವುದು ಒಳ್ಳೆಯದು. ನನ್ನ ಮಾತನ್ನು ನೀನು ಏಕೆ ಒಪ್ಪಬಾರದು ?" ಎಂದಳು (೮–೯). ಅನಂತರ ಬೆಕ್ಕಿನಂತಹ ಕಣ್ಣುಳ್ಳ ಹರಿಜಟೆ ಎಂಬ ರಾಕ್ಷಸಿಯು ಕಣ್ಣುಗಳನ್ನು ತಿರುಗಿಸುತ್ತ "ಸಕಲ ದೇವತೆಗಳನ್ನೂ† ದೇವರಾಜನಾದ ಇಂದ್ರನನ್ನೂ ಸೋಲಿಸಿರುವ ನಮ್ಮ ರಾಕ್ಷಸೇಂದ್ರನಿಗೆ ಹೆಂಡತಿಯಾಗು" ಎಂದು ಒರಲಿದಳು (೧೦–೧೧). ಪ್ರಘಸೆ ಎಂಬವಳು ಕ್ರುದ್ಧಳಾಗಿ ಸೀತೆಯನ್ನು ಹೆದರಿಸುತ್ತ "ಸಂಗ್ರಾಮಶೂರನೂ ಪರಾಕ್ರಮಿಯೂ ಆದ ರಾವಣನ ಭಾರ್ಯೆಯಾಗಲು ಏಕೆ ಇಷ್ಟವಿಲ್ಲ? ಅಂತಃಪುರದಲ್ಲಿ ಸಾವಿರಾರು ಸುಂದರಿಯರಿದ್ದರೂ ಅವರನ್ನು ಬಿಟ್ಟು ರಾವಣನು ನಿನ್ನನ್ನು ಕಾಮಿಸುತ್ತಿರುವನಲ್ಲ ! ಇದು ನಿನ್ನ ಮಹಾಭಾಗ್ಯವಲ್ಲವೆ ?" ಎಂದು ಕೇಳಿದಳು (೧೨–೧೫). ಆಮೇಲೆ ವಿಕಟೆ ಎಂಬ ರಾಕ್ಷಸಿಯು "ಸಮರದಲ್ಲಿ ನಾಗಗಂಧರ್ವದಾನವರನ್ನು ಪರಾಜಯಗೊಳಿಸಿದ ವೈಭವಶಾಲಿಯಾದ ರಾವಣನು ನಿನ್ನ ಬಳಿಗೆ ಬಂದರೆ 'ಬೇಡ' ಎನ್ನುವೆಯಾ ? ಅಧಮೆ !" ಎಂದು ಅಬ್ಬರಿಸಿದಳು (೧೬–೧೭). ತರುವಾಯ ದುರ್ಮುಖಿ ಎಂಬ ಹೆಸರಿನವಳು "ಎಲೌ ಚೆಲುವೆ ! ರಾಜಾಧಿರಾಜನಾದ ರಾವಣನಿಗೆ ಹೆಂಡತಿಯಾಗು. ಅವನಿಗೆ ಭೀತಿಗೊಂಡು ಸೂರ್ಯನೂ ಕೂಡ ಉಗ್ರವಾಗಿ ಉರಿಯುವುದಿಲ್ಲ. ಗಾಳಿ ಕೂಡ ಬಿರುಸಾಗಿ ಬೀಸುವುದಿಲ್ಲ. ಅವನ ಭಯಕ್ಕಾಗಿ ವೃಕ್ಷಗಳೂ ಪುಷ್ಪವೃಷ್ಟಿಯನ್ನು ಸುರಿಸುತ್ತವೆ (೧೮–೧೯). ಅವನಿಗೆ ಇಷ್ಟಬಂದಾಗ ಬೆಟ್ಟಗಳಿಂದ ನದಿಗಳು ಹರಿಯುತ್ತವೆ; ಮೋಡದಿಂದ

* ಮರೀಚಿ, ಅತ್ರಿ, ಅಂಗಿರಸ್, ಪುಲಸ್ತ್ಯ, ಪುಲಹ, ಕ್ರತು—ಇವರು ಆರು ಮಂದಿ ಪ್ರಜಾಪತಿಗಳು.

† ದೇವತೆಗಳು ಒಟ್ಟು ಮೂವತ್ತುಮೂರು ಎಂದೂ ಮೂವತ್ತುಮೂರು ಕೋಟಿ ಎಂದೂ ವರ್ಣನೆ ಇದೆ.

ಮಳೆ ಸುರಿಯುತ್ತದೆ. ರಾಜಾಧಿರಾಜನಾದ ರಾಕ್ಷಸೇಂದ್ರನಿಗೆ ಭಾರ್ಯೆಯಾಗಲು ಏಕೆ ಹಿಂದೆಗೆಯುವೆ? ಸೀತೆ, ನಿನಗೆ ಹೇಳಿರುವುದು ಸತ್ಯವಾದ ಮಾತು; ಸರಿಯಾದ ಮಾತು. ರಾವಣನಿಗೆ ಮಡದಿಯಾಗು. ಇಲ್ಲದಿದ್ದರೆ ನೀನು ಜೀವಸಹಿತ ಉಳಿಯುವುದಿಲ್ಲ" ಎಂದು ಗಜರಿದಳು (೨೦–೨೧).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಇಪ್ಪತ್ತಮೂರನೆಯ ಸರ್ಗ

---

## ಸರ್ಗ ೨೪

ರಾಕ್ಷಸಿಯರು ಪುನಃ ಸೀತೆಯನ್ನು ನಿರ್ಬಂಧಪಡಿಸುವುದು.

ಆ ರಾಕ್ಷಸಿಯರು ಒಟ್ಟುಗೂಡಿ ಪುನಃ ಹೀಗೆಂದರು: "ಎಲೌ ಸೀತೆ, ಉತ್ತಮಶಯನಗಳಿಂದ ಸಜ್ಜುಗೊಳಿಸಿದ ಮನೋಹರವಾದ ಅಂತಃಪುರದಲ್ಲಿ ವಾಸಮಾಡಲು ನೀನು ಏಕೆ ಸಮ್ಮತಿಸುವುದಿಲ್ಲ? (೧–೨). ನೀನು ಮಾನುಷಿಯಾದ್ದರಿಂದ ಮನುಷ್ಯನ ಮಡದಿಯಾಗಿರಬೇಕೆಂದು ಅಪೇಕ್ಷಿಸುವೆಯಾ? ರಾಮನಲ್ಲಿ ಮನಸ್ಸನ್ನು ತ್ಯಜಿಸು ಇಲ್ಲದಿದ್ದರೆ, ನೀನು ಎಂದಿಗೂ ಉಳಿಯುವುದಿಲ್ಲ. ಮೂರುಲೋಕದ ಐಶ್ವರ್ಯವನ್ನು ಭೋಗಿಸತಕ್ಕವನು ನಮ್ಮ ರಾವಣೇಶ್ವರ. ಅವನನ್ನು ವರಿಸಿ ಆನಂದದಿಂದ ವಿಹರಿಸು (೩–೪). ಹೇ ಶೋಭನಾಂಗಿ! ನೀನು ಮನುಷ್ಯಳಾದ ಮಾತ್ರಕ್ಕೆ, ರಾಜ್ಯಭ್ರಷ್ಟನೂ ಕಾರ್ಯಸಿದ್ಧಿಯನ್ನು ಪಡೆಯದೆ ದೀನನೂ ಆಗಿರುವ ಒಬ್ಬ ಮನುಷ್ಯನನ್ನು ಇಚ್ಛಿಸುತ್ತೀಯಲ್ಲ!". ಈ ಮಾತನ್ನು ಕೇಳಿ ಪದ್ಮನೇತ್ರೆಯಾದ ಜಾನಕಿಯು ಕಣ್ಣಲ್ಲಿ ನೀರುತುಂಬಿಕೊಂಡು "ನೀವೆಲ್ಲರೂ ಸೇರಿ ಲೋಕನಿಂದಿತವಾದ ಇಂತಹ ಮಾತನ್ನು ಹೇಳುವಿರಲ್ಲ; ನಿಮ್ಮ ಈ ಕೆಟ್ಟ ಮಾತು ನನಗೆ ಸ್ವಲ್ಪವೂ ಹಿಡಿಸುವುದಿಲ್ಲ (೫–೭). ಮನುಷ್ಯಳು ಎಂದಿಗೂ ರಾಕ್ಷಸನಿಗೆ ಭಾರ್ಯೆಯಾಗಲಾರಳು. ಬೇಕಾದರೆ ನನ್ನನ್ನು ತಿಂದುಬಿಡಿರಿ; ಎಂದಿಗೂ ನಾನು ನಿಮ್ಮ ಮಾತನ್ನು ನಡೆಸುವವಳಲ್ಲ. ನನ್ನ ಪತಿಯು ದೀನನಾಗಿರಲಿ, ರಾಜ್ಯಹೀನನಾಗಿರಲಿ–ಅವನೇ ನನಗೆ ಪೂಜ್ಯನು. ಸುವರ್ಚಲೆಯು ಸೂರ್ಯನನ್ನೇ

ನಂಬಿರುವಂತೆ, ನಾನು ನನ್ನ ಪತಿಯನ್ನೇ ನಂಬಿ ಅನುರಕ್ತಳಾಗಿದ್ದೇನೆ (೮–೯). ಶಚೀದೇವಿಯು ದೇವೇಂದ್ರನನ್ನೂ ಅರುಂಧತಿಯು ವಸಿಷ್ಠನನ್ನೂ ರೋಹಿಣಿಯು ಚಂದ್ರನನ್ನೂ ಸುಕನ್ಯೆಯು ಚ್ಯವನನನ್ನೂ ಸಾವಿತ್ರಿಯು ಸತ್ಯವಂತನನ್ನೂ ಶ್ರೀಮತಿಯು ಕಪಿಲನನ್ನೂ ಮದಯಂತಿಯು ಸೌದಾಸನನ್ನೂ ಕೇಶಿನಿಯು ಸಗರನನ್ನೂ ಭೀಮಪುತ್ರಿಯಾದ ದಮಯಂತಿಯು ನಳನನ್ನೂ ಅನುವರ್ತಿಸಿದಂತೆ, ನಾನು ಇಕ್ಷ್ವಾಕುನಾಥನಾದ ಶ್ರೀರಾಮನನ್ನೇ ಅನುವರ್ತಿಸಿ ನಡೆಯತಕ್ಕವಳು" ಎಂದಳು (೧೦–೧೨). ಆಗ ರಾಕ್ಷಸಿಯರು ಕ್ರುದ್ಧರಾಗಿ ರಾವಣನ ಆಜ್ಞೆಯಂತೆ ಪರುಷವಾಕ್ಯಗಳಿಂದ ಸೀತೆಯನ್ನು ಗದರಿಸಲಾರಂಭಿಸಿದರು. ಇತ್ತ ಶಿಂಶಪಾ ವೃಕ್ಷದಲ್ಲಿ ಸದ್ದಿಲ್ಲದೆ ಕುಳಿತಿದ್ದ ಹನುಮಂತನು ಇದೆಲ್ಲವನ್ನೂ ಕೇಳುತ್ತಿದ್ದನು (೧೩–೧೪). ಆಗ ರಾಕ್ಷಸಿಯರು ಮಹಾಕ್ರೋಧದಿಂದ ತಮ್ಮ ಜೋಲುದುಟಿಗಳನ್ನು ನಾಲಗೆಯಿಂದ ಸವರುತ್ತ ಕೊಡಲಿಗಳನ್ನು ಎತ್ತಿ ಹಿಡಿದುಕೊಂಡು "ಇವಳು ರಾಕ್ಷಸೇಶ್ವರನಾದ ರಾವಣನನ್ನು ಮದುವೆಯಾಗಲು ಅರ್ಹಳೇ ಅಲ್ಲ!" ಎಂದು ಕೂಗಾಡಿದರು (೧೬–೧೭). ಆಗ ಸೀತೆಯು ಕಣ್ಣೀರನ್ನು ಒರೆಸಿಕೊಳ್ಳುತ್ತ ಹನುಮಂತನು ಕುಳಿತಿದ್ದ ಶಿಂಶಪಾ ವೃಕ್ಷದ ಬಳಿಗೆ ಬಂದು ಅಳುತ್ತ ನಿಂತಳು. ರಾಕ್ಷಸಿಯರೂ ಅವಳನ್ನು ಸುತ್ತುಗಟ್ಟಿ ಬಂದು ಗದರಿಸುತ್ತಲೇ ಇದ್ದರು (೧೮–೧೯). ಅನಂತರ ವಿನತೆ ಎಂಬ ಘೋರರೂಪಿಯಾದ ಜೋಲುಹೊಟ್ಟೆಯ ಕರಾಳ ರಾಕ್ಷಸಿಯು "ಸೀತೆ, ಇನ್ನು ಸಾಕು. ಗಂಡನಮೇಲಿರುವ ಪ್ರೇಮವನ್ನು ತೋರಿಸಿದ್ದಾಯಿತು. ಯಾವುದೂ ಅತಿಯಾದರೆ ದುಃಖಕ್ಕೆ ಕಾರಣ. ಮನುಷ್ಯಜಾತಿಗೆ ಸಹಜವಾದ ಧರ್ಮಶ್ರದ್ಧೆಯನ್ನು ತೋರಿಸಿದ್ದೀಯೆ. ಸಂತೋಷವಾಯಿತು (೨೦–೨೨). ಈಗ ನಿನಗೆ ಪಥ್ಯವಾದ ಮಾತನ್ನು ಹೇಳುತ್ತೇನೆ, ಕೇಳು: ರಾವಣನು ಸಮಸ್ತರಾಕ್ಷಸರಿಗೂ ಅಧಿಪತಿ; ಪರಾಕ್ರಮಿ; ದೇವೇಂದ್ರನಂತೆ ರೂಪಶಾಲಿ; ದಾಕ್ಷಿಣ್ಯಸ್ವಭಾವದವನೂ ಉದಾರಿಯೂ ಆಗಿದ್ದಾನೆ. ದರಿದ್ರನೂ ಒಬ್ಬ ಮನುಷ್ಯಮಾತ್ರನೂ ಆದ ರಾಮನನ್ನು ಬಿಟ್ಟು ಇವನನ್ನು ಸೇವಿಸು (೨೩–೨೪). ದಿವ್ಯವಾದ ಅನುಲೇಪನವನ್ನೂ ಆಭರಣಗಳನ್ನೂ ಧರಿಸಿ ಈ ದಿನದಿಂದಲೇ ಸಮಸ್ತ ಲೋಕಕ್ಕೂ ಅಧೀಶ್ವರಿಯಾಗು. ಅಗ್ನಿಗೆ ಸ್ವಾಹಾದೇವಿಯಂತೆಯೂ ಇಂದ್ರನಿಗೆ ಶಚೀದೇವಿಯಂತೆಯೂ ರಾವಣನಿಗೆ ಹೆಂಡತಿಯಾಗಿ ವಿರಾಜಿಸು

(೨೫–೨೬). ಸೀತೆ, ಕ್ಷುದ್ರನೂ ಅಲ್ಪಜೀವಿಯೂ ಆದ ರಾಮನಿಂದ ನಿನಗೇನಾಗಬೇಕಾಗಿದೆ ? ನನ್ನ ಮಾತನ್ನು ನೀನು ಕೇಳದಿದ್ದರೆ ನಾವೆಲ್ಲರೂ ಸೇರಿ ಈ ಕ್ಷಣದಲ್ಲಿ ನಿನ್ನನ್ನು ಭಕ್ಷಿಸಿಬಿಡುತ್ತೇವೆ" ಎಂದು ಹೇಳಿದಳು (೨೭–೨೮). ಆಮೇಲೆ ವಿಕಟೆ ಎಂಬ ಜೋಲುಮೊಲೆಯ ರಾಕ್ಷಸಿಯೊಬ್ಬಳು ಮುಷ್ಟಿಯನ್ನೆತ್ತಿ ಗರ್ಜಿಸುತ್ತ ನುಡಿದಳು : "ಎಲೈ ದುರ್ಬುದ್ಧಿಯವಳೆ, ನಿನ್ನ ಮೇಲಿನ ಮರುಕದಿಂದಲೂ ನಾವು ಮೃದುಸ್ವಭಾವದವರಾದ್ದರಿಂದಲೂ ನೀನಾಡಿದ ಕೆಟ್ಟಮಾತುಗಳನ್ನು ಕೇಳಿ ಸಹಿಸಿಕೊಂಡಿದ್ದೇವೆ. ನೀನು ಮಾತ್ರ ಕಾಲೋಚಿತವಾದ ನಮ್ಮ ಹಿತೋಪದೇಶವನ್ನು ಕೇಳುತ್ತಿಲ್ಲ (೨೯–೩೦). ಇನ್ನೊಬ್ಬರಿಗೆ ಬರಲು ಅಸಾಧ್ಯವಾದ ಸಮುದ್ರದ ಆಚೆಯ ದಡಕ್ಕೆ ನಿನ್ನನ್ನು ತಂದಿದ್ದೇವೆ. ಈಗ ನೀನು ರಾವಣನ ಅಂತಃಪುರದಲ್ಲಿದ್ದೀಯೆ ಎಂಬುದು ನೆನಪಿರಲಿ. ರಾವಣನ ಗೃಹದಲ್ಲಿ ಬಂಧಿತಳಾಗಿ, ನಾವು ಕಾವಲಿರುವಾಗ ಸಾಕ್ಷಾತ್ ದೇವೇಂದ್ರನಿಗೂ ನಿನ್ನನ್ನು ಬಿಡಿಸಲು ಶಕ್ಯವಿಲ್ಲ (೩೧–೩೨). ಸೀತೆ, ನಿನ್ನ ಹಿತಕ್ಕಾಗಿ ಈ ಮಾತನ್ನು ಹೇಳುತ್ತಿದ್ದೇನೆ. ಕಣ್ಣೀರು ಸುರಿಸಬೇಡ. ಈ ಶೋಕ ವ್ಯರ್ಥ; ಬಿಟ್ಟುಬಿಡು. ಸದಾ ಕೊರಗುವುದರಿಂದ ಏನಾದೀತು ? ರಾವಣನೊಡನೆ ಯಥೇಚ್ಛವಾಗಿ ಕ್ರೀಡಿಸು. ಆನಂದದಿಂದ ನಲಿಯುತ್ತಿರು (೩೩–೩೪). ಸ್ತ್ರೀಯರಿಗೆ ಯೌವನವು ಸದಾ ಇರುವುದಿಲ್ಲವೆಂದು ನಿನಗೆ ಗೊತ್ತಿದೆಯಲ್ಲವೆ ? ಈ ಯೌವನವು ಕಳೆದುಹೋಗುವವರೆಗಾದರೂ ಸುಖಪಡು. ಹೇ ಸುಂದರಿ ! ರಾಕ್ಷಸರಾಜನೊಡನೆ ವಿವಿಧ ಉದ್ಯಾನವನಗಳಲ್ಲಿ ಸಂಚರಿಸುತ್ತ ಆನಂದಿಸು (೩೫–೩೬). ಸಮಸ್ತ ರಾಕ್ಷಸರಿಗೂ ಅವನು ಅಧಿಪತಿ. ಅವನನ್ನು ಸೇವಿಸಿದರೆ ಅಂತಃಪುರದಲ್ಲಿರುವ ಏಳುಸಾವಿರ ಸ್ತ್ರೀಯರಿಗೆ ನೀನು ಅಧೀಶ್ವರಿಯಾಗುವೆ. ನನ್ನ ಮಾತನ್ನೇನಾದರೂ ನೀನು ನಡೆಸದಿದ್ದರೆ ನಿನ್ನ ಎದೆಯನ್ನು ಸೀಳಿ ತಿಂದುಬಿಡುತ್ತೇನೆ" (೩೭–೩೮). ಆಮೇಲೆ ಚಂಡೋದರಿ ಎಂಬ ರಾಕ್ಷಸಿಯು ಕೋಪದಿಂದ ಒಂದು ದೊಡ್ಡ ಶೂಲವನ್ನು ತಿರುಗಿಸುತ್ತ "ರಾವಣನು ಈಕೆಯನ್ನು ತಂದಾಗ ಜಿಂಕೆಯ ಕಣ್ಣುಗಳಂತಿದ್ದ ಇವಳ ಕಣ್ಣುಗಳನ್ನೂ ಭಯದಿಂದ ನಡುಗುವ ಸ್ತನಗಳನ್ನೂ ಕಂಡಾಗಲೇ ಇವಳನ್ನು ತಿಂದುಬಿಡಬೇಕೆಂದು ನನಗೆ ಆಸೆಯಾಯಿತು ! ಇವಳ ಯಕೃತ್ತು, ಪ್ಲೀಹ, ಎದೆಯ ಮಾಂಸ, ಕರುಳು ಮತ್ತು ತಲೆಯನ್ನು ಕಿತ್ತುಕಿತ್ತು ತಿನ್ನಬೇಕೆಂದು ನನ್ನ ಅಭಿಲಾಷೆ" ಎಂದು ಆರ್ಭಟಿಸಿದಳು (೩೯–೪೧). ಅನಂತರ ಪ್ರಘಸೆ ಎಂಬ

ರಾಕ್ಷಸಿಯು "ಎಲೈ ರಾಕ್ಷಸಿಯರೆ, ಏಕೆ ಸುಮ್ಮನೆ ಇದ್ದೀರಿ? ಈ ಪಾಪಿಷ್ಠಳ ಕುತ್ತಿಗೆಯನ್ನು ಹಿಚಿಕಿಬಿಡೋಣ! ಆಮೇಲೆ ನಮ್ಮ ರಾಜನಿಗೆ 'ಆ ಮನುಷ್ಯ ಸ್ತ್ರೀಯು ಸತ್ತುಹೋದಳು' ಎಂದು ಹೇಳಿಬಿಡೋಣ. ಆಗ 'ಅವಳನ್ನು ಭಕ್ಷಿಸಿರಿ' ಎಂದು ಅವನು ಹೇಳಿಯೇ ಹೇಳುತ್ತಾನೆ. ಸಂದೇಹವೇನು?" ಎಂದಳು (೪೨–೪೩). ತರುವಾಯ ಅಜಾಮುಖಿ ಎಂಬುವಳು "ಇವಳನ್ನು ಕೊಯ್ದು ಮುದ್ದೆಗಳನ್ನು ಮಾಡಿ ಹಂಚಿಕೊಂಡುಬಿಡೋಣ. ವಿವಾದ ನನಗೆ ಹಿಡಿಸದು. ಮದ್ಯವನ್ನೂ ವಿವಿಧವಾದ ಉಪ್ಪಿನಕಾಯಿ ಗೊಜ್ಜುಗಳನ್ನೂ ತನ್ನಿರಿ!" ಎಂದು ಗಜರಿದಳು (೪೪–೪೫). ಆಮೇಲೆ ಶೂರ್ಪಣಖೆ ಎಂಬ ರಾಕ್ಷಸಿಯು "ಈ ಅಜಾಮುಖಿಯು ಹೇಳಿದ್ದೇ ಸರಿ. ಸಮಸ್ತಶೋಕವನ್ನೂ ಪರಿಹಾರ ಮಾಡ ತಕ್ಕ ಮದ್ಯವನ್ನು ತನ್ನಿರಿ. ಮನುಷ್ಯಮಾಂಸವನ್ನು ತಿಂದು, ನಿಕುಂಭಿಳೆಯ * ಸಮೀಪಕ್ಕೆ ಹೋಗಿ ನರ್ತಿಸೋಣ" ಎಂದಳು. ಹೀಗೆ ಆ ಘೋರರಾಕ್ಷಸಿಯರು ಹೆದರಿಸಲಾಗಿ, ದೇವಕನ್ಯೆಯಂತಿದ್ದ ಸೀತೆಯು ಧೈರ್ಯಗೆಟ್ಟು ಅಳತೊಡಗಿದಳು (೪೬–೪೮).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಇಪ್ಪತ್ತುನಾಲ್ಕನೆಯ ಸರ್ಗ

---

## ಸರ್ಗ ೨೫

### ಸೀತೆಯು ನಿರಾಸೆಯಿಂದ ರೋದಿಸುವುದು.

ಕ್ರೂರಸ್ವಭಾವದ ಆ ರಾಕ್ಷಸಿಯರು ಹೀಗೆ ಕಠೋರವಾದ ಮಾತುಗಳನ್ನಾಡುತ್ತಿರಲು, ಅವನ್ನು ಕೇಳಿ ಜಾನಕಿಯು ಅಳುತ್ತಿದ್ದಳು. ಕಣ್ಣೀರು ಸುರಿಸುತ್ತ ಗದ್ಗದಸ್ವರದಿಂದ "ಮನುಷ್ಯಸ್ತ್ರೀಯು ಎಂದಿಗೂ ರಾಕ್ಷಸನಿಗೆ ಭಾರ್ಯೆಯಾಗಲಾರಳು. ಬೇಕಾದರೆ ನನ್ನನ್ನು ತಿಂದುಹಾಕಿರಿ. ನಿಮ್ಮ ಮಾತನ್ನು ನಾನು ನಡೆಸುವುದಿಲ್ಲ" ಎಂದು ದೃಢಮನಸ್ಸಿನಿಂದ ಉತ್ತರ ಕೊಟ್ಟಳು (೧–೩). ರಾಕ್ಷಸಿಯರ ಮಧ್ಯದಲ್ಲಿ ಸಿಕ್ಕಿ ರಾವಣನಿಂದ ಹೆದರಿಸಲ್ಪಡುತ್ತಿದ್ದ ಆ ದೇವಿಯ ಮನಸ್ಸಿಗೆ

---

* ನಿಕುಂಭಿಳೆಯೆಂದರೆ ಲಂಕೆಯ ಪಶ್ಚಿಮದಿಕ್ಕಿನಲ್ಲಿದ್ದ ಭದ್ರಕಾಳಿ.

ನೆಮ್ಮದಿಯೇ ಇರಲಿಲ್ಲ. ಕಾಡಿನಲ್ಲಿ ಹಿಂಡಿನಿಂದ ತಪ್ಪಿ ಬಂದು ತೋಳಗಳಿಗೆ ಸಿಕ್ಕಿಬಿದ್ದ ಹೆಣ್ಣುಜಿಂಕೆಯಂತೆ ಭಯದಿಂದ ನಡುಗುತ್ತ, ತನ್ನ ದೇಹದಲ್ಲಿಯೇ ಹುದುಗಿಕೊಳ್ಳುವಂತೆ ಇದ್ದಳು (೪–೫). ಅವಳು ಅಶೋಕವೃಕ್ಷದ ಹೂಗಳಿರುವ ಒಂದು ಕೊಂಬೆಗೆ ಒರಗಿಕೊಂಡು ನಿರಾಸೆಯಿಂದ ಶೋಕಿಸುತ್ತ ಶ್ರೀರಾಮನನ್ನೇ ಧ್ಯಾನಿಸುತ್ತಿದ್ದಳು. ಕಣ್ಣೀರಿನಿಂದ ತನ್ನ ಸ್ತನಗಳನ್ನು ತೋಯಿಸುತ್ತ, ಎಷ್ಟೆಷ್ಟು ಚಿಂತಿಸಿದರೂ ದುಃಖವು ಬಗೆಹರಿಯುವ ರೀತಿಯನ್ನೇ ಕಾಣದಾದಳು (೬–೭). ಬಿರುಗಾಳಿಗೆ ಸಿಕ್ಕಿದ ಬಾಳೆಯಗಿಡದಂತೆ ರಾಕ್ಷಸಿಯರ ಭಯದಿಂದ ವಿಷಣ್ಣಮುಖಿಯಾಗಿ ನಡುಗುತ್ತಿದ್ದಳು. ಆಗ ನೀಳವಾಗಿಯೂ ವಿಪುಲವಾಗಿಯೂ ಬೆಳೆದಿದ್ದ ಅವಳ ಕೇಶಪಾಶವು ಕಾಳಸರ್ಪದಂತೆ ಚಲಿಸುತ್ತಿದ್ದಿತು (೮–೯). ಅತ್ಯಂತ ಶೋಕದಿಂದ ನಿಟ್ಟುಸಿರುಬಿಡುತ್ತ, ಕಣ್ಣೀರು ಸುರಿಸುತ್ತ ಹಲುಬತೊಡಗಿದಳು. "ಹಾ ರಾಮ! ಹಾ ಲಕ್ಷ್ಮಣ! ಅಮ್ಮ–ಕೌಸಲ್ಯೇ! ಹಾ ಸುಮಿತ್ರೇ! (೧೦–೧೧). 'ಹೆಂಗಸಾಗಲಿ, ಗಂಡಸಾಗಲಿ ಕಾಲವು ಒದಗಿಬಂದ ಹೊರತು ಸಾಯುವುದಿಲ್ಲ' ಎಂಬ ಲೋಕಪ್ರಸಿದ್ಧವಾದ, ಹಿರಿಯರ ಹೇಳಿಕೆ ಸತ್ಯವಾದದ್ದು. ಏಕೆಂದರೆ, ಈ ಘೋರರಾಕ್ಷಸಿಯರು ಹಿಂಸೆಪಡಿಸುತ್ತಿದ್ದರೂ ಶ್ರೀರಾಮನನ್ನಗಲಿಯೂ ನಾನು ಇಷ್ಟುಕಾಲ ಬದುಕಿರುವೆನಲ್ಲ! (೧೨–೧೩). ಸಮುದ್ರಮಧ್ಯದಲ್ಲಿ ಬಿರುಗಾಳಿಗೆ ಸಿಕ್ಕಿದ ಹಡಗಿನಂತೆ, ಮಂದಭಾಗ್ಯದಿಂದ ನಾನು ದೀನಳಾಗಿ ಅನಾಥಳಂತೆ ಸದ್ಯದಲ್ಲಿಯೇ ನಾಶವಾಗಿಹೋಗುವೆನು. ಈ ರಾಕ್ಷಸಿಯರ ಮಧ್ಯದಲ್ಲಿ ಸಿಕ್ಕಿಬಿದ್ದು, ನನ್ನ ಪತಿಯನ್ನು ಕಾಣದೆ, ಪ್ರವಾಹವೇಗಕ್ಕೆ ಸಿಕ್ಕಿದ ದಡದಂತೆ ಕುಸಿದುಹೋಗುತ್ತಿದ್ದೇನೆ (೧೪–೧೫). ಪದ್ಮದಳದಂತೆ ಕಣ್ಣುಗಳಿರುವ, ಸಿಂಹದಂತೆ ಧೀರವಾಗಿ ನಡೆಯುವ ನನ್ನ ಪ್ರಾಣನಾಥನನ್ನು ನೋಡತಕ್ಕವರೇ ಪುಣ್ಯಾತ್ಮರು. ಮಹಾತ್ಮನಾದ ಶ್ರೀರಾಮನನ್ನು ಅಗಲಿದಮೇಲೆ ಸರ್ವಥಾ ನಾನು ಜೀವಿಸಿರುವುದಿಲ್ಲ. ಘೋರವಿಷವನ್ನು ಕುಡಿದವರು ಜೀವಿಸುವುದುಂಟೆ? (೧೬–೧೭). ಜನ್ಮಾಂತರದಲ್ಲಿ ನಾನು ಎಂತಹ ಪಾಪಕೃತ್ಯವನ್ನು ಮಾಡಿದೆನೊ? ಈ ಜನ್ಮದಲ್ಲಿ ಇಂತಹ ದಾರುಣವಾದ ಯಾತನೆಯನ್ನು ಅನುಭವಿಸುತ್ತಿದ್ದೇನೆ. ರಾಕ್ಷಸಿಯರು ಈ ಪ್ರಕಾರದಲ್ಲಿ ಕಾವಲಿರುವಾಗ, ಶ್ರೀರಾಮನ ದರ್ಶನವು ನನಗೆ ಆಗುವುದಿಲ್ಲ. ಆದ್ದರಿಂದ ನಾನು ಪ್ರಾಣವನ್ನು ತ್ಯಜಿಸಿಬಿಡುತ್ತೇನೆ (೧೮–೧೯). ಆದರೆ ಇವರು ಕಣ್ಣಿಟ್ಟು ಕಾದಿರುವುದರಿಂದ ಇಷ್ಟಬಂದಂತೆ ಪ್ರಾಣವನ್ನು

ಬಿಡಲೂ ಸಾಧ್ಯವಿಲ್ಲ. ಅಯ್ಯೊ, ಈ ಮನುಷ್ಯಜನ್ಮಕ್ಕೆ ಧಿಕ್ಕಾರ! ಈ ಪರಾಧೀನತೆಗೆ ಧಿಕ್ಕಾರ!" ಎಂದು ಗೋಳಾಡಿದಳು (೨೦).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಇಪ್ಪತ್ತೈದನೆಯ ಸರ್ಗ

---

## ಸರ್ಗ ೨೬

ಸೀತೆಯು ದುಃಖಿಸುತ್ತ, ಶ್ರೀರಾಮನು ತನ್ನನ್ನು ಬಿಡಿಸಿಕೊಂಡುಹೋಗದಿರಲು ಕಾರಣಗಳೇನಿರಬಹುದೆಂದು ಬಹುವಿಧವಾಗಿ ಚಿಂತಿಸುವುದು.

ಜಾನಕಿಯು ಕಣ್ಣೀರು ತುಂಬಿಕೊಂಡು ಹೀಗೆ ಹೇಳಿಕೊಳ್ಳುತ್ತ ಭೂತಾವಿಷ್ಟಳಂತೆಯೂ, ಬುದ್ಧಿ ಸ್ವಾಧೀನವಿಲ್ಲದವಳಂತೆಯೂ, ಹುಚ್ಚಳಂತೆಯೂ, ಆಯಾಸಗೊಂಡ ಹೆಣ್ಣು ಗುದುರೆಯಂತೆಯೂ ನೆಲದಮೇಲೆ ಹೊರಳಾಡತೊಡಗಿದಳು. ಈ ರೀತಿಯಲ್ಲಿ ವಿಲಪಿಸಿದಳು (೧–೨): "ಶ್ರೀರಾಮನು ಪ್ರಮಾದವಶದಿಂದ ಅಗಲಿದಾಗ, ಕಾಮರೂಪಿಯಾದ ರಾವಣನು ಬಲಾತ್ಕಾರದಿಂದ ನನ್ನನ್ನು ತಂದುಬಿಟ್ಟಿರುವನು. ರಾಕ್ಷಸಿಯರ ಮಧ್ಯದಲ್ಲಿ ಸಿಕ್ಕಿ ಈ ಪ್ರಕಾರ ಕ್ರೂರಹಿಂಸೆಗೆ ಒಳಗಾದಮೇಲೆ ಎಂದಿಗೂ ನಾನು ಬದುಕಿರಲು ಇಚ್ಛಿಸುವುದಿಲ್ಲ (೩–೪). ಶ್ರೀರಾಮನನ್ನು ಅಗಲಿದಮೇಲೆ ಪ್ರಾಣದಿಂದ ನನಗೆ ಆಗಬೇಕಾದ್ದೇನು? ಧನದಿಂದೇನು? ಒಡವೆಗಳಿಂದೇನು? ಅಯ್ಯೋ, ನನ್ನ ಎದೆಯು ಕಲ್ಲಾಗಿರಬೇಕು. ಯಾವುದಕ್ಕೂ ಜಗ್ಗದೆ ಮರಣರಹಿತವಾಗಿರಬೇಕು. ಇಂತಹ ದುಃಖದಲ್ಲಿಯೂ ಇದು ಒಡೆದುಹೋಗುವುದಿಲ್ಲವಲ್ಲ (೫–೬). ಶ್ರೀರಾಮನನ್ನಗಲಿಯೂ ಬದುಕಿರುವ ನಾನು ಪಾಪಿಷ್ಠಳು; ಅಯೋಗ್ಯಳು; ಕೆಟ್ಟವಳು. ನನಗೆ ಧಿಕ್ಕಾರ! ಲೋಕನಾಥನೂ ಪ್ರಿಯಂವದನೂ ಆದ ನನ್ನ ಪ್ರಿಯನಿಲ್ಲದಮೇಲೆ ಸುಖದಲ್ಲಿ ಆಸೆ ಏಕೆ? ಪ್ರಾಣದಲ್ಲಿ ಆಸೆ ಏಕೆ? (೭–೮). ನನ್ನನ್ನು ಕತ್ತರಿಸಿ ಹಾಕಲಿ, ತಿಂದು ಹಾಕಲಿ; ನನಗೆ ಈ ದೇಹ ಬೇಡವಾಗಿದೆ. ಈ ದುಃಖವನ್ನು ಸಹಿಸಲಾರೆ. ಆ ರಾಕ್ಷಸ ರಾವಣನನ್ನು ಎಡಗಾಲಿನಿಂದಲೂ ನಾನು ಮುಟ್ಟಲಾರೆ. ಇನ್ನು ಆ ಪಾಪಿಯನ್ನು ಪ್ರೀತಿಸುವೆನೆ? (೯–೧೦). ಆ ಕ್ರೂರನು ನನ್ನನ್ನು ಬಯಸುವನೇ ಹೊರತು ನನ್ನ ಧಿಕ್ಕಾರದ ಮಾತನ್ನು ಅರ್ಥಮಾಡಿಕೊಳ್ಳುವುದೇ ಇಲ್ಲ.

ತನ್ನ ಯೋಗ್ಯತೆಯ ಜ್ಞಾನವಿಲ್ಲ, ತನ್ನ ಕುಲದ ಜ್ಞಾನವಿಲ್ಲ. ಎಲೈ ರಾಕ್ಷಸಿಯರೆ, ನನ್ನನ್ನು ಕತ್ತರಿಸಿ ಹಾಕಿರಿ, ಸೀಳಿ ಹಾಕಿರಿ, ಕೊಚ್ಚಿ ಕೊಚ್ಚಿ ಚೂರು ಮಾಡಿರಿ, ಕೊನೆಗೆ ಬೆಂಕಿಯಲ್ಲಾದರೂ ಎಸೆಯಿರಿ, ನಾನು ರಾವಣನನ್ನು ಸೇರತಕ್ಕವಳಲ್ಲ. ನೀವು ಎಷ್ಟು ಹೊತ್ತು ಬೊಗಳಿದರೂ ಪ್ರಯೋಜನವಿಲ್ಲ (೧೧–೧೨). ರಾಘವನು ಪ್ರಖ್ಯಾತನಾದವನು, ಪ್ರಾಜ್ಞ, ಕೃತಜ್ಞ, ಕರುಣಾಮಯ, ಸತ್ಪುರುಷ. ನನ್ನ ದುರ್ಭಾಗ್ಯದಿಂದ ಅವನೂ ನಿಷ್ಕರುಣನಾಗಿಬಿಟ್ಟನೆ? ಜನಸ್ಥಾನದಲ್ಲಿ ಹದಿನಾಲ್ಕು ಸಾವಿರ ರಾಕ್ಷಸರನ್ನೂ ಏಕಾಕಿಯಾಗಿ ಧ್ವಂಸಮಾಡಿದವನು ನನ್ನನ್ನು ಬಿಡಿಸಲು ಏಕೆ ಬರದೆ ಇರಬಹುದು? (೧೩–೧೪). ಈ ಅಲ್ಪಶಕ್ತಿಯ ರಾಕ್ಷಸನು ನನ್ನನ್ನು ಬಂಧಿಸಿದ್ದಾನೆ. ಇವನನ್ನು ಸಂಹಾರಮಾಡಲು ನನ್ನ ಗಂಡನು ನಿಶ್ಚಯವಾಗಿಯೂ ಸಮರ್ಥ. ದಂಡಕಾರಣ್ಯದಲ್ಲಿ ರಾಕ್ಷಸವೀರನಾದ ವಿರಾಧನನ್ನು ಸಂಹರಿಸಿದ ಶ್ರೀರಾಮನು ನನ್ನನ್ನು ಬಿಡಿಸಿಕೊಳ್ಳಲಾರನೆ? (೧೫–೧೬). ಲಂಕೆಯು ಸಮುದ್ರಮಧ್ಯದಲ್ಲಿರುವುದರಿಂದ ದುರ್ಗಮವಾಗಿದೆಯೆಂಬುದೇನೋ ನಿಜ. ಆದರೆ ಶ್ರೀರಾಮನ ಬಾಣಗಳನ್ನು ತಡೆಯತಕ್ಕದ್ದು ಯಾವುದೂ ಇಲ್ಲ. ತನ್ನ ಪ್ರಿಯಪತ್ನಿಯನ್ನು ರಾಕ್ಷಸನು ಅಪಹರಿಸಿದ್ದರೂ ಬಿಡಿಸಿಕೊಳ್ಳುವುದಕ್ಕೆ ಯಾವ ಕಾರಣದಿಂದ ಬರದೆ ಇರಬಹುದು? (೧೭–೧೮). ನಾನು ಲಂಕೆಯಲ್ಲಿರುವುದು ಅವನಿಗೆ ತಿಳಿದೇ ಇಲ್ಲವೆಂದು ತೋರುತ್ತದೆ. ತಿಳಿದಿದ್ದರೆ ಆ ತೇಜಸ್ವಿಯು ರಾವಣನ ಪುಂಡಾಟವನ್ನು ಸಹಿಸಿಕೊಳ್ಳುತ್ತಿದ್ದನೆ? ರಾವಣನು ಅಪಹರಿಸಿದ್ದಾನೆಂದು ರಾಘವನಿಗೆ ಜಟಾಯು ಒಬ್ಬ ತಿಳಿಸಲು ಸಾಧ್ಯವಿತ್ತು. ಆ ಜಟಾಯುವನ್ನು ರಾವಣನು ಕೊಂದುಬಿಟ್ಟಿದ್ದಾನೆ (೧೯–೨೦). ಜಟಾಯು ವೃದ್ಧನಾಗಿದ್ದರೂ ನನ್ನನ್ನು ಉಳಿಸುವುದಕ್ಕಾಗಿ ರಾವಣನೊಡನೆ ದ್ವಂದ್ವಯುದ್ಧಕ್ಕೆ ನಿಂತು ಬಹುದೊಡ್ಡ ಕೆಲಸವನ್ನೇ ಮಾಡಿದನು. ನಾನು ಇಲ್ಲಿರುವುದು ಶ್ರೀರಾಮನಿಗೆ ಗೊತ್ತಾದರೆ, ಅವನು ಕ್ರುದ್ಧನಾಗಿ ಈ ಲೋಕದಲ್ಲಿಯೇ ರಾಕ್ಷಸರಿಲ್ಲದಂತೆ ಮಾಡಿಬಿಡುತ್ತಾನೆ (೨೧–೨೨). ಮಹಾಸಾಗರವನ್ನು ಒಣಗಿಸಿ ಲಂಕಾಪಟ್ಟಣವನ್ನು ಧೂಳೆಬ್ಬಿಸಿಬಿಡುವನು. ರಾವಣನ ಪ್ರಖ್ಯಾತಿಯನ್ನು ಅಳಿಸಿ ಹೆಸರಿಲ್ಲದಂತೆ ಮಾಡಿಬಿಡುವನು. ರಾಕ್ಷಸಿಯರು ಗಂಡಂದಿರನ್ನು ಕಳೆದುಕೊಂಡು ಮನೆ ಮನೆಯಲ್ಲಿಯೂ ನನ್ನಹಾಗೆಯೇ ಅಳಬೇಕಾಗುವುದು. ಇದರಲ್ಲಿ ಸಂದೇಹವೇ ಇಲ್ಲ (೨೩–೨೪). ಶ್ರೀರಾಮನು ಲಕ್ಷ್ಮಣನೊಡನೆ ಈ ಲಂಕೆ

ಯನ್ನು ಹುಡುಕದೆ ಬಿಡುವುದಿಲ್ಲ. ಅವರಿಬ್ಬರ ಕಣ್ಣಿಗೆ ಬಿದ್ದರೆ ಯಾವ ಶತ್ರುವೂ ಒಂದು ನಿಮಿಷವೂ ಬದುಕಲಾರನು. ಸದ್ಯದಲ್ಲಿಯೇ ಇಲ್ಲಿಯ ಬೀದಿಬೀದಿಗಳಲ್ಲಿ ಚಿತಾಧೂಮವು ತುಂಬಿಕೊಂಡು, ಹದ್ದುಗಳು ಗುಂಪುಕಟ್ಟಿ, ಈ ಲಂಕೆಯು ಶ್ಮಶಾನವಾಗಿಬಿಡುತ್ತದೆ (೨೫–೨೬). ಈ ನನ್ನ ಕೋರಿಕೆ ಸ್ವಲ್ಪದಿನದಲ್ಲಿಯೇ ಕೈಗೂಡುತ್ತದೆ. ರಾಕ್ಷಸಿಯರೆ, ನಿಮ್ಮ ದುರಾಚಾರದಿಂದ ನಿಮಗೆ ಅನರ್ಥ ಸಂಭವಿಸುವುದು. ಇಲ್ಲಿ ತೋರುತ್ತಿರುವ ದುಶ್ಶಕುನಗಳನ್ನು ಗಮನಿಸಿದರೆ, ಶೀಘ್ರದಲ್ಲಿಯೇ ಲಂಕೆಯು ಕಾಂತಿಗುಂದಿ ನಾಶವಾಗುವುದೆಂದು ಹೇಳಬಹುದು (೨೭–೨೮). ಅಧಮನಾದ ಈ ಪಾಪಿ ರಾವಣನು ಸತ್ತುಹೋದರೆ, ಗಂಡ ಸತ್ತ ಹೆಂಗಸಿನಂತೆ ಈ ಲಂಕೆಯು ಕ್ಷೀಣವಾಗುವುದು. ಈಗ ಮಂಗಳೋತ್ಸವ ನಡೆಯುತ್ತಿದ್ದರೂ ರಾವಣನು ಸತ್ತಮೇಲೆ, ಕೇವಲ ರಾಕ್ಷಸಸ್ತ್ರೀಯರಿಂದ ತುಂಬಿರುವ ಲಂಕೆ, ಗಂಡನನ್ನು ಕಳೆದುಕೊಂಡ ಹೆಂಗಸಿನಂತೆ ಆಗುವುದು (೨೯–೩೦). ದುಃಖಾರ್ತರಾದ ರಾಕ್ಷಸಸ್ತ್ರೀಯರು ಮನೆಮನೆಯಲ್ಲಿಯೂ ಗೋಳಾಡುವುದನ್ನು ಸದ್ಯದಲ್ಲಿಯೇ ಕೇಳುತ್ತೇನೆ. ರಾವಣನ ಪಟ್ಟಣದಲ್ಲಿ ನಾನು ಇದ್ದೇನೆಂದು ಶೂರನಾದ ರಾಮನಿಗೆ ಗೊತ್ತಾದರೆ ಸಾಕು, ಈ ಲಂಕೆಯು ರಾಮಾಸ್ತ್ರಗಳಿಂದ ಸುಟ್ಟು ಹೋಗುವುದು. ಇಲ್ಲಿ ರಾಕ್ಷಸರೆಲ್ಲರೂ ಸತ್ತು, ಕಳೆಗುಂದಿ, ಕತ್ತಲೆಯು ತುಂಬಿ ಹೋಗುವುದು (೩೧–೩೩). ಕ್ರೂರನೂ ಅಧಮನೂ ಆದ ರಾವಣನು ನನಗೆ ಗೊತ್ತುಮಾಡಿದ ಕಾಲಾವಧಿಯು ಮುಗಿಯುತ್ತಬಂದಿದೆ. ಆಮೇಲೆ ಈ ದುಷ್ಟನು ನನಗೆ ಮರಣವನ್ನು ವಿಧಿಸಿದ್ದಾನೆ. ಈ ರಾಕ್ಷಸರಾದರೋ ಯಾವುದನ್ನು ಮಾಡಬಾರದೆಂದು ತಿಳಿಯದ ಪಾಪಿಗಳು (೩೪–೩೫). ಇವರ ಅಧರ್ಮದಿಂದ ದೊಡ್ಡ ಅನರ್ಥವೇ ಸಂಭವಿಸುವುದು. ಇವರಿಗೆ ಧರ್ಮದ ಜ್ಞಾನವಿಲ್ಲ. ನಿಶ್ಚಯವಾಗಿಯೂ ಈ ರಾವಣನು ಪ್ರಾತಃಕಾಲದಲ್ಲಿ ನನ್ನನ್ನು ಕತ್ತರಿಸಿ ಅಡಿಗೆ ಮಾಡಿಸುವನು. ಸುಂದರಾಕಾರನಾದ ಶ್ರೀರಾಮನನ್ನು ಅಗಲಿ ದುಃಖಿತೆಯಾದ ನಾನು ಈಗ ಏನು ಮಾಡಲಿ? (೩೬–೩೭). ಯಾರಾದರೂ ವಿಷವನ್ನು ತಂದುಕೊಟ್ಟಿದ್ದರೆ, ಯಮಲೋಕವನ್ನುಸೇರಿಕೊಳ್ಳುತ್ತಿದ್ದೆನು. ರಾಮಲಕ್ಷ್ಮಣರಿಗೆ ನಾನು ಇಲ್ಲಿ ಜೀವಿಸಿದ್ದೇನೆಂದು ತಿಳಿದಿರಲಿಕ್ಕಿಲ್ಲ. ತಿಳಿದಿದ್ದರೆ ನನ್ನನ್ನು ಹುಡುಕದೆ ಬಿಡುತ್ತಿರಲಿಲ್ಲ (೩೮–೪೦). ಒಂದುವೇಳೆ ಶ್ರೀರಾಮನು ನನ್ನ ವಿರಹದುಃಖದಿಂದಲೇ ದೇಹವನ್ನು ಬಿಟ್ಟು ಸ್ವರ್ಗವನ್ನು ಸೇರಿದ್ದರೂ ಇರಬಹುದು. ಪದ್ಮನೇತ್ರನಾದ

ನನ್ನ ರಾಮನನ್ನು ಸ್ವರ್ಗದಲ್ಲಿ ನೋಡುತ್ತಿರುವ ದೇವತೆಗಳೂ ಗಂಧರ್ವರೂ ಸಿದ್ಧರೂ ಮಹರ್ಷಿಗಳೂ ಎಷ್ಟು ಪುಣ್ಯಾತ್ಮರು! ಅಥವಾ ರಾಮನು ಧರ್ಮ ಪರಾಯಣನೂ ತತ್ತ್ವಜ್ಞನೂ ಆದ ರಾಜರ್ಷಿಯಾಗಿರುವನು. ಅವನಿಗೆ ಪತ್ನಿ ಯಾದ ನನ್ನಿಂದ ಆಗಬೇಕಾದ್ದೇನು? (೪೧–೪೨). ಯಾವ ವಸ್ತುವನ್ನಾದರೂ ಕಣ್ಣಿಂದ ನೋಡುತ್ತಿದ್ದರೆ ಪ್ರೀತಿಯು ಇರುತ್ತದೆ. ವಸ್ತುವು ಕಣ್ಮರೆಯಾದಮೇಲೆ ಪ್ರೀತಿಯು ತಗ್ಗಿ ಹೋಗುತ್ತದೆ! ಆದರೆ ರಾಮನ ವಿಷಯದಲ್ಲಿ ಹೀಗೆ ಭಾವಿಸು ವುದೂ ಸರಿಯಲ್ಲ. ಕೃತಘ್ನರು ಪ್ರೀತಿಯನ್ನು ಕಳೆದುಕೊಳ್ಳುತ್ತಾರೆ. ರಾಮನು ಮಾತ್ರ ಹಾಗೆ ಮಾಡುವವನಲ್ಲ. ನನ್ನಲ್ಲಿ ಯಾವುದಾದರೂ ತಪ್ಪುಗಳಿರಬಹುದೆ? ಅಥವಾ ನನ್ನ ಭಾಗ್ಯವೇ ಕ್ಷಯಿಸಿಹೋಯಿತೆ? (೪೩–೪೪). ಪರಿಶುದ್ಧವಾದ ನಡತೆಯುಳ್ಳವನೂ ಶೂರನೂ ಆದ ಶ್ರೀರಾಮನನ್ನು ಕಾಣದೆ ಬದುಕಿರುವುದ ಕ್ಕಿಂತ ಸಾಯುವುದೇ ಉತ್ತಮ ಆ ಅಣ್ಣ ತಮ್ಮಂದಿರು ನನ್ನನ್ನು ಕಾಣದೆ ವಿರಕ್ತಿ ಯಿಂದ ಆಯುಧಗಳನ್ನು ಎಸೆದು ಫಲಮೂಲಗಳನ್ನು ತಿನ್ನುತ್ತ ಅರಣ್ಯವಾಸಿ ಗಳಾಗಿ ಉಳಿದುಬಿಟ್ಟರೊ? ಇಲ್ಲವೆ, ಈ ದುರಾತ್ಮನಾದ ರಾವಣನು ಮೋಸದಿಂದ ಅವರನ್ನು ಘಾತಿಸಿರಬಹುದೊ? ಇಂತಹ ಕಾಲದಲ್ಲಿ ಸರ್ವಥಾ ನನಗೆ ಮರಣವೇ ಲೇಸು (೪೫–೪೮). ಈ ಬಗೆಯ ಮಹಾದುಃಖ ಒದಗಿದರೂ ನನಗೆ ಇನ್ನೂ ಸಾವು ಸಂಭವಿಸಲಿಲ್ಲ. ಲೋಕದಲ್ಲಿ ಪ್ರೀತಿ ದ್ವೇಷಗಳೆರಡನ್ನೂ ತ್ಯಜಿಸಿ ಜಿತೇಂದ್ರಿಯರಾಗಿರುವ ಋಷಿಗಳೇ ಧನ್ಯರು. ಅವರಿಗೆ ಪ್ರಿಯವಸ್ತುವನ್ನಗಲಿ ದರೂ ದುಃಖವಿಲ್ಲ, ಅಪ್ರಿಯವಾದದ್ದು ಸಂಭವಿಸಿದರೂ ದುಃಖವಿಲ್ಲ. ಅವರಿಗೆ ಪ್ರಿಯ ಅಪ್ರಿಯಗಳೆಂಬ ವಸ್ತುಗಳೇ ಇಲ್ಲ. ಅಂತಹ ಮಹಾತ್ಮರಿಗೆ ನಮಸ್ಕಾರ! ಆದರೆ ನನಗಾದರೋ ರಾಮನು ಪರಮಪ್ರಿಯನು. ಅವನನ್ನು ಅಗಲಿ ಈ ದುರುಳ ನಾದ ರಾವಣನ ವಶದಲ್ಲಿ ಸಿಕ್ಕಿರುವೆನು. ನಾನು ನಿಶ್ಚಯವಾಗಿಯೂ ಪ್ರಾಣ ವನ್ನು ಬಿಡುವೆನು" ಎಂದು ರೋದಿಸಿದಳು (೪೯–೫೧).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಇಪ್ಪತ್ತಾರನೆಯ ಸರ್ಗ

## ಸರ್ಗ ೨೭

ತ್ರಿಜಟೆಯು ತನ್ನ ಸ್ವಪ್ನವೃತ್ತಾಂತವನ್ನು ರಾಕ್ಷಸಿಯರಿಗೆ ತಿಳಿಸಿ, ಸೀತೆಗೆ ಶುಭವಾಗುತ್ತದೆಯೆಂದು ಹೇಳುವುದು.

ಸೀತಾದೇವಿಯ ಮಾತನ್ನು ಕೇಳಿ ರಾಕ್ಷಸಸ್ತ್ರೀಯರು ಕ್ರುದ್ಧರಾದರು. ಅವಳು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆಂದು ಬಲಾಢ್ಯನಾದ ರಾವಣನಿಗೆ ತಿಳಿಸುವುದಕ್ಕೋಸ್ಕರ ಕೆಲವರು ಅಲ್ಲಿಂದ ಹೊರಟುಹೋದರು. ಉಳಿದ ಘೋರರಾಕ್ಷಸಿಯರು ಅವಳ ಹತ್ತಿರಕ್ಕೆ ಬಂದು ವಿಪತ್ಕಾರಿಯಾದ ಕಠೋರವಾತನ್ನಾಡುತ್ತ "ಅಯೋಗ್ಯೆ! ಸೀತೆ, ಈಗಲೇ ನಿನ್ನನ್ನು ಭಕ್ಷಿಸಿಬಿಡುತ್ತೇವೆ" ಎಂದು ಹೆದರಿಸಿದರು (೧–೩). ಅಷ್ಟರಲ್ಲಿ ಅಲ್ಲಿ ನಿದ್ರಿಸುತ್ತಿದ್ದ ತ್ರಿಜಟೆ ಎಂಬ ವೃದ್ಧರಾಕ್ಷಸಿಗೆ ಎಚ್ಚರವಾಯಿತು. ಅವಳು ಸೀತೆಯನ್ನು ಹೆದರಿಸುತ್ತಿದ್ದ ರಾಕ್ಷಸಿಯರನ್ನು ನೋಡಿ "ಎಲೈ ದುಷ್ಟ ಸ್ತ್ರೀಯರೆ, ನೀವೇ ಒಬ್ಬರನ್ನೊಬ್ಬರು ತಿಂದುಬಿಡಿರಿ! ಜನಕ ಪುತ್ರಿಯೂ ದಶರಥನ ಸೊಸೆಯೂ ಆದ ಸೀತೆಯನ್ನು ನೀವು ತಿನ್ನಲಾರಿರಿ. ಭಯಂಕರವೂ ರೋಮಾಂಚಕಾರಿಯೂ ಆದ ಸ್ವಪ್ನವನ್ನು ನಾನು ಕಂಡೆನು. ಅದು ರಾಕ್ಷಸರ ನಾಶವನ್ನೂ ಈಕೆಯ ಗಂಡನಿಗೆ ವಿಜಯವನ್ನೂ ಸೂಚಿಸುತ್ತದೆ" ಎಂದಳು (೪–೬). ಅದನ್ನು ಕೇಳಿ ರಾಕ್ಷಸಿಯರು ಹೆದರಿಹೋದರು. ಅವರು ತ್ರಿಜಟೆಯನ್ನು ಕುರಿತು "ನೀನು ಕಂಡ ಸ್ವಪ್ನ ಎಂತಹುದು? ಹೇಳು" ಎಂದರು. ಆಗ ತ್ರಿಜಟೆಯು ಸ್ವಪ್ನವೃತ್ತಾಂತವನ್ನು ಹೇಳತೊಡಗಿದಳು: "ರಾಕ್ಷಸಿಯರೆ, ಕೇಳಿರಿ: ಒಂದು ದಿವ್ಯವಾದ ಪಲ್ಲಕ್ಕಿಯು ಅಂತರಿಕ್ಷದಲ್ಲಿ ಬರುತ್ತಿತ್ತು. ಅದು ಆನೆಯ ದಂತದಿಂದ ರಚಿತವಾದದ್ದು. ಒಂದುಸಾವಿರ ಹಂಸಗಳು ಅದನ್ನು ಎಳೆಯುತ್ತಿದ್ದವು. ಆ ಪಲ್ಲಕ್ಕಿಯಲ್ಲಿ ರಾಮನು ಶುಭ್ರವಾದ ಹೂಮಾಲೆಯನ್ನೂ ವಸ್ತ್ರವನ್ನೂ ಧರಿಸಿ ಲಕ್ಷ್ಮಣನೊಡನೆ ಬರುತ್ತಿದ್ದನು (೭–೧೦). ಆಗ ಸೀತೆಯು ಬಿಳಿಯ ದುಕೂಲವನ್ನು ಉಟ್ಟು ಕ್ಷೀರಸಮುದ್ರದಲ್ಲಿ ಶ್ವೇತಪರ್ವತವನ್ನೇರಿ ಕುಳಿತಿದ್ದಳು. ಆಮೇಲೆ ಸೂರ್ಯನೊಡನೆ ಸೇರಿದ ಪ್ರಭೆಯಂತೆ, ಸೀತೆಯು ರಾಮನೊಡನೆ ಸೇರಿಹೋದಳು. ಮತ್ತೆ ರಾಮನು ನಾಲ್ಕು ಹಲ್ಲುಗಳುಳ್ಳ, ಪರ್ವತಾಕಾರವಾದ ಒಂದು ಮಹಾಗಜವನ್ನೇರಿ ಕುಳಿತಂತೆ ಕಂಡೆನು(೧೧–೧೨). ರಾಮಲಕ್ಷ್ಮಣರಿಬ್ಬರೂ ತೇಜಸ್ಸಿನಿಂದ ಬೆಳಗುತ್ತ ಸೀತೆಯು ಕುಳಿತಿದ್ದ ಶ್ವೇತಪರ್ವತದ

ಕಡೆಗೆ ಬಂದರು. ಆನೆಯಮೇಲೆ ರಾಮನು ಕುಳಿತಿರುವುದನ್ನು ಕಂಡು ಸೀತೆಯೂ ಆನೆಯನ್ನು ಹತ್ತಿ ಕುಳಿತಳು. ಅವಳು ತನ್ನ ಪತಿಯ ತೊಡೆಯಿಂದ ಮೇಲಕ್ಕೆದ್ದು ಕೈನೀಡಿ ಸೂರ್ಯಚಂದ್ರರನ್ನು ಸವರುತ್ತಿರುವಹಾಗೆ ಕಂಡೆನು (೧೩–೧೫). ಆ ಮೂವರೂ ಕುಳಿತಿರುವಾಗ ಆನೆಯು ಆಕಾಶಮಾರ್ಗದಲ್ಲಿ ನಡೆಯುತ್ತ ಈ ಲಂಕೆಯಮೇಲೆ ಬಂದಿತು. ಮತ್ತೆ ರಾಮನು ಬಿಳಿಯ ಬಣ್ಣದ ಎಂಟು ವೃಷಭಗಳು ಎಳೆಯುತ್ತಿದ್ದ ಒಂದು ರಥವನ್ನೇರಿದಂತೆ ಕಂಡೆನು. ಅವನೊಡನೆ ಸೀತೆಯೂ ಲಕ್ಷ್ಮಣನೂ ಇದ್ದರು (೧೬–೧೭). ಆಮೇಲೆ ಶ್ರೀರಾಮನು ಸೀತಾ ಲಕ್ಷ್ಮಣರೊಡನೆ ಸೂರ್ಯನಂತೆ ಜ್ವಲಿಸುತ್ತಿದ್ದ ಪುಷ್ಪಕವಿಮಾನವನ್ನೇರಿದನು. ಅವನು ಉತ್ತರದಿಕ್ಕನ್ನು ನೋಡುತ್ತ ಅಯೋಧ್ಯೆಯ ಕಡೆಗೆ ಪ್ರಯಾಣಮಾಡಿದನು* (೧೮–೨೦). ಎಲೈ ರಾಕ್ಷಸಿಯರೆ, ವಿಷ್ಣುವಿನಂತೆ ಪರಾಕ್ರಮಶಾಲಿಯಾದ ರಾಘವನು ಸೀತಾಲಕ್ಷ್ಮಣರಿಂದ ಸಮೇತನಾಗಿರುವುದನ್ನು ನಾನು ಸ್ವಪ್ನದಲ್ಲಿ ಕಂಡೆನು. ಮಹಾತೇಜಸ್ವಿಯಾದ ರಾಮನನ್ನು ಜಯಿಸಲು ದೇವಾಸುರರಿಗಾಗಲಿ ಇತರರಿಗಾಗಲಿ ಸಾಧ್ಯವೇ ಇಲ್ಲ. ಸ್ವರ್ಗವನ್ನು ಜಯಿಸಲು ಪಾಪಿಗಳಿಗೆ ಸಾಧ್ಯವಾದೀತೆ? (೨೧–೨೨). ಅಷ್ಟೇ ಅಲ್ಲ; ರಾವಣನು ಎಣ್ಣೆಯನ್ನು ಒತ್ತಿಕೊಂಡು, ಕೆಂಪುಬಟ್ಟೆಯನ್ನುಟ್ಟು, ಕರವೀರಪುಷ್ಪದ ಹಾರವನ್ನು ಕೊರಳಲ್ಲಿ ಧರಿಸಿ, ಎಣ್ಣೆಯನ್ನು ಕುಡಿಯುತ್ತ ನೆಲದಮೇಲೆ ಕುಳಿತಿರುವಂತೆ ಸ್ವಪ್ನದಲ್ಲಿ ಕಂಡೆನು. ಮತ್ತೆ ಅವನು ತಲೆಯನ್ನು ವಪನಮಾಡಿಕೊಂಡು ಕಪ್ಪುಬಟ್ಟೆಯನ್ನುಟ್ಟು ಪುಷ್ಪಕವಿಮಾನದಲ್ಲಿ ಕುಳಿತಿರುವಾಗ, ಒಬ್ಬ ಹೆಂಗಸು ಅವನನ್ನು ಎಳೆದು ನೆಲದಮೇಲೆ ಕೆಡವಿದಳು (೨೩–೨೪). ಅವನು ಕತ್ತೆಯನ್ನು ಕಟ್ಟಿದ್ದ ಒಂದು ರಥದಮೇಲೆ ಕುಳಿತು ರಕ್ತಮಾಲಿಕೆಯನ್ನೂ ರಕ್ತಚಂದನವನ್ನೂ ಧರಿಸಿ, ಎಣ್ಣೆಯನ್ನು ಕುಡಿಯುತ್ತ, ಹುಚ್ಚುಹಿಡಿದವನಂತೆ ನಗುತ್ತ ಕುಣಿಯುತ್ತ ದಕ್ಷಿಣದಿಕ್ಕಿಗೆ ಶೀಘ್ರವಾಗಿ ಹೊರಟುಹೋದಂತೆ ಕಂಡೆನು (೨೫–೨೬). ರಾವಣನು ಕತ್ತೆಯಮೇಲೆ ಹೋಗುತ್ತಿರುವಾಗ ತಲೆಕೆಳಗಾಗಿ ಬಿದ್ದುಹೋದನು. ಕೂಡಲೇ ಭಯದಿಂದ ಮೇಲೆದ್ದು, ದಿಗಂಬರನಾಗಿ ಹುಚ್ಚನಂತೆ ಏನೇನೋ ಹಲುಬುತ್ತಾ

---

* ಸ್ವಪ್ನದಲ್ಲಿ ಎತ್ತು, ಆನೆ, ಉಪ್ಪರಿಗೆ, ಪರ್ವತಶಿಖರ, ವೃಕ್ಷಗಳನ್ನು ಏರುವುದೂ ಕೈಯಿಂದ ಸೂರ್ಯಚಂದ್ರರನ್ನು ಮುಟ್ಟುವುದೂ ಶುಭಕರವೆಂದು ಸ್ವಪ್ನಶಾಸ್ತ್ರವು ಹೇಳುತ್ತದೆ.

ಇದ್ದನು. ಅನಂತರ ದುರ್ಗಂಧಮಯವೂ ಘೋರವೂ ಅಂಧಕಾರಪೂರ್ಣವೂ ನರಕಸಮಾನವೂ ಆದ ಒಂದು ಅಮೇಧ್ಯದ ಗುಂಡಿಯಲ್ಲಿ ಬಿದ್ದು, ಅವನು ಮುಳುಗಿಹೋದಂತೆ ಕಂಡೆನು (೨೭–೨೮). ಕೆಂಪುಸೀರೆಯನ್ನುಟ್ಟಿದ್ದ ಕೊಳಕು ದೇಹದ ಒಬ್ಬ ಕರಿಯ ಹೆಂಗಸು ರಾವಣನ ಕೊರಳಿಗೆ ಹಗ್ಗವನ್ನು ಕಟ್ಟಿ ದಕ್ಷಿಣ ದಿಕ್ಕಿಗೆ ಎಳೆದುಕೊಂಡುಹೋಗುತ್ತಿರುವಂತೆ ನನಗೆ ಸ್ವಪ್ನವಾಯಿತು! ಕುಂಭ ಕರ್ಣನಿಗೂ ಹೀಗೆಯೇ ಆದದ್ದನ್ನು ಕಂಡೆನು (೨೯–೩೦). ರಾವಣನ ಮಕ್ಕಳು ವಪನಮಾಡಿಕೊಂಡು ಮೈಗೆ ಎಣ್ಣೆಯನ್ನು ಬಳಿದುಕೊಂಡಿದ್ದರು. ಮತ್ತೆ ರಾವಣನು ಹಂದಿಯನ್ನೂ, ಇಂದ್ರಜಿತುವು ಮೊಸಳೆಯನ್ನೂ, ಕುಂಭಕರ್ಣನು ಒಂಟೆಯನ್ನೂ ಏರಿ ದಕ್ಷಿಣದಿಕ್ಕಿಗೆ ಹೋಗುತ್ತಿದ್ದರು (೩೧–೩೨). ಆದರೆ ವಿಭೀಷಣನೊಬ್ಬನು ಮಾತ್ರ ಶ್ವೇತಚ್ಛತ್ರವನ್ನು ಹಿಡಿದು ಬಿಳಿಯ ಹೂಮಾಲೆ ಯನ್ನೂ ವಸ್ತ್ರವನ್ನೂ ಧರಿಸಿ, ಶುಭ್ರವಾದ ಚಂದನವನ್ನು ಲೇಪಿಸಿಕೊಂಡು, ನಾಲ್ಕು ಹಲ್ಲುಗಳುಳ್ಳ ಒಂದು ಮಹಾಗಜವನ್ನು ಹತ್ತಿ ಕುಳಿತಿದ್ದನು. ಅವನು ತನ್ನ ನಾಲ್ಕೂ ಮಂದಿ ಸಚಿವರೊಡನೆ, ಗೀತವಾದ್ಯಗಳು ಧ್ವನಿಗೈಯುತ್ತಿರಲು, ಅಂತರಿಕ್ಷದಲ್ಲಿ ಕಂಗೊಳಿಸುತ್ತಿದ್ದನು (೩೩–೩೪). ಇತರ ಅನೇಕ ರಾಕ್ಷಸರು ಕೆಂಪಾದ ಮಾಲೆಗಳನ್ನೂ ವಸ್ತ್ರವನ್ನೂ ಧರಿಸಿ ಎಣ್ಣೆಯನ್ನು ಕುಡಿಯುತ್ತಾ ಬರುತ್ತಿರುವಾಗ, ಸುಂದರವಾದ ಈ ಲಂಕಾನಗರವು ಸಮುದ್ರದಲ್ಲಿ ಮುಳುಗಿ ಹೋದಂತೆ ಕಂಡೆನು (೩೬–೩೭). ಇಷ್ಟೇ ಅಲ್ಲ; ರಾಮನ ದೂತನಾದ ವಾನರ ನೊಬ್ಬನು ಬಂದು ಲಂಕಾನಗರವನ್ನು ಸುಟ್ಟುಹಾಕಿದಂತೆ ಸ್ವಪ್ನವಾಯಿತು. ಆಗ ರಾಕ್ಷಸಸ್ತ್ರೀಯರು ಎಣ್ಣೆಯನ್ನು ಕುಡಿಯುತ್ತ, ಕುಣಿಯುತ್ತ, ನಗುತ್ತ, ಬೂದಿ ಯಾದ ಲಂಕೆಯೊಳಗೆ ಬರುತ್ತಿರುವುದನ್ನು ಕಂಡೆನು. ಕುಂಭಕರ್ಣಾದಿ ರಾಕ್ಷಸ ರೆಲ್ಲರೂ ರಕ್ತವಸ್ತ್ರವನ್ನುಟ್ಟು ಸಗಣಿಯ ಗುಂಡಿಯೊಳಗೆ ಬಿದ್ದುಹೋದರು. ಎಲೈ ರಾಕ್ಷಸಿಯರೆ, ಇಲ್ಲಿಂದ ತೊಲಗಿರಿ; ಹಾಳಾಗಿಹೋಗಿರಿ! ರಾಮನು ಸೀತೆಯನ್ನು ಪಡೆದಂತೆಯೇ ಸರಿ (೩೮–೪೦). ಅವನು ಅತ್ಯಂತ ಕ್ರುದ್ಧನಾಗಿ ರಾಕ್ಷಸ ರೊಂದಿಗೆ ನಿಮ್ಮನ್ನೂ ಕೊಂದುಬಿಟ್ಟಾನು. ತನಗೆ ಪರಮ ಪ್ರಿಯಳೂ ತನ್ನನ್ನು ಹಿಂಬಾಲಿಸಿ ಅರಣ್ಯಕ್ಕೆ ಬಂದವಳೂ ಆದ ಪತ್ನಿಯನ್ನು, ನೀವು ಬೈದು ಹೆದರಿಸು ವುದನ್ನು ರಾಘವನು ಎಂದಿಗೂ ಕ್ಷಮಿಸಲಾರನು. ಸೀತೆಗೆ ಕೆಟ್ಟಮಾತುಗಳ ನ್ನಾಡುವುದು ಬೇಡ. ಒಳ್ಳೆಯ ಮಾತನ್ನಾಡಿರಿ! (೪೧–೪೩). ಅವಳ ಕ್ಷಮೆ

ಯನ್ನು ಬೇಡುವುದೇ ಯುಕ್ತವೆಂದು ನನಗೆ ತೋರುತ್ತದೆ. ಅವಳು ದುಃಖಿತಳಾಗಿರುವ ಸಮಯದಲ್ಲಿ ನನಗೆ ಇಂತಹ ಸ್ವಪ್ನವು ಕಂಡುಬಂದುದರಿಂದ, ಅವಳಿಗೆ ದುಃಖವು ನೀಗಿ ಶುಭವಾಗುತ್ತದೆಯೆಂಬುದು ನಿಶ್ಚಯ. ಹೆಚ್ಚು ಹೇಳಿ ಫಲವೇನು? ಕ್ಷಮಿಸಬೇಕೆಂದು ಈಕೆಯನ್ನು ಕೇಳಿಕೊಳ್ಳಿರಿ! (೪೪). ರಾಕ್ಷಸಿಯರನ್ನು ಕಾಪಾಡಲು ಈಕೆಗೆ ಶಕ್ತಿಯುಂಟು. ಇನ್ನೊಂದು ವಿಶೇಷವೇನೆಂದರೆ, ಈ ಸೀತೆಯ ದೇಹದಲ್ಲಿ ಅವಗುಣಗಳನ್ನು ಸೂಚಿಸತಕ್ಕ ಯಾವ ಲಕ್ಷಣವೂ ಕಂಡುಬರುವುದಿಲ್ಲ. ಸ್ನಾನಾನುಲೇಪನಗಳಿಲ್ಲದೆ ದುಃಖಿಸುತ್ತಿರುವುದರಿಂದ ಮಾತ್ರ ದೇಹಕಾಂತಿಯು ಸ್ವಲ್ಪ ಕುಗ್ಗಿದೆ (೪೫–೪೭). ಈ ದೇವಿಯು ಆಕಾಶಮಾರ್ಗದಲ್ಲಿ ಸಂಚರಿಸಿದುದನ್ನು ನಾನು ಸ್ವಪ್ನದಲ್ಲಿ ಕಂಡಿದ್ದೇನೆ. ಇವಳ ಕಾರ್ಯಸಿದ್ಧಿಯು ಸಮೀಪಿಸಿತೆಂದೇ ತಿಳಿಯುತ್ತೇನೆ. ರಾಕ್ಷಸೇಂದ್ರನಾದ ರಾವಣನ ವಿನಾಶವಾಗುವುದು. ರಾಮನಿಗೆ ವಿಜಯವಾಗುವುದು. ಈಕೆಯು ಒಳ್ಳೆಯ ಸುದ್ದಿಯನ್ನು ಶೀಘ್ರದಲ್ಲಿ ಕೇಳುವಳೆಂಬುದಕ್ಕೆ ಸಾಕ್ಷಿಯಾಗಿ ಶುಭಶಕುನವಾಗುತ್ತಿದೆ (೪೮–೪೯). ತಾವರೆಯ ಎಸಳಿನಂತೆ ವಿಶಾಲವಾದ ಸೀತೆಯ ಎಡಗಣ್ಣು ಹಾರುತ್ತಿದೆ. ಇವಳ ಎಡತೋಳು ಆಗಾಗ ಪುಳಕಿತವಾಗುತ್ತಿದೆ. ಆನೆಯ ಸೊಂಡಿಲಿನಂತಿರುವ ಎಡದ ತೊಡೆ ಅದಿರುತ್ತಿದೆ. ರಘುನಾಥನೇ ಎದುರಿಗೆ ಬಂದು ನಿಂತಿರುವನೋ ಎಂಬ ಶುಭಸೂಚನೆ ಇದು (೫೦–೫೧). ಅಗೋ! ಆ ಮರದ ಕೊಂಬೆಯಮೇಲೆ ಕುಳಿತಿರುವ ಹಕ್ಕಿಯು ಸೀತೆಗೆ ಶುಭವನ್ನು ಸ್ವಾಗತಿಸುತ್ತ, ಆನಂದದಿಂದ 'ಪುನಃ–ಪುನಃ' ಎಂದು ಇಂಪಾಗಿ ಹಾಡುತ್ತಿದೆ!" ಎಂದಳು (೫೨). ಆಗ ಜಾನಕಿಯು ತನ್ನ ಪತಿಗೆ ವಿಜಯವಾಗುವುದೆಂಬ ಮಾತಿನಿಂದ ಹೃಷ್ಟಳಾಗಿ, 'ಈ ಮಾತು ದಿಟವಾದರೆ ನಿಮ್ಮನ್ನು ನಾನು ರಕ್ಷಿಸುತ್ತೇನೆ' ಎಂದು ಲಜ್ಜೆಯಿಂದ ನುಡಿದಳು (೫೩).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಇಪ್ಪತ್ತೇಳನೆಯ ಸರ್ಗ

# ಸರ್ಗ ೨೮

ಸೀತೆಯು ಬಹುವಿಧದಲ್ಲಿ ಶೋಕಿಸಿ ನೇಣುಹಾಕಿಕೊಳ್ಳುವುದಕ್ಕಾಗಿ ಯತ್ನಿಸುವುದು.

ರಾವಣನ ಕಠೋರ ಮಾತುಗಳನ್ನು ಕೇಳಿದಾಗಿನಿಂದ ಸೀತೆಯು, ಸಿಂಹಗಳ ಮಧ್ಯದಲ್ಲಿ ಸಿಕ್ಕಿಬಿದ್ದ ಹೆಣ್ಣಾನೆಯಂತೆ, ಭಯದಿಂದ ಕಂಗೆಟ್ಟುಹೋಗಿದ್ದಳು. ನಿರ್ಜನವಾದ ಅಡವಿಯಲ್ಲಿ ಉಳಿದುಹೋದ ಚಿಕ್ಕ ಹುಡುಗಿಯಂತೆ ಅಳುತ್ತ ಹಲುಬತೊಡಗಿದಳು (೧–೨): "ಅಯ್ಯೋ! ಈ ರಾಕ್ಷಸಿಯರು ಇಷ್ಟು ಗೋಳಾಡಿಸುತ್ತಿದ್ದರೂ ಪುಣ್ಯಹೀನೆಯಾದ ನನಗೆ ಮರಣವೇ ಸಂಭವಿಸುವುದಿಲ್ಲ. ಕಾಲ ಬರದೆ ಮರಣವಾಗುವುದಿಲ್ಲವೆಂದು ದೊಡ್ಡವರು ಹೇಳುವುದು ಸುಳ್ಳಲ್ಲ. ವಜ್ರದ ಹೊಡೆತಕ್ಕೆ ಸಿಕ್ಕಿದ ಪರ್ವತಶಿಖರದಂತೆ, ಈ ದುಃಖಗಳಿಂದ ನನ್ನ ಎದೆಯು ಸಾವಿರ ಚೂರುಗಳಾಗಿ ಸೀಳಿಹೋಗಬೇಡವೆ? ನನ್ನ ಎದೆ ಬಹಳ ಗಟ್ಟಿಯಾದದ್ದು (೩–೪). ನಾನು ಆತ್ಮಹತ್ಯೆ ಮಾಡಿಕೊಂಡರೂ ತಪ್ಪಲ್ಲ. ಹೇಗೂ ರಾವಣನ ಕೈಯಿಂದ ಸಾಯಬೇಕಾಗಿದೆ. ದ್ವಿಜನು ರಹಸ್ಯವಾದ ವೇದಮಂತ್ರವನ್ನು ಇತರರಿಗೆ ಹೇಗೆ ಒಪ್ಪಿಸಲಾರನೋ ಹಾಗೆ ನಾನು ನನ್ನ ಅಂತರಂಗವನ್ನು ರಾವಣನಿಗೆ ಒಪ್ಪಿಸಲಾರೆ. ಲೋಕನಾಥನಾದ ರಾಮನು ಇಲ್ಲಿಗೆ ಬಾರದಿದ್ದರೆ, ಗರ್ಭಸ್ಥಶಿಶುವನ್ನು ಶಸ್ತ್ರವೈದ್ಯನು ತುಂಡರಿಸುವಂತೆ, ಈ ದುಷ್ಟನು ನನ್ನನ್ನು ಕತ್ತರಿಸಿಹಾಕುವನು (೫–೬). ಎರಡು ತಿಂಗಳ ಅವಧಿಯೂ ಮುಗಿದುಹೋಗುವುದು. ರಾಜದ್ರೋಹಿಯಾದ ಕಳ್ಳನನ್ನು ಸೆರೆ ಹಿಡಿದು ಬೆಳಗಾದರೆ ಶೂಲಕ್ಕೇರಿಸುವಂತೆ ನನ್ನ ಸ್ಥಿತಿ ಆಯಿತಲ್ಲ! ಹಾ ರಾಮ, ಲಕ್ಷ್ಮಣ, ಹಾ ಸುಮಿತ್ರೇ, ಹಾ ಕೌಸಲ್ಯೇ, ಅಮ್ಮಾ! ಸಮುದ್ರದಲ್ಲಿ ಬಿರುಗಾಳಿಗೆ ಸಿಕ್ಕಿದ ಹಡಗಿನಂತೆ ನಾಶವಾಗಿಹೋಗುತ್ತಿದ್ದೇನೆ (೭–೮). ಮಾಯಾಮೃಗದ ವೇಷದಲ್ಲಿ ಬಂದ ರಾಕ್ಷಸನಿಂದ, ನನ್ನ ನಿಮಿತ್ತವಾಗಿ ಆ ರಾಜಕುಮಾರರು ಸಿಡಿಲಿಗೆ ಸಿಕ್ಕಿದ ಸಿಂಹಗಳಂತೆ ಹತರಾಗಿರಬೇಕು. ಮೃತ್ಯುವೇ ಜಿಂಕೆಯ ರೂಪದಿಂದ ಬಂದು ಭಾಗ್ಯಹೀನಳಾದ ನನಗೆ ಆಸೆಯನ್ನು ಹುಟ್ಟಿಸಿರಬೇಕು. ಮೂಢೆಯಾದ ನಾನು ರಾಮನನ್ನು ಕಳಿಸಿದ್ದಲ್ಲದೆ, ಲಕ್ಷ್ಮಣನನ್ನೂ ಕಳಿಸಿಬಿಟ್ಟೆನು (೯–೧೦). ಹಾ ರಾಮ, ಸತ್ಯನಿಷ್ಠ, ಆಜಾನುಬಾಹು, ಪೂರ್ಣಚಂದ್ರಾನನ, ಈ ರಾಕ್ಷಸರ ಕೈಯಿಂದ ಸಾಯುತ್ತಿದ್ದೇನೆಂದು ಜೀವಲೋಕಕ್ಕೇ ಹಿತಕಾರಿಯೂ

ಪ್ರಿಯನೂ ಆದ ನಿನಗೆ ತಿಳಿಯದು. ಪತಿಯನ್ನೇ ದೇವರೆಂದು ನಂಬಿ ತಾಳ್ಮೆಯಿಂದ ನೆಲದಮೇಲೆ ಮಲಗುತ್ತ ಧರ್ಮದಲ್ಲಿ ಶ್ರದ್ಧೆಯನ್ನಿಟ್ಟು ಪಾತಿವ್ರತ್ಯವನ್ನು ಪಾಲಿಸಿಕೊಂಡು ಬಂದದ್ದು ವ್ಯರ್ಥವಾಗಿಹೋಯಿತೆ? ಕೃತಘ್ನರಿಗೆ ಉಪಕಾರ ಮಾಡಿದಂತೆ ನಿಷ್ಫಲವಾಯಿತೆ? (೧೧–೧೨). ನಾನು ಆಚರಿಸಿದ ಧರ್ಮವೂ ಪಾತಿವ್ರತ್ಯವೂ ಫಲವನ್ನು ಕೊಡಲಿಲ್ಲ. ಪುನಃ ರಾಮನೊಡನೆ ಸಮಾಗಮವಾಗುತ್ತದೆಯೆಂಬುದರಲ್ಲಿ ನಿರಾಶಳಾಗಿದ್ದೇನೆ. ಹಾ ರಾಮ, ನೀನು ಪಿತೃವಾಕ್ಯವನ್ನು ಪರಿಪಾಲಿಸಿ, ಅರಣ್ಯವಾಸದಿಂದ ಹಿಂದಿರುಗಿ ಸುಂದರಿಯರಾದ ಸ್ತ್ರೀಯರೊಡನೆ ವಿಹರಿಸಬಹುದು! (೧೩–೧೪). ನಾನಾದರೋ ನಿನ್ನಲ್ಲಿಯೇ ಅನುರಾಗವನ್ನಿಟ್ಟು, ತಪೋನಿಯಮಗಳನ್ನಾಚರಿಸಿ ಪ್ರಾಣವನ್ನು ಬಿಡುತ್ತಿದ್ದೇನೆ. ಎಲ್ಲವೂ ನಿಷ್ಫಲವಾಯಿತು. ಮಂದಭಾಗ್ಯಳಾದ ನನಗೆ ಧಿಕ್ಕಾರ! ನಾನು ಆತ್ಮಹತ್ಯೆಮಾಡಿಕೊಳ್ಳುವುದೇ ಲೇಸು. ಆದರೆ ಇಲ್ಲಿ ವಿಷವನ್ನಾಗಲಿ, ಶಸ್ತ್ರವನ್ನಾಗಲಿ ನನಗೆ ಕೊಡುವವರು ಯಾರು?" (೧೫–೧೬). ಹೀಗೆ ಮೈಥಿಲಿಯು ರಾಮನನ್ನೇ ನೆನೆದು ರೋದಿಸುತ್ತ ಬಾಯೊಣಗಿ, ಪುಷ್ಪಿತವಾದ ಆ ಶಿಂಶಪಾ ವೃಕ್ಷದ ಬಳಿಗೆ ಬಂದಳು. ಅವಳು ನಾನಾವಿಧದಲ್ಲಿ ಚಿಂತಿಸಿ ಕಡೆಗೆ ತನ್ನ ನೀಳವಾದ ವೇಣಿಯನ್ನು ಕೈಯಲ್ಲಿ ಹಿಡಿದು 'ಇದರಿಂದ ನೇಣುಹಾಕಿಕೊಂಡು ಶೀಘ್ರದಲ್ಲಿಯೇ ಯಮನ ಬಳಿಗೆ ಹೋಗುವೆನು' ಎಂದು ಆಲೋಚಿಸಿದಳು (೧೭–೧೮). ಆ ಕೋಮಲಾಂಗಿಯು ಶಿಂಶಪಾವೃಕ್ಷದ ಕೊಂಬೆಯೊಂದನ್ನು ಹಿಡಿದು, ರಾಮಲಕ್ಷ್ಮಣರನ್ನೂ ತನ್ನ ಪವಿತ್ರವಾದ ಕುಲವನ್ನೂ ನೆನೆದುಕೊಳ್ಳುತ್ತಿದ್ದಳು. ಅಷ್ಟರಲ್ಲಿ ಅವಳ ಸಮಸ್ತ ಆಪತ್ತುಗಳೂ ಕಳೆದುಹೋಗುತ್ತವೆಯೆಂದು ಧೈರ್ಯವನ್ನು ಕೊಡತಕ್ಕ ಅನೇಕ ಶುಭನಿಮಿತ್ತಗಳುಂಟಾದವು (೧೯–೨೦).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಇಪ್ಪತ್ತೆಂಟನೆಯ ಸರ್ಗ

# ಸರ್ಗ ೨೯

ಸೀತಾದೇವಿಗೆ ಶುಭನಿಮಿತ್ತಗಳುಂಟಾದುದು.

ಈ ಪ್ರಕಾರದಲ್ಲಿ ಹರ್ಷವಿಲ್ಲದೆ ಕುಂದಿ ಕೊರಗುತ್ತಿದ್ದ ಸೀತಾದೇವಿಗೆ, ಶ್ರೀಮಂತನ ಕಾರ್ಯಕ್ಕೆ ಸೇವಕರು ಬಂದು ಒದಗುವಂತೆ, ಅನೇಕ ಶುಭನಿಮಿತ್ತಗಳು ತಲೆದೋರಿದವು. ಶುಭಲಕ್ಷಣಯುತವಾಗಿ ಕಪ್ಪಾದ ಕಣ್ಣಾಲೆಯುಳ್ಳ ಆಕೆಯ ಎಡಗಣ್ಣು, ಮೀನಿನಿಂದ ಅಲುಗಿಸಲ್ಪಟ್ಟ ಪದ್ಮದಂತೆ ಅದುರಿತು (೧–೨). ದುಂಡಗೆ ನುಣುಪಾಗಿ, ಚಂದನಲೇಪನಕ್ಕೆ ಯೋಗ್ಯವಾಗಿ, ಶ್ರೀರಾಮನ ಆಲಿಂಗನಸುಖವನ್ನು ಅನುಭವಿಸಿದ್ದ ಆಕೆಯ ಎಡದೋಳು ಹಾರತೊಡಗಿತು. ಆನೆಯ ಸೊಂಡಿಲಿನಂತೆ ಮನೋಹರವಾಗಿದ್ದ ವಾಮಭಾಗದ ತೊಡೆಯು ನಡುಗುತ್ತ, ಶ್ರೀರಾಮನು ಪ್ರತ್ಯಕ್ಷವಾಗಿ ಬಂದು ನಿಂತಿದ್ದಾನೆಂದು ಸೂಚಿಸುವಂತೆ ಇತ್ತು (೩–೪). ದಾಡಿಮಬೀಜಗಳಂತೆ ಹಲ್ಲುಗಳುಳ್ಳ ಆ ಸುಂದರಿಯು ನಿಂತಿರುವಾಗ, ಸ್ವಲ್ಪ ಮಲಿನವಾದ ಆಕೆಯ ಹೊಂಬಣ್ಣದ ದುಕೂಲವು ಕೊಂಚ ಸಡಿಲಿತು. ಇವೇ ಮೊದಲಾದ ಇನ್ನೂ ಅನೇಕ ಶುಭಶಕುನಗಳುಂಟಾದವು. ಇವು ಹಿಂದೆ ಸೀತಾದೇವಿಗೆ ತಪ್ಪದೆ ಫಲಸಿದ್ಧಿಯನ್ನು ಸೂಚಿಸಿ ನಂಬಿಕೆಯನ್ನು ಉಂಟುಮಾಡಿದ್ದವು. ಗಾಳಿ ಬಿಸಿಲುಗಳಿಂದ ಕಂಗೆಟ್ಟಿರುವ ಪೈರು ಮಳೆ ಬಿದ್ದೊಡನೆ ಚಿಗುರಿ ಉಲ್ಲಾಸಹೊಂದುವಂತೆ, ಈ ಶುಭನಿಮಿತ್ತಗಳಾಗಲು ಸೀತಾದೇವಿಯು ಉಲ್ಲಾಸಗೊಂಡಳು (೫–೬). ತೊಂಡೆಹಣ್ಣಿನಂತಿರುವ ತುಟಿಯಿಂದಲೂ, ಮನೋಹರವಾದ ಕಣ್ಣು ಹುಬ್ಬು ಮುಂಗುರುಳುಗಳಿಂದಲೂ, ಮಂದಹಾಸದಿಂದ ಶುಭ್ರವಾದ ಹಲ್ಲುಗಳಿಂದಲೂ ಕೂಡಿದ ಆಕೆಯ ಮುಖವು ರಾಹುವಿನಿಂದ ಬಿಡುಗಡೆಹೊಂದಿದ ಚಂದ್ರನಂತೆ ಕಳೆಯೇರಿತು (೭). ಆ ದೇವಿಯ ಶೋಕವು ಕುಗ್ಗಿತು. ಬೇಸರವು ಕಡಮೆಯಾಯಿತು. ಮನಸ್ಸಿನ ತಾಪವು ಇಳಿಯಿತು. ಹರ್ಷದಿಂದ ಚಿತ್ತವು ಉಲ್ಲಸಿತವಾಯಿತು. ಅವಳ ಮುಖವು ಸಂತೋಷದಿಂದ ಹಿಗ್ಗಿ, ಶುಕ್ಲಪಕ್ಷದ ರಾತ್ರಿಯಲ್ಲಿ ಉದಯಿಸಿದ ಚಂದ್ರನಂತೆ ಚಂದವಾಯಿತು (೮).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಇಪ್ಪತ್ತೊಂಬತ್ತನೆಯ ಸರ್ಗ

# ಸರ್ಗ ೩೦

ಹನುಮಂತನು ಸೀತಾದೇವಿಯನ್ನು ಸಮಾಧಾನಪಡಿಸಬೇಕೆಂದು ಆಲೋಚಿಸುವುದು.

ಹನುಮಂತನು ಮರದಮೇಲೆ ಕುಳಿತು ಸೀತೆಯ ವಿಲಾಪವನ್ನೂ ತ್ರಿಜಟೆಯ ಸ್ವಪ್ನವೃತ್ತಾಂತವನ್ನೂ ರಾಕ್ಷಸಿಯರ ಬೆದರಿಕೆಯ ಮಾತುಗಳನ್ನೂ ಕೇಳುತ್ತಿದ್ದನು. ನಂದನವನದಲ್ಲಿ ದೇವತಾಸ್ತ್ರೀಯಂತೆ ಅಶೋಕವನದಲ್ಲಿ ಶೋಭಿಸುತ್ತಿದ್ದ ಜಾನಕಿಯನ್ನು ನೋಡುತ್ತ, ಅವನು ಬಹುವಿಧವಾಗಿ ಚಿಂತಿಸಿದನು (೧–೨): "ಲಕ್ಷೋಪಲಕ್ಷ ಕಪಿಗಳು ನಾನಾದಿಕ್ಕುಗಳಲ್ಲಿ ಯಾವಳನ್ನು ಹುಡುಕುತ್ತಿರುವರೋ, ಆಕೆಯು ನನಗೆ ಗೋಚರಿಸಿಬಿಟ್ಟಳು. ನಾನು ಇಲ್ಲಿ ಯಾರಿಗೂ ಗೊತ್ತಾಗದಂತೆ ಎಚ್ಚರಿಕೆಯಿಂದ ಸಂಚರಿಸುತ್ತ, ಅನೇಕ ವಿಷಯಗಳನ್ನು ತಿಳಿದುಕೊಂಡೆನು. ಈ ರಾಕ್ಷಸರಲ್ಲಿರುವ ವಿಶೇಷವನ್ನೂ ಲಂಕಾಪಟ್ಟಣದ ಸ್ಥಿತಿಯನ್ನೂ ರಾವಣನ ಪ್ರಭಾವವನ್ನೂ ಕಂಡೆನು (೩–೫). ಈಗ ಅಪಾರ ಮಹಿಮನೂ ಸಮಸ್ತಭೂತಗಳಲ್ಲಿ ಕರುಣಾಶಾಲಿಯೂ ಆದ ಶ್ರೀರಾಮನ ಪತ್ನಿಯನ್ನು ಸಮಾಧಾನಪಡಿಸುವುದು ಉತ್ತಮ. ಈ ಪೂರ್ಣಚಂದ್ರಮುಖಿಯು ದುಃಖವನ್ನೇ ಕಂಡವಳಲ್ಲ. ಈಗ ದುಃಖಾರ್ತಳಾಗಿ ಅದರ ಕೊನೆಯನ್ನೇ ಕಾಣದಂತಾಗಿರುವಳು (೬–೭). ಶೋಕಾರ್ತಳಾದ ಈಕೆಯನ್ನು ಸಮಾಧಾನಪಡಿಸದೆ ನಾನು ಹೊರಟುಹೋದರೆ ದೊಡ್ಡ ತಪ್ಪಾಗುವುದು. ನಾನು ಸುಮ್ಮನೆ ಹೋಗಿಬಿಟ್ಟರೆ, ಈ ಜಾನಕಿಯು ಬೇರೆ ಗತಿಯನ್ನು ಕಾಣದೆ ಜೀವಿತವನ್ನೇ ತ್ಯಜಿಸಬಹುದು. ಅತ್ತ ಕಡೆ ರಾಮಚಂದ್ರನೂ ಸೀತೆಯನ್ನು ನೋಡಲು ಉತ್ಸುಕನಾಗಿರುವುದರಿಂದ, ಈಕೆಯ ಸಂದೇಶವನ್ನೊಯ್ದು ಸಮಾಧಾನಪಡಿಸುವುದು ಯುಕ್ತವಾಗಿದೆ (೮–೧೦). ಈ ರಾಕ್ಷಸಿಯರ ಎದುರಿಗೆ ನಾನು ಸೀತೆಯೊಡನೆ ಸಂಭಾಷಣೆ ಮಾಡುವುದು ಯೋಗ್ಯವಲ್ಲ. ಈಗ ಏನು ಮಾಡಬೇಕು? ಪೇಚಿನಲ್ಲಿ ಸಿಕ್ಕಿಕೊಂಡೆನಲ್ಲ! ಈ ರಾತ್ರಿಯು ಕಳೆಯುವುದರೊಳಗೆ ಸಮಾಧಾನಪಡಿಸದಿದ್ದರೆ, ಇವಳು ಪ್ರಾಣವನ್ನು ಬಿಡುವುದರಲ್ಲಿ ಸಂದೇಹವಿಲ್ಲ (೧೧–೧೨). ಅಲ್ಲದೆ ಈಕೆಯೊಡನೆ ಮಾತನಾಡದೆಯೇ ನಾನು ಹಿಂತಿರುಗಿದಲ್ಲಿ 'ಸೀತೆಯು ನನಗೆ ಏನು ಹೇಳಿದ್ದಾಳೆ?' ಎಂದು ಶ್ರೀರಾಮನು ಕೇಳಿದರೆ, ನಾನು ಏನೆಂದು ಉತ್ತರ ಹೇಳಬೇಕು? ಸೀತೆಯ ಸಂದೇಶವನ್ನು ಕೇಳಿಕೊಳ್ಳದೆ ಅವಸರದಿಂದ ಹೊರಟು

ಹೋದರೆ, ಶ್ರೀರಾಮನು ಕ್ರುದ್ಧನಾಗಿ ಕೆಂಗಣ್ಣಿನಿಂದ ನನ್ನನ್ನು ಸುಟ್ಟುಬಿಡಬಹುದು (೧೩–೧೪). ನಾನು ರಾಮನಿಗೋಸ್ಕರ ಸುಗ್ರೀವನೇ ಸೈನ್ಯಸಮೇತನಾಗಿ ಇಲ್ಲಿಗೆ ಬರುವಂತೆ ಮಾಡಬಹುದು. ಆದರೂ ಅಷ್ಟರಲ್ಲಿ ಈಕೆಯು ಪ್ರಾಣತ್ಯಾಗಮಾಡಿದರೆ, ಅವನು ಬಂದುದೂ ವ್ಯರ್ಥವಾಗುತ್ತದೆ. ಆದ್ದರಿಂದ ಈ ರಾಕ್ಷಸಸ್ತ್ರೀಯರಿಗೆ ಗೊತ್ತಾಗದಂತೆ ಸಮಯವನ್ನು ಕಾದು, ದುಃಖದಿಂದ ಕುದಿಯುತ್ತಿರುವ ಈಕೆಯನ್ನು ಮೆಲ್ಲಗೆ ಸಮಾಧಾನಪಡಿಸುವೆನು (೧೫–೧೬). ನಾನಾದರೋ ಚಿಕ್ಕ ಶರೀರದವನು.* ಅದರಲ್ಲಿಯೂ ವಾನರನು. ಮೇಲಾಗಿ ಮನುಷ್ಯರಾಡುವ ಸಂಸ್ಕೃತಭಾಷೆಯಲ್ಲಿ ಮಾತನಾಡುತ್ತೇನೆ! ದ್ವಿಜನಂತೆ ನಾನು ಸಂಸ್ಕೃತದಲ್ಲಿ ಮಾತನಾಡಿದರೆ, ಸೀತೆಯು ನಾನು ರಾವಣನೆಂದೇ ತಿಳಿದು ಭಯಪಡುವಳು (೧೭–೧೮). ವಾನರನು ಮಾತನಾಡುವುದೆಂದರೇನು! ಆದರೂ ನಾನು ಮನುಷ್ಯಭಾಷೆಯಿಂದಲೇ ಮಾತನಾಡಿ ಸೀತಾದೇವಿಯನ್ನು ಸಂತೈಸಬೇಕಲ್ಲದೆ ಬೇರೆ ಉಪಾಯವಿಲ್ಲ. ರಾಕ್ಷಸಿಯರಿಂದ ಮೊದಲೇ ಇವಳು ಭಯಗೊಂಡಿದ್ದಾಳೆ. ನನ್ನ ಈ ರೂಪವನ್ನೂ ಭಾಷೆಯನ್ನೂ ಕಂಡು ಇನ್ನೂ ಗಾಬರಿಯಾಗಬಹುದು. ಭಯದಿಂದ ಕೂಗಿಕೊಂಡುಬಿಟ್ಟಾಳು (೧೯–೨೧). ಈ ವಿಶಾಲಾಕ್ಷಿಯು ನನ್ನನ್ನು ಕಾಮರೂಪಿಯಾದ ರಾವಣನೆಂದು ಭಾವಿಸಬಹುದು. ಇವಳು ಕೂಗಿಕೊಂಡರೆ ಮೃತ್ಯುವಿನಂತಿರುವ ಈ ಘೋರರಾಕ್ಷಸಿಯರು ವಿವಿಧಾಯುಧಗಳನ್ನು ಹಿಡಿದುಕೊಂಡುಬಂದು ನನ್ನನ್ನು ಮುತ್ತಿಕೊಳ್ಳುವರು. ನನ್ನನ್ನು ಕೊಲ್ಲುವುದಕ್ಕೋ ಸೆರೆಹಿಡಿಯುವುದಕ್ಕೋ ಯಥಾಶಕ್ತಿ ಪ್ರಯತ್ನಿಸುವರು. ನಾನು ಮರದ ಕೊಂಬೆಗಳನ್ನೂ ದಿಮ್ಮಿಗಳನ್ನೂ ಹಿಡಿದು ಅವರಮೇಲೆ ತಿರುಗಿಬೀಳಬೇಕಾದೀತು (೨೨–೨೪). ನನ್ನ ದೊಡ್ಡ ಆಕೃತಿಯನ್ನೂ ಸಂಚಾರವೇಗವನ್ನೂ ನೋಡಿ ಈ ಕೆಟ್ಟಮೋರೆಯ ರಾಕ್ಷಸಿಯರು ಭಯದಿಂದ ತಲ್ಲಣಿಸಿ ಹೋದಾರು! ಆಗ ರಾವಣನ ಅರಮನೆಯಲ್ಲಿ ಕಾವಲಿರುವ ರಾಕ್ಷಸರನ್ನು ಸಹಾಯಕ್ಕಾಗಿ ಇವರು ಕರೆತರಬಹುದು (೨೫–೨೬). ಅವರು ಶೂಲ, ಶಕ್ತಿ, ಖಡ್ಗ ಮುಂತಾದ ಆಯುಧಗಳನ್ನು ಧರಿಸಿ ಶೀಘ್ರದಲ್ಲಿ ನನ್ನೊಡನೆ ಯುದ್ಧಕ್ಕೆ ಬರಬಹುದು. ರಾಕ್ಷಸರು ಸುತ್ತಲೂ ಮುತ್ತಿಕೊಂಡಾಗ ಅವರೊಡನೆ

* (ಈಗ) ಚಿಕ್ಕಶರೀರದವನಾಗಿದ್ದೇನೆ ಎಂದೂ ಅರ್ಥಮಾಡಬಹುದು. ತನು = ದೇಹ; ಚಿಕ್ಕ, ಕೃಶ.

ಹೋರಾಡುತ್ತಾ ಇದ್ದರೆ, ಸಮುದ್ರವನ್ನು ದಾಟಿ ಹಿಂತಿರುಗಲು ನನಗೆ ಸಾಧ್ಯವಾಗುವುದೋ ಇಲ್ಲವೊ? ಅವರು ಬಹುಮಂದಿ ಇರುವುದರಿಂದ ವೇಗದಿಂದ ನನ್ನನ್ನು ಅಡ್ಡಗಟ್ಟಿ ಹಿಡಿಯಬಹುದು (೨೭–೨೯). ಸೀತಾದೇವಿಯ ಕೆಲಸವೂ ಕೆಟ್ಟುಹೋಗುವುದು. ನಾನೂ ಸೆರೆಸಿಕ್ಕುವೆನು. ಹಿಂಸೆಯಲ್ಲಿಯೇ ಅಭಿರುಚಿಯುಳ್ಳ ಈ ರಾಕ್ಷಸರು ಜಾನಕಿಗೆ ಇನ್ನೂ ಹಿಂಸೆಯನ್ನು ಕೊಡುವರು. ರಾಮಸುಗ್ರೀವರ ಕಾರ್ಯವೆಲ್ಲವೂ ಕೆಟ್ಟುಹೋದೀತು. ಈ ಜಾನಕಿಯು ಇರುವ ಸ್ಥಳವಾದರೋ ದುರ್ಗಮವೂ ರಾಕ್ಷಸರಿಂದ ಆವೃತವೂ ಆಗಿದೆ. ಸಮುದ್ರಮಧ್ಯದಲ್ಲಿ ಗುಪ್ತಪ್ರದೇಶವಾಗಿದೆ. ಒಂದು ವೇಳೆ ಯುದ್ಧದಲ್ಲಿ ರಾಕ್ಷಸರು ನನ್ನನ್ನು ಕೊಂದರೆ ಅಥವಾ ಸೆರೆಹಿಡಿದರೆ, ಆ ಶ್ರೀರಾಮನ ಕಾರ್ಯವನ್ನು ಮಾಡತಕ್ಕ ಇನ್ನೊಬ್ಬನನ್ನು ಕಾಣೆನಲ್ಲ! (೩೦–೩೩). ನಾನು ಹತನಾದರೆ, ನೂರು ಯೋಜನ ವಿಸ್ತಾರವಾದ ಮಹಾಸಾಗರವನ್ನು ದಾಟಬಲ್ಲ ಇನ್ನೊಬ್ಬ ವಾನರನು ಯಾರು? ಎಷ್ಟು ಚಿಂತಿಸಿದರೂ ಏನೂ ಹೊಳೆಯುವುದಿಲ್ಲ. ಈ ರಾಕ್ಷಸರು ಸಾವಿರಗಟ್ಟಲೆ ಬಂದರೂ ಕೊಂದುಹಾಕುವ ಸಾಮರ್ಥ್ಯ ನನಗುಂಟು ಆದರೆ ಆ ಸಂದರ್ಭದಲ್ಲಿ ಸಮುದ್ರವನ್ನು ದಾಟಿ ಹಿಂತಿರುಗಿಹೋಗಲು ಮಾತ್ರ ಸಾಧ್ಯವಾಗಲಾರದು. ಯುದ್ಧದಲ್ಲಿ ಜಯವಾಗುವುದೋ ಅಪಜಯವಾಗುವುದೋ ನಿಶ್ಚಯವಿರುವುದಿಲ್ಲ. ಸಂಶಯವು ನನಗೆ ಹಿಡಿಸದು (೩೪–೩೫). ಸಂಶಯಗ್ರಸ್ತವಾದ ಕಾರ್ಯವನ್ನು ಯಾವ ಬುದ್ಧಿವಂತನು ವಿಚಾರವಿಲ್ಲದೆ ಆರಂಭಿಸುವನು? ನಾನು ಮಾತನಾಡಿ ಸಂತೈಸದಿದ್ದರೆ ಸೀತೆಯು ಪ್ರಾಣವನ್ನು ಬಿಡುವಳು. ಮಾತನಾಡಿದರೆ ಈ ರೀತಿ ಅನರ್ಥವೇ ಸಂಭವಿಸುವುದು. ದೇಶಕಾಲಗಳಿಗೆ ವಿರುದ್ಧವಾಗಿ ಮಾಡಿದರೆ ಕೈಗೆ ಬಂದ ಕೆಲಸವೂ ಕೆಟ್ಟುಹೋಗುವುದು (೩೬–೩೭). ಸೂರ್ಯೋದಯವಾದರೆ ಕತ್ತಲೆಯು ನಾಶವಾಗುವಂತೆ ದೂತನು ಅವಿವೇಕಿಯಾದರೆ ಕಾರ್ಯವು ಹಾಳಾಗುವುದು. ಇದು ಕರ್ತವ್ಯ, ಇದು ಅಕರ್ತವ್ಯ–ಎಂದು ಪರ್ಯಾಲೋಚಿಸಿ ಮಾಡಿದ ನಿಶ್ಚಯವೂ ಫಲಕಾರಿಯಾಗುವುದಿಲ್ಲ. ಏಕೆಂದರೆ, ತಾವು ಪಂಡಿತರೆಂಬ ಒಣಹೆಮ್ಮೆಯ ದೂತರು ಕೆಲಸವನ್ನು ಹಾಳುಮಾಡಿಬಿಡುತ್ತಾರೆ. ಈಗ ಕಾರ್ಯವು ಕೆಡಬಾರದು; ಅವಿವೇಕವಾಗಬಾರದು; ನಾನು ಸಮುದ್ರಲಂಘನಮಾಡಿದುದು ವ್ಯರ್ಥವಾಗಬಾರದು; ಸೀತಾದೇವಿಯು ನನ್ನ ಮಾತನ್ನು ಆಲಿಸಬೇಕು–ಆದರೆ ಭಯಪಡಬಾರದು! ಇದು ಹೇಗೆ?" (೩೮–೪೦). ಹೀಗೆ ಮೇಧಾವಿಯಾದ

ಆಂಜನೇಯನು ಚೆನ್ನಾಗಿ ಪರ್ಯಾಲೋಚಿಸಿ ಕಡೆಗೆ ಒಂದು ನಿರ್ಧಾರಕ್ಕೆ ಬಂದನು : “ತನ್ನ ಪ್ರಿಯನಾದ ರಾಮನನ್ನೇ ಚಿಂತಿಸುತ್ತಿರುವ ಈಕೆಗೆ ನಾನು ಮಧ್ಯದಲ್ಲಿ ಉದ್ವೇಗವನ್ನುಂಟುಮಾಡಬಾರದು. ಮಧುರವಾದ ವಾಕ್ಯಗಳಿಂದ ಶ್ರೀರಾಮನ ವಿಷಯವನ್ನು ಹೇಳುವೆನು. ಇಕ್ಷ್ವಾಕುಕುಲಶ್ರೇಷ್ಠನಾದ ರಾಮನಿಗೆ ಸಂಬಂಧಿಸಿದ ಶುಭಕರವೂ ಧರ್ಮಯುಕ್ತವೂ ಆದ ಮಾತನ್ನು ಈಕೆಯು ಆಲಿಸುವಂತೆ ಮಾಡುವೆನು. ಇವಳಿಗೆ ನನ್ನಲ್ಲಿ ನಂಬಿಕೆ ಹುಟ್ಟುವಂತೆ ಮಾಡುವೆನು” (೪೧–೪೩) ಎಂದು ಆ ಮಹಾನುಭಾವನು ನಿರ್ಧರಿಸಿ ಜಗನ್ನಾಥನಾದ ಶ್ರೀರಾಮಚಂದ್ರನ ಪತ್ನಿಯನ್ನು ನೋಡುತ್ತ, ಮರದಮೇಲೆ ಮರೆಯಾಗಿ ಕುಳಿತು ‘ರಾಮಚರಿತ್ರೆ’ಯನ್ನು ಇಂಪಾಗಿ, ಯಥಾವತ್ತಾಗಿ ಹೇಳತೊಡಗಿದನು (ಆಗ ಸೀತೆಯನ್ನು ಹೆದರಿಸುತ್ತಿದ್ದ ರಾಕ್ಷಸಿಯರೆಲ್ಲರಿಗೂ ಗಾಢವಾಗಿ ನಿದ್ರೆ ಬಂದಿತು.) (೪೪).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಮೂವತ್ತನೆಯ ಸರ್ಗ

---

## ಸರ್ಗ ೩೧

ಹನುಮಂತನು ಶ್ರೀರಾಮನ ಜನನದಿಂದ ಆರಂಭಿಸಿ, ತಾನು ಸೀತೆಯನ್ನು ದರ್ಶನ ಮಾಡಿದ ಪರ್ಯಂತ ನಡೆದ ವೃತ್ತಾಂತವನ್ನು ಹೇಳುವುದು. ಸೀತೆಯು ಶಿಂಶಪಾವೃಕ್ಷದಲ್ಲಿ ಕುಳಿತಿದ್ದ ಹನುಮಂತನನ್ನು ಕಂಡುದು.

ಆ ವಾನರೋತ್ತಮನು ಹೀಗೆ ಚಿಂತಿಸಿ, ಸೀತೆಗೆ ಕೇಳುವಂತೆ ಇಂಪಾದ ಮಾತನ್ನಾಡಲಾರಂಭಿಸಿದನು: “ಇಕ್ಷ್ವಾಕುವಂಶದಲ್ಲಿ ದಶರಥನೆಂಬ ಮಹಾರಾಜನಿದ್ದನು. ಅವನ ಬಳಿ ರಥ, ಆನೆ, ಕುದುರೆಗಳು ಯಥೇಷ್ಟವಾಗಿದ್ದವು. ಅವನು ಮಹಾಪುಣ್ಯಾತ್ಮ; ಕೀರ್ತಿಶಾಲಿ (೧–೨). ರಾಜರ್ಷಿಗಳಲ್ಲಿ ಶ್ರೇಷ್ಠ; ತಪಸ್ಸಿನಲ್ಲಿ ಋಷಿಗಳಿಗೆ ಸಮಾನ ; ಆ ದಶರಥಮಹಾರಾಜನು ಚಕ್ರವರ್ತಿಗಳ ಕುಲದಲ್ಲಿ ಹುಟ್ಟಿದವನು ; ದೇವೇಂದ್ರನಂತೆ ಪರಾಕ್ರಮಿ ; ಯಾರಿಗೂ ಹಿಂಸೆ ಮಾಡತಕ್ಕವನಲ್ಲ ; ಉದಾರಶೀಲ ; ದಯಾವಂತ ; ಸತ್ಯನಿಷ್ಠ. ಅವನು ಇಕ್ಷ್ವಾಕುವಂಶದಲ್ಲಿ ಮುಖ್ಯನಾಗಿ ಸಮಸ್ತಸಂಪತ್ತುಗಳಿಂದ ವಿರಾಜಿಸುತ್ತಿದ್ದನು (೩–೪).

ಆ ರಾಜೋತ್ತಮನು ರಾಜಲಕ್ಷಣಯುಕ್ತನೂ ಭಾಗ್ಯಶಾಲಿಯೂ ಚತುಃಸಮುದ್ರ ಪರ್ಯಂತವಾದ ಪೃಥ್ವಿಯಲ್ಲಿ ಪ್ರಖ್ಯಾತನೂ ಪ್ರಜೆಗಳಿಗೆ ಸೌಖ್ಯದಾಯಕನೂ ಆಗಿ ಸುಖದಿಂದಿದ್ದನು. ಅವನಿಗೆ ಶ್ರೀರಾಮನೆಂಬ ಜ್ಯೇಷ್ಠಕುಮಾರನಿದ್ದಾನೆ. ರಾಮನ ಮುಖವು ಚಂದ್ರಮಂಡಲದಂತೆ ಪ್ರಸನ್ನವಾದದ್ದು. ಅವನು ದೊಡ್ಡ ವಿದ್ಯಾವಂತ; ಸಮಸ್ತ ಧನುರ್ಧಾರಿಗಳಲ್ಲಿಯೂ ಶ್ರೇಷ್ಠನೆನಿಸಿಕೊಂಡಿರುವನು (೫–೬). ತನ್ನ ಕ್ಷತ್ರಿಯಧರ್ಮವನ್ನೂ ಪ್ರಜೆಗಳ ವರ್ಣಾಶ್ರಮಧರ್ಮವನ್ನೂ ರಕ್ಷಿಸುತ್ತಿರುವನು; ಅವನು ಸಕಲಜೀವಲೋಕವನ್ನು ರಕ್ಷಿಸಬಲ್ಲ ವೀರ. ಆ ರಾಮನು ಸತ್ಯಸಂಧನೂ ವೃದ್ಧನೂ ಆದ ತಂದೆಯ ಆದೇಶವನ್ನು ಪಾಲಿಸುವುದಕ್ಕಾಗಿ, ತನ್ನ ಪತ್ನಿಯನ್ನೂ ತಮ್ಮನನ್ನೂ ಕರೆದುಕೊಂಡು ಅರಣ್ಯಕ್ಕೆ ಹೊರಟುಬಂದನು (೭–೮). ಮಹಾರಣ್ಯದಲ್ಲಿ ಬೇಟೆಯಾಡುತ್ತಿರುವಾಗ ರಾಮನು ಕಾಮರೂಪಿಗಳಾದ ಬಹುಮಂದಿ ರಾಕ್ಷಸರನ್ನು ಸಂಹಾರಮಾಡಿದನು. ರಾಮನು ಜನಸ್ಥಾನದಲ್ಲಿ ನಡೆಸಿದ ಖರ ದೂಷಣ ಮುಂತಾದ ರಾಕ್ಷಸರ ವಧೆಯನ್ನು ಕೇಳಿ, ರಾವಣನು ಕೋಪದಿಂದ ಮಾಯಾಮೃಗದ ಮೂಲಕ ರಾಮನನ್ನು ವಂಚಿಸಿ, ಅವನ ಪತ್ನಿಯಾದ ಜಾನಕಿಯನ್ನು ಅಪಹರಿಸಿಬಿಟ್ಟನು (೯–೧೦). ಆಗ ರಾಮನು ನಿರ್ದೋಷಳಾದ ಸೀತಾದೇವಿಯನ್ನು ಅರಣ್ಯದಲ್ಲಿ ಹುಡುಕುತ್ತಿರುವಾಗ, ಸುಗ್ರೀವನೆಂಬ ಕಪೀಶ್ವರನೊಡನೆ ಸ್ನೇಹವು ಬೆಳೆಯಿತು. ಅನಂತರ ಮಹಾಬಲಾಢ್ಯನಾದ ರಾಮನು ವಾಲಿಯನ್ನು ಸಂಹಾರಮಾಡಿದನು (೧೧–೧೨). ವಾಲಿಯ ರಾಜ್ಯವನ್ನು ಸುಗ್ರೀವನಿಗೆ ಕೊಡಿಸಿದನು. ಸುಗ್ರೀವನ ಆಜ್ಞೆಯಿಂದ ಕಾಮರೂಪಿಗಳಾದ ಕಪಿಗಳು ಸಾವಿರಗಟ್ಟಲೆ ಹೋಗಿ ದಿಕ್ಕುದಿಕ್ಕುಗಳಲ್ಲಿಯೂ ಸೀತಾದೇವಿಯನ್ನು ಹುಡುಕುತ್ತಿರುವರು. ನಾನು ಸಂಪಾತಿಯ ಮಾತಿನಂತೆ ಈ ವಿಶಾಲಾಕ್ಷಿಗೋಸ್ಕರ ನೂರುಯೋಜನ ವಿಸ್ತಾರವಾದ ಸಮುದ್ರವನ್ನು ವೇಗದಿಂದ ಹಾರಿಬಂದೆನು (೧೩–೧೪). ರಾಘವನು ಯಾವ ರೂಪವನ್ನೂ ಯಾವ ಮೈಬಣ್ಣವನ್ನೂ ಯಾವ ದೇಹಕಾಂತಿಯನ್ನೂ ಸೀತೆಯ ಗುರುತಾಗಿ ಹೇಳಿದ್ದನೋ, ಅವೆಲ್ಲವೂ ಈಕೆಯಲ್ಲಿ ಕಂಡುಬರುತ್ತವೆ. ನಾನು ನಿಶ್ಚಯವಾಗಿಯೂ ಸೀತಾದೇವಿಯ ದರ್ಶನಮಾಡಿದೆನು!" ಹೀಗೆ ಹೇಳಿ ಆಂಜನೇಯನು ಸುಮ್ಮನಾದನು (೧೫–೧೬). ಇದನ್ನು ಕೇಳಿ ಸೀತೆಗೆ ಪರಮಾಶ್ಚರ್ಯವಾಯಿತು. ಅವಳು ಎಲ್ಲಾ ದಿಕ್ಕಿಗೂ ತಿರುಗಿ ನೋಡುತ್ತ,

ಕೇಶಸಂವೃತವಾದ ತನ್ನ ಮುಖವನ್ನು ಮೇಲೆತ್ತಿ ಶಿಂಶಪಾವೃಕ್ಷದ ಕಡೆಗೆ ದೃಷ್ಟಿಯನ್ನು ಹೊರಳಿಸಿದಳು. ಸದಾ ರಾಮಧ್ಯಾನವನ್ನು ಮಾಡುತ್ತಿದ್ದ ಆಕೆಗೆ ಶ್ರೀರಾಮವೃತ್ತಾಂತವನ್ನು ಕೇಳಿ ಬಹಳ ಹರ್ಷವಾಯಿತು (೧೭–೧೮). ಅವಳು ಒಮ್ಮೆ ಪಕ್ಕಕ್ಕೆ ತಿರುಗಿ ನೋಡುವಳು. ಒಮ್ಮೆ ಮೇಲೆ ನೋಡುವಳು. ಒಮ್ಮೆ ಕೆಳಗೆ ನೋಡುವಳು. ಹೀಗೆ ನೋಡುತ್ತ ನೋಡುತ್ತ ಕಡೆಗೆ ಮಹಾ ಬುದ್ಧಿಶಾಲಿಯೂ ಸುಗ್ರೀವನ ಮಂತ್ರಿಯೂ ವಾಯುಪುತ್ರನೂ ಆದ ಹನುಮಂತನು ಶಿಂಶಪಾವೃಕ್ಷದಲ್ಲಿ ಕುಳಿತಿರುವುದನ್ನು ಕಂಡಳು (೧೯).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಮೂವತ್ತೊಂದನೆಯ ಸರ್ಗ

---

## ಸರ್ಗ ೩೨

ಸೀತೆಯು ಹನುಮಂತನನ್ನು ಕಂಡು ಭಯದಿಂದ, ತನಗೆ ದುಃಸ್ವಪ್ನವಾಗುತ್ತಿದೆ ಯೆಂದು ಭ್ರಮಿಸುವುದು. ರಾಮವೃತ್ತಾಂತವೆಲ್ಲವೂ ಸತ್ಯವಾಗಲೆಂದು ಬ್ರಹ್ಮಾದಿದೇವತೆಗಳನ್ನು ಪ್ರಾರ್ಥಿಸುವುದು.

ಆ ಮರದಲ್ಲಿ ಮರೆಯಾಗಿ ಕುಳಿತಿದ್ದ ಕಪಿಯನ್ನು ಕಂಡೊಡನೆ ಸೀತೆಯ ಮನಸ್ಸು ನಡುಗಿಹೋಯಿತು. ಆ ಕಪಿಯು ಬಿಳಿಯ ವಸ್ತ್ರವನ್ನುಟ್ಟು ಮಿಂಚಿನಂತೆ ಪಿಂಗಳ ವರ್ಣವಾಗಿ ಹೊಳೆಯುತ್ತಿದೆ! ವಿನಯದಿಂದ ನಮ್ರವಾಗಿ ಕುಳಿತು ಪ್ರಿಯವಾದ ಮಾತನ್ನಾಡುತ್ತಿದೆ! ಅರಳಿದ ಅಶೋಕಪುಷ್ಪದಂತೆ ದೇಹಕಾಂತಿಯುಳ್ಳದ್ದಾಗಿ ಪುಟವಿಕ್ಕಿದ ಚಿನ್ನದಂತೆ ಅದರ ಕಣ್ಣು ಥಳಥಳಿಸುತ್ತಿದೆ! (೧–೨). "ಅಬ್ಬಾ! ಈ ಕಪಿಯ ರೂಪ ಭಯಂಕರವಾಗಿದೆ. ನೋಡಲೂ ಸಾಧ್ಯವಿಲ್ಲ" ಎಂದುಕೊಳ್ಳುತ್ತಾ ಮೈಥಿಲಿಯು ಎಚ್ಚರದಪ್ಪಿದಂತಾದಳು. ಭಯದಿಂದ ಕಂಗೆಟ್ಟು ಕರುಣಸ್ವರದಿಂದ 'ಹಾ ರಾಮ, ಹಾ ಲಕ್ಷ್ಮಣ' ಎನ್ನುತ್ತ ಮೆಲ್ಲನೆ ಅಳಲಾರಂಭಿಸಿದಳು(೩–೫). ಸಮೀಪದಲ್ಲಿ ವಿನೀತನಾಗಿ ಕುಳಿತಿದ್ದ ಆಂಜನೇಯನನ್ನು ಕಂಡು ತನಗೆ ಸ್ವಪ್ನವೇ ಆಗುತ್ತಿದೆಯೆಂದು ಅವಳಿಗೆ ಅನ್ನಿಸಿತು. ಅವಳು ವಕ್ರವಾದ ದೊಡ್ಡ ಮುಖವುಳ್ಳವನೂ ಸುಗ್ರೀವನ ಆಜ್ಞಾಧಾರಕನಾದ ಅಮಾತ್ಯನೂ ಬುದ್ಧಿವಂತರಲ್ಲಿ ಅಗ್ರೇಸರನೂ ಆದ ವಾಯುಪುತ್ರನನ್ನು ದಿಟ್ಟಿಸಿ

ನೋಡಿದಳು. ಮತ್ತೆ ಸೀತೆಯು ಎಚ್ಚರದಪ್ಪಿ ಮೃತಪ್ರಾಯಳಂತಾಗಿ, ಬಹಳ ಹೊತ್ತಿನಮೇಲೆ ಚೇತರಿಸಿಕೊಂಡು ಚಿಂತಿಸತೊಡಗಿದಳು (೬–೮): "ನಾನು ಸ್ವಪ್ನದಲ್ಲಿ ಈ ವಿಕಾರರೂಪದ ಕೋತಿಯನ್ನು ಕಂಡೆನು! ಇದು ದುಃಸ್ವಪ್ನವೆಂದು ಶಾಸ್ತ್ರದಲ್ಲಿ ನಿಷಿದ್ಧವಾಗಿದೆ. ರಾಮಲಕ್ಷ್ಮಣರಿಗೂ ನನ್ನ ತಂದೆ ಜನಕರಾಜನಿಗೂ ಮಂಗಳವಾಗಲಿ! (೯). ಅಥವಾ ಇದು ಸ್ವಪ್ನವಾಗಿರಲಿಕ್ಕಿಲ್ಲ. ದುಃಖದಿಂದ ಕುದಿಯುತ್ತಿರುವ ನನಗೆ ನಿದ್ರೆಯೇ ಬರುವುದಿಲ್ಲ. ಪೂರ್ಣಚಂದ್ರನಂತೆ ಮುಖವುಳ್ಳ ನನ್ನ ಪ್ರಿಯನನ್ನು ಅಗಲಿದಮೇಲೆ ನನಗೆ ಸಂತೋಷವೆಲ್ಲಿದೆ? (೧೦). ಯಾವಾಗಲೂ 'ರಾಮ ರಾಮ' ಎಂದುಕೊಳ್ಳುತ್ತ ರಾಮನನ್ನೇ ಧ್ಯಾನಿಸುತ್ತಿರುವ ನನಗೆ, ಅದಕ್ಕೆ ಅನುಗುಣವಾಗಿ ರಾಮನ ಕಥೆಯೇ ಕಣ್ಣಿಗೆ ಕಟ್ಟಿದಂತಾಗುತ್ತದೆ! ರಾಮನ ಕಥೆಯನ್ನೇ ಕೇಳಿದಂತಾಗುತ್ತದೆ! ಮನ್ಮಥಪೀಡಿತಳಾದ ನನ್ನ ಮನಸ್ಸೆಲ್ಲವೂ ಅವನಲ್ಲಿಯೇ ನೆಟ್ಟುಹೋಗಿದೆ. ಅವನನ್ನೇ ಸದಾ ಚಿಂತಿಸುತ್ತಿರುವುದರಿಂದ ನನಗೆ ಹೀಗೆ ಕಾಣಿಸುತ್ತಿದೆ (೧೧–೧೨). ಇದೆಲ್ಲವೂ ಮನೋರಾಜ್ಯವೇ ಸರಿ. ವಿಚಾರಮಾಡಿದರೂ ಇದು ಭ್ರಾಂತಿಯೆಂದೇ ತೋರುತ್ತದೆ. ಒಂದು ವೇಳೆ ಇದು ಮನೋರಾಜ್ಯವೇ ಆದರೆ, ಎದುರಿಗೆ ಕಪಿಯ ರೂಪ ಸರಿಯಾಗಿ ಕಾಣುತ್ತಿರಲು ಕಾರಣವೇನು? ಇದು ಸ್ಪಷ್ಟವಾಗಿ ಮಾತನಾಡುತ್ತಿರುವುದಲ್ಲ! ಹೇ ಬೃಹಸ್ಪತಿ! ದೇವೇಂದ್ರ! ಬ್ರಹ್ಮದೇವ! ಅಗ್ನಿದೇವ! ನಿಮ್ಮೆಲ್ಲರಿಗೂ ಅಡ್ಡಬೀಳುತ್ತೇನೆ. ಈ ವಾನರನು ಹೇಳಿದುದೆಲ್ಲಾ ಸತ್ಯವಾಗಲಿ! ಎಂದಿಗೂ ಸುಳ್ಳಾಗದಿರಲಿ!" ಎಂದು ಪ್ರಾರ್ಥಿಸುತ್ತಿದ್ದಳು (೧೩–೧೪).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಮೂವತ್ತೆರಡನೆಯ ಸರ್ಗ

# ಸರ್ಗ ೩೩

ಹನುಮಂತನು ಮರದಿಂದ ಸ್ವಲ್ಪ ಕೆಳಕ್ಕಿಳಿದು ಬಂದು ಸೀತಾವೃತ್ತಾಂತವನ್ನು ವಿಚಾರಿಸಲಾಗಿ, ಅವಳು ತನ್ನ ವೃತ್ತಾಂತವನ್ನು ಹೇಳುವುದು.

ಆಮೇಲೆ ಹನುಮಂತನು ದೇವಿಗೆ ನಮಸ್ಕರಿಸಿ ವಿನೀತನಾಗಿ ದೈನ್ಯಭಾವ ದಿಂದ ಅವಳಿಗೆ ಸಮೀಪದಲ್ಲಿದ್ದ ಕೊಂಬೆಗೆ ಇಳಿದುಬಂದನು. ಆ ಮಹಾ ತೇಜಸ್ವಿಯು ತಲೆಯಮೇಲೆ ಕೈಜೋಡಿಸಿಕೊಂಡು ಮಧುರವಚನದಿಂದ ಪ್ರಶ್ನೆ ಮಾಡಿದನು (೧-೨): "ಎಲೌ ಪದ್ಮನೇತ್ರೆ, ನೀನು ಯಾರು? ಮಾಸಿದ ಸೀರೆಯನ್ನುಟ್ಟು ಮರದ ಕೊಂಬೆಯನ್ನು ಹಿಡಿದು ಏಕೆ ನಿಂತಿರುವೆ? ತಾವರೆಯ ದಳಗಳಿಂದ ನೀರು ಸುರಿಯುವಂತೆ, ನಿನ್ನ ಕಣ್ಣುಗಳಿಂದ ಕಂಬನಿಯು ಸುರಿಯು ತ್ತಿರುವುದೇಕೆ? ಶೋಭನಾಂಗಿ, ನೀನು ದೇವಕನ್ಯೆಯೊ? ದಾನವಕನ್ಯೆಯೊ? ಅಥವಾ ನಾಗ, ಗಂಧರ್ವ, ರಾಕ್ಷಸ, ಯಕ್ಷ, ಕಿನ್ನರರಲ್ಲಿ ಒಬ್ಬಳೊ? (೩-೫). ಅಥವಾ ರುದ್ರ, ಮರುತ್ತು, ವಸುಗಳಲ್ಲಿ ಸೇರಿದವಳೊ? ಸಾಕ್ಷಾತ್ ದೇವತೆಯಂತೆ ಕಾಣಿಸುತ್ತಿದ್ದೀಯೆ. ಒಂದು ವೇಳೆ ನೀನು ಚಂದ್ರನನ್ನಗಲಿ ಸ್ವರ್ಗದಿಂದ ಕೆಳಗೆ ಬಂದ ತಾರಾಮಣಿಯಾದ ರೋಹಿಣಿಯೊ? (೬-೭). ಹೇ ಕಲ್ಯಾಣಿ, ನೀನು ಯಾರು? ಕೋಪದಿಂದಲೊ ಅಜ್ಞಾನದಿಂದಲೊ ವಸಿಷ್ಠಮುನಿಯನ್ನು ರೇಗಿಸಿ ಹೊರಟುಬಂದ ಅರುಂಧತಿಯಾಗಿರಬಹುದೆ? ನಿನ್ನ ಮಗನಾಗಲಿ, ತಂದೆಯಾಗಲಿ, ಸೋದರನಾಗಲಿ, ಪತಿಯಾಗಲಿ ನಿನ್ನನ್ನಗಲಿ ಪರಲೋಕವನ್ನು ಸೇರಿದನೆಂದು ದುಃಖಿಸುತ್ತಿರುವೆಯಾ? (೮-೯). ನೀನು ಅಳುತ್ತಿರುವುದರಿಂದಲೂ ನಿಟ್ಟುಸಿರು ಬಿಡುತ್ತಿರುವುದರಿಂದಲೂ ನೆಲದಮೇಲೆ ನಿಂತಿರುವುದರಿಂದಲೂ ಶ್ರೀರಾಮನ ಹೆಸರನ್ನು ಹೇಳುತ್ತಿರುವುದರಿಂದಲೂ ನೀನು ದೇವತೆಯಲ್ಲವೆಂದು ನನ್ನ ಭಾವನೆ. ನಿನ್ನ ದೇಹಲಕ್ಷಣಗಳನ್ನು ಗಮನಿಸಿದರೆ ನೀನು ರಾಜಪತ್ನಿಯೆಂದೂ ರಾಜ ಕುಮಾರಿಯೆಂದೂ ತೋರುತ್ತದೆ (೧೦-೧೧). ಒಂದು ವೇಳೆ ರಾವಣನು ಜನ ಸ್ಥಾನದಿಂದ ಅಪಹರಿಸಿ ತಂದ ಸೀತೆಯೇ ನೀನಾಗಿದ್ದ ಪಕ್ಷದಲ್ಲಿ—ದೇವಿ, ನಿನಗೆ ಮಂಗಳವಾಗಲಿ! ಆ ವಿಷಯವನ್ನು ನನಗೆ ಹೇಳು. ನಿನ್ನ ದೀನಸ್ಥಿತಿಯನ್ನೂ ಮನುಷ್ಯರಿಗೆ ದುರ್ಲಭವಾದ ಈ ರೂಪವನ್ನೂ ತಾಪಸವೇಷವನ್ನೂ ನೋಡಿದರೆ, ನೀನು ಶ್ರೀರಾಮನ ಪತ್ನಿಯೆಂಬುದೇ ನಿಶ್ಚಯ" ಎಂದನು (೧೨-೧೩).

ಶ್ರೀರಾಮನ ಹೆಸರನ್ನು ಕೇಳಿದಕೂಡಲೆ ಸೀತೆಯು ಆನಂದಭರಿತಳಾಗಿ, ಮರದ ಮೇಲಿದ್ದ ಹನುಮಂತನನ್ನು ಕುರಿತು ಹೀಗೆಂದಳು: "ನಾನು ಶತ್ರುಸಂಹಾರಕನಾದ ದಶರಥಮಹಾರಾಜನ ಸೊಸೆ; ಮಹಾತ್ಮನಾದ ಜನಕಮಹಾರಾಜನ ಮಗಳು (೧೪–೧೬). ನನ್ನ ಹೆಸರು ಸೀತೆ; ನಾನು ಧೀಮಂತನಾದ ಶ್ರೀರಾಮನ ಪತ್ನಿ. ದಶರಥಮಹಾರಾಜನ ಅರಮನೆಯಲ್ಲಿ ಸಕಲ ಮಾನುಷಭೋಗಗಳನ್ನೂ ಅನುಭವಿಸುತ್ತ ಹನ್ನೆರಡು ವರ್ಷಗಳ ಕಾಲ ನಾನು ಸುಖವಾಗಿದ್ದೆನು. ಹದಿಮೂರನೆಯ ವರ್ಷದಲ್ಲಿ ದಶರಥಮಹಾರಾಜನು ನನ್ನ ಪತಿಯಾದ ಶ್ರೀರಾಮಚಂದ್ರನಿಗೆ ಪಟ್ಟಾಭಿಷೇಕಮಾಡಬೇಕೆಂದು ಪುರೋಹಿತರಾದ ವಸಿಷ್ಠರೊಡನೆ ಕಲೆತು ಪ್ರಯತ್ನಮಾಡಿದನು (೧೭–೧೯). ಪಟ್ಟಾಭಿಷೇಕಕ್ಕೆ ಸಿದ್ಧತೆಯನ್ನು ಮಾಡುತ್ತಿರುವಾಗ, ದಶರಥರಾಜನ ಪತ್ನಿಯರಲ್ಲೊಬ್ಬಳಾದ ಕೈಕೇಯಿಯು ತನ್ನ ಪತಿಯನ್ನು ಕಂಡು 'ಮಹಾರಾಜ, ರಾಮನಿಗೆ ಪಟ್ಟಾಭಿಷೇಕಮಾಡುವುದಾದರೆ ನಾನು ಅನ್ನಪಾನಗಳನ್ನೇ ಮುಟ್ಟುವುದಿಲ್ಲ. ಹೀಗೆಯೇ ನನ್ನ ಜೀವಿತವು ಕೊನೆಗೊಳ್ಳುವುದೆಂದು ತಿಳಿ. ಹಿಂದೆ ನೀನು ಕೊಟ್ಟಮಾತು ಸುಳ್ಳಾಗಬಾರದೆಂದಿದ್ದರೆ, ರಾಮನು ಕಾಡಿಗೆ ಹೋಗಲಿ' ಎಂದಳು (೨೦–೨೧). ಸತ್ಯಸಂಧನಾದ ಮಹಾರಾಜನು ಕೈಕೇಯಿಗೆ ಕೊಟ್ಟಿದ್ದ ವರವನ್ನು ಜ್ಞಾಪಿಸಿಕೊಂಡು ಕ್ರೂರವಾದ ಅವಳ ಮಾತನ್ನು ಕೇಳುತ್ತಲೇ ಮೂರ್ಛೆಹೊಂದಿದನು. ವೃದ್ಧನಾದ ದಶರಥರಾಜನು ಸತ್ಯಧರ್ಮಗಳಿಂದ ಎಂದೂ ತಪ್ಪಿ ನಡೆದವನಲ್ಲ. ಅವನು ಜ್ಯೇಷ್ಠಪುತ್ರನಾದ ರಾಮನನ್ನು ಕರೆದು, ತಾನು ಕೊಡಬೇಕೆಂದಿದ್ದ ರಾಜ್ಯವನ್ನು ತನಗೇ ಕೊಡಬೇಕೆಂದು ಅಳುತ್ತ ಬೇಡಿಕೊಂಡನು. ಆಗ ಶ್ರೀರಾಮನು ಪಟ್ಟಾಭಿಷೇಕಕ್ಕಿಂತಲೂ ಪಿತೃವಾಕ್ಯಪಾಲನೆಯೇ ಪರಮಪ್ರಿಯವೆಂದು ತಿಳಿದು ಮನಃಪೂರ್ವಕವಾಗಿ ತಂದೆಯ ಮಾತನ್ನು ಒಪ್ಪಿಕೊಂಡನು (೨೨–೨೪). ಸತ್ಯಪರಾಕ್ರಮನಾದ ಶ್ರೀರಾಮನು ಬೇರೆಯವರಿಗೆ ಕೊಡುವವನೇ ಹೊರತು ತಾನು ಕೈನೀಡಿ ತೆಗೆದುಕೊಳ್ಳತಕ್ಕವನಲ್ಲ. ಎಂದಿಗೂ ಅಪ್ರಿಯವಾದ ಮಾತನ್ನು ಆಡತಕ್ಕವನಲ್ಲ. ಪ್ರಾಣಕ್ಕೆ ಅಪಾಯ ಒದಗಿದರೂ ತಪ್ಪಿ ನಡೆಯುವುದಿಲ್ಲ. ಆ ಕೀರ್ತಿವಂತನು ಕೂಡಲೇ ರಾಜಯೋಗ್ಯವಾದ ಉತ್ತಮ ವಸ್ತ್ರಗಳನ್ನು ತೆಗೆದುಹಾಕಿದನು (೨೫–೨೬). ಮನಸ್ಸಿನಲ್ಲಿಯೂ ರಾಜ್ಯವನ್ನು ಬಯಸದೆ, ನನ್ನನ್ನು ಕರೆದು ಕೌಸಲ್ಯೆಯ ಬಳಿ ಇರುವಂತೆ ಸೂಚಿಸಿದನು. ಆದರೆ ನಾನು ಅವನಿಗಿಂತ

ಮುಂದೆ ವನವಾಸಕ್ಕೆ ಸಿದ್ಧಳಾಗಿ ಹೊರಟುಬಿಟ್ಟೆನು (೨೭). ರಾಮನನ್ನು ಬಿಟ್ಟು ಸ್ವರ್ಗದಲ್ಲಿ ಇರಬೇಕೆಂದರೂ ನನಗೆ ರುಚಿಸದು. ಮಹಾತ್ಮನಾದ ಲಕ್ಷ್ಮಣನೂ ಕೂಡ ಅಣ್ಣನಿಗಿಂತ ಮೊದಲೇ ಅರಣ್ಯಯಾತ್ರೆಗೆ ಸಿದ್ಧನಾಗಿ, ನಾರುಬಟ್ಟೆ ಯನ್ನುಟ್ಟುಕೊಂಡಿದ್ದನು (೨೮–೨೯). ಹೀಗೆ ನಾವು ಮೂವರೂ ರಾಜಾಜ್ಞೆ ಯನ್ನು ಶಿರಸಾವಹಿಸಿ ದೃಢನಿಶ್ಚಯದಿಂದ ಹಿಂದೆ ಯಾವಾಗಲೂ ನೋಡದಿದ್ದ ಭಯಂಕರವಾದ ಅರಣ್ಯವನ್ನು ಪ್ರವೇಶಿಸಿದೆವು. ದಂಡಕಾರಣ್ಯದಲ್ಲಿರುವಾಗ ಶ್ರೀರಾಮನ ಪತ್ನಿಯಾದ ನನ್ನನ್ನು ದುರಾತ್ಮನಾದ ರಾವಣನು ಇಲ್ಲಿಗೆ ಕದ್ದು ತಂದಿದ್ದಾನೆ. ನನ್ನ ಪ್ರಾಣ ಉಳಿಯುವುದಕ್ಕೆ ಇನ್ನು ಎರಡು ತಿಂಗಳು ಅವಧಿ ಯನ್ನು ಕೊಟ್ಟಿದ್ದಾನೆ. ಎರಡು ತಿಂಗಳಾದಮೇಲೆ ನಾನು ಪ್ರಾಣವನ್ನು ಒಪ್ಪಿಸ ಬೇಕು" ಎಂದಳು (೩೦–೩೧).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಮೂವತ್ತುಮೂರನೆಯ ಸರ್ಗ

---

## ಸರ್ಗ ೩೪

ಹನುಮಂತನು ರಾಮಲಕ್ಷ್ಮಣರ ಕುಶಲವನ್ನು ಹೇಳಿ ಸೀತೆಯ ಸಮೀಪಕ್ಕೆ ಹೋಗುವುದು. ಸೀತೆಯು ಅವನು ರಾವಣನೆಂದು ಭ್ರಮಿಸಿ ಗಾಬರಿ ಗೊಳ್ಳುವುದು. ಅವಳಿಗೆ ವಿಶ್ವಾಸವನ್ನು ಹುಟ್ಟಿಸುವುದಕ್ಕಾಗಿ ಹನುಮಂತನು ರಾಮನ ಗುಣಗಳನ್ನು ವರ್ಣಿಸುವುದು.

ಆಂಜನೇಯನು ದುಖದಿಂದ ಬೆಂದುಹೋಗಿರುವ ಸೀತೆಯ ಮಾತನ್ನು ಕೇಳಿ ಸಂತವಿಡುತ್ತ "ದೇವಿ, ನಾನು ರಾಮನ ಸಂದೇಶವನ್ನು ತಂದಿರುವ ದೂತನು. ಶ್ರೀರಾಮನು ಕುಶಲದಿಂದಿರುವನು. ನಿನ್ನ ಕುಶಲವನ್ನು ವಿಚಾರಿಸ ಬೇಕೆಂದು ಹೇಳಿದ್ದಾನೆ (೧–೨). ಬ್ರಹ್ಮಾಸ್ತ್ರವನ್ನೂ ಸಕಲವೇದಗಳನ್ನೂ ಬಲ್ಲವನಾಗಿ ವೇದವಿದರಲ್ಲಿ ಮೇಲೆನಿಸಿಕೊಂಡ ದಶರಥಪುತ್ರನಾದ ರಾಮನೇ ನಿನಗೆ ಕುಶಲವನ್ನು ಹೇಳಿಕಳಿಸಿರುತ್ತಾನೆ. ನಿನ್ನ ಪತಿಗೆ ಪ್ರಿಯನಾಗಿ ಸೇವೆ ಯನ್ನು ಸಲ್ಲಿಸುತ್ತಿರುವ ಮಹಾತೇಜಸ್ವಿಯಾದ ಲಕ್ಷ್ಮಣನೂ ಅತ್ಯಂತ ದುಃಖ ದಿಂದ ತಪಿಸುತ್ತ, ತಲೆಬಾಗಿ ನಿನಗೆ ನಮಸ್ಕರಿಸಿದ್ದೇನೆಂದು ಹೇಳಿಕಳಿಸಿದ್ದಾನೆ"

ಎಂದನು (೩–೪). ಆ ನರಶ್ರೇಷ್ಠರಿಬ್ಬರ ಕುಶಲವನ್ನು ಕೇಳಿದೊಡನೆ ಸೀತೆಯು ಸಂತೋಷದಿಂದ ಉಬ್ಬಿಹೋದಳು. "ಆಹಾ! ಮನುಷ್ಯನು ಸಾಯದೆ ಬದುಕಿದ್ದರೆ, ನೂರು ವರ್ಷಗಳಿಗಾದರೂ ಒಮ್ಮೆ ಸುಖದ ದಿನವನ್ನು ಕಾಣುತ್ತಾನೆ—ಎಂಬ ಹೇಳಿಕೆ ಸತ್ಯವಾಗಿಯೇ ತೋರುತ್ತದೆ!" ಎಂದಳು (೫–೬). ಅವಳಿಗೆ ಬಹಳ ಆನಂದವಾಯಿತು. ವೈದೇಹಿಗೂ ಹನುಮಂತನಿಗೂ ಪರಸ್ಪರವಾಗಿ ನಂಬಿಕೆಯು ಹುಟ್ಟಲು, ಅವರೀರ್ವರೂ ಮಾತನಾಡತೊಡಗಿದರು. ಸೀತೆಯ ಮಾತನ್ನು ಕೇಳುತ್ತ ಹನುಮಂತನು ಮೆಲ್ಲಮೆಲ್ಲನೆ ಅವಳ ಸಮೀಪಕ್ಕೆ ಬರತೊಡಗಿದನು (೭–೮). ಅವನು ಮುಂದೆ ಮುಂದೆ ಬಂದಹಾಗೆ, ಅವನು ರಾವಣನಾಗಿರಬಹುದೆಂದು ಸೀತೆಗೆ ಭಯವಾಯಿತು. "ಅಯ್ಯೋ, ನನ್ನ ಪಾಪಕರ್ಮವೆ! ಇವನೊಡನೆ ಮಾತನಾಡಿದ್ದು ತಪ್ಪಾಯಿತು. ಅದೇ ರಾವಣನೇ ಈ ವೇಷದಿಂದ ಬಂದಿದ್ದಾನೆ!" ಎಂದುಕೊಳ್ಳುತ್ತ ತಾನು ಹಿಡಿದುಕೊಂಡಿದ್ದ ಅಶೋಕವೃಕ್ಷದ ಕೊಂಬೆಯನ್ನು ಬಿಟ್ಟು ದುಃಖದಿಂದ ನೆಲದಮೇಲೆ ಕುಸಿದುಹೋದಳು (೯–೧೧). ಭಯದಿಂದ ಕಂಗೆಟ್ಟ ಸೀತೆಯನ್ನು ಕಂಡು ಹನುಮಂತನು ಮತ್ತೆ ನಮಸ್ಕರಿಸಿದನು. ಸೀತೆಯಾದರೋ ಭಯದಿಂದ ಅವನನ್ನು ಕಣ್ಣೆತ್ತಿಯೂ ನೋಡಲಿಲ್ಲ. ಮತ್ತೆ ಮತ್ತೆ ಹನುಮಂತನು ನಮಸ್ಕರಿಸುತ್ತಿರಲು, ಜಾನಕಿಯು ದೀರ್ಘವಾಗಿ ನಿಟ್ಟುಸಿರು ಬಿಟ್ಟು, "ರಾವಣ! ನೀನು ತಿರುಗಿ ಇನ್ನೊಂದು ಮಾಯೆಯನ್ನವಲಂಬಿಸಿ ನನ್ನನ್ನು ಪೀಡಿಸುವುದಕ್ಕೆ ಬಂದೆಯಾ? ಇದು ನಿನಗೆ ತರವಲ್ಲ. ನಿನ್ನ ನಿಜರೂಪವನ್ನು ತ್ಯಜಿಸಿ ಕಪಟ ಸಂನ್ಯಾಸಿಯ ವೇಷದಿಂದ ಜನಸ್ಥಾನಕ್ಕೆ ಬಂದ ರಾವಣನೇ ನೀನು! (೧೨–೧೫). ರಾಕ್ಷಸ! ಉಪವಾಸದಿಂದ ಕೃಶಳಾಗಿ ಕೊರಗುತ್ತಿರುವ ನನ್ನನ್ನು, ಮೇಲೆ ಮೇಲೆ ಹೀಗೆ ಸಂಕಟಪಡಿಸುವುದು ನಿನಗೆ ತರವಲ್ಲ" ಎಂದಳು. ಆಮೇಲೆ "ನಾನು ಭಯಪಡುವುದು ಸರಿಯಲ್ಲ. ನಿನ್ನ ದರ್ಶನದಿಂದ ನನಗೆ ಏನೋ ಒಂದು ಬಗೆಯ ಆಹ್ಲಾದವಾಗಿದೆ. ನೀನು ರಾಮದೂತನೇ ಆದರೆ, ನಿನಗೆ ಶುಭವಾಗಲಿ! (೧೬–೧೮). ಎಲೈ ಕಪಿಶ್ರೇಷ್ಠನೆ, ರಾಮನ ಕಥೆಯನ್ನು ಇನ್ನೂ ಹೇಳು. ನನಗೆ ಅದು ಬಹುಪ್ರಿಯವಾದದ್ದು. ನನ್ನ ಪ್ರಿಯನ ಸದ್ಗುಣಗಳನ್ನು ವರ್ಣಿಸು. ಸೌಮ್ಯ, ಪ್ರವಾಹವೇಗವು ನದಿಯ ದಡವನ್ನು ಸೆಳೆದೊಯ್ಯುವಂತೆ ನನ್ನ ಮನಸ್ಸನ್ನು ಎಳೆಯುತ್ತಿದ್ದೀಯೆ. ಆಹಾ! ಸ್ವಪ್ನದಲ್ಲಿ ಎಷ್ಟು

ಸುಖ! ರಾಮನು ಕಪಿಯನ್ನು ದೂತನನ್ನಾಗಿ ಕಳಿಸಿದ್ದಾನೆ! ಆ ದೂತನನ್ನು ನಾನು ನೋಡುತ್ತಿದ್ದೇನೆ! (೧೯–೨೦). ಈ ಸ್ವಪ್ನದಲ್ಲಾದರೂ ನನಗೆ ರಾಮ ಲಕ್ಷ್ಮಣರು ಕಾಣಿಸಬಾರದೆ! ಸ್ವಪ್ನಕ್ಕೂ ನನ್ನನ್ನು ಕಂಡರಾಗದು! ಅಥವಾ ಇದು ಸ್ವಪ್ನವಲ್ಲ. ಸ್ವಪ್ನದಲ್ಲಿ ಕಪಿಯನ್ನು ಕಂಡರೆ ಒಳ್ಳೆಯದಾಗುವುದಿಲ್ಲ. ನನಗೆ ಒಳ್ಳೆಯದೇ ಆಗಿದೆ! (–ರಾಮಕಥೆಯನ್ನು ಕೇಳಿ ಸಂತೋಷವಾಗಿದೆ.) ಇದೇನು ಚಿತ್ತಭ್ರಮೆಯೊ? ಭೂತಬಾಧೆಯೊ? (೨೧–೨೩). ಉನ್ಮಾದವೊ? ಅಥವಾ ಬರಿಯ ಬಿಸಿಲ್ಗುದುರೆಯೊ? ಇಲ್ಲ ಇಲ್ಲ. ಇದು ಚಿತ್ತಭ್ರಮೆಯಲ್ಲ. ಉನ್ಮಾದವೂ ಅಲ್ಲ (೨೪). ನಾನು ಬುದ್ಧಿಗೆಟ್ಟಿಲ್ಲವೆಂದು ಸರಿಯಾಗಿ ಗೊತ್ತಿದೆ. ಕಪಿಯನ್ನು ಕಣ್ಣಾರೆ ನೋಡುತ್ತಿದ್ದೇನೆ" ಎಂಬುದಾಗಿ ಚಿಂತಿಸಿ, ಬಹಳ ಹೊತ್ತು ಯಾವುದು ಸತ್ಯವೆಂದು ತೂಕಮಾಡುತ್ತಾ ಇದ್ದಳು. ರಾಕ್ಷಸರು ಕಾಮರೂಪಿಗಳಾದ್ದರಿಂದ ಆ ವಾನರನು ರಾವಣನೇ ಸರಿಯೆಂದು ಕೊನೆಗೆ ನಿಶ್ಚಯಿಸಿದಳು. ಅನಂತರ ಜಾನಕಿಯು ಹನುಮಂತನೊಡನೆ ಮಾತನಾಡದೆ ಮೌನವಾಗಿದ್ದುಬಿಟ್ಟಳು (೨೫–೨೬). ಆಗ ಆಂಜನೇಯನು ಸೀತೆಯ ಮನೋಗತವನ್ನು ತಿಳಿದು ಕಿವಿಗೆ ಇಂಪಾದ ಮಾತುಗಳಿಂದ ಅವಳಿಗೆ ಹರ್ಷವನ್ನುಂಟುಮಾಡಲು ಆರಂಭಿಸಿದನು: "ಆಹಾ! ಶ್ರೀರಾಮನು ಸೂರ್ಯನಂತೆ ತೇಜಸ್ವಿ. ಚಂದ್ರನಂತೆ ಸಮಸ್ತರನ್ನೂ ಆಹ್ಲಾದಗೊಳಿಸುವವನು (೨೭–೨೮). ಕುಬೇರನಂತೆ ರಾಜಾಧಿರಾಜನೆನಿಸಿ ಕೊಂಡಿದ್ದಾನೆ. ಮಹಾವಿಷ್ಣುವಿನಂತೆ ಪರಾಕ್ರಮಶಾಲಿ. ಬೃಹಸ್ಪತಿಯಂತೆ ಸತ್ಯಸಂಧನೂ ಮಧುರವಾಗಿ ಮಾತನಾಡತಕ್ಕವನೂ ಆಗಿದ್ದಾನೆ. ಸಾಕ್ಷಾತ್ ಮನ್ಮಥನಂತೆ ರೂಪವಂತ, ಸೌಭಾಗ್ಯಶಾಲಿ, ಕಾಂತಿಯುಕ್ತ (೨೯–೩೦). ಶ್ರೀರಾಮನು ಕ್ರೋಧಯೋಗ್ಯವಾದ ಸಂದರ್ಭದಲ್ಲಿ ಮಾತ್ರ ಕ್ರುದ್ಧನಾಗಿ ಯುದ್ಧಮಾಡುವನು. ಈ ಲೋಕದಲ್ಲಿ ಸರ್ವೋತ್ತಮನಾದ ಮಹಾರಥನೆನಿಸಿ ಕೊಂಡಿದ್ದಾನೆ. ಆ ಮಹಾತ್ಮನು ತನ್ನ ಭುಜದ ನೆರಳಿನಲ್ಲಿ ಸಮಸ್ತಲೋಕಗಳನ್ನೂ ರಕ್ಷಿಸಬಲ್ಲನು. ಅಂತಹ ರಾಮನನ್ನು ಮಾಯಾಮೃಗದ ಮೂಲಕ ಆಶ್ರಮದಿಂದ ದೂರಕ್ಕೆ ಒಯ್ದು ಅವನಿಲ್ಲದ ವೇಳೆಯಲ್ಲಿ ನಿನ್ನನ್ನು ಕದ್ದುತಂದ ರಾವಣನಿಗೆ ತಕ್ಕ ಫಲವಾಗುವುದನ್ನು ಸದ್ಯದಲ್ಲಿಯೇ ನೋಡುತ್ತೀಯೆ (೩೧–೩೨). ಆ ವೀರನು ಶೀಘ್ರದಲ್ಲಿಯೇ ಕ್ರೋಧದಿಂದ ಯುದ್ಧರಂಗಕ್ಕಿಳಿದು, ಅಗ್ನಿಯಂತೆ ಜ್ವಲಿಸುವ ಅಸ್ತ್ರಗಳಿಂದ ರಾವಣನನ್ನು ವಧಿಸುವನು. ದೇವಿ, ನಾನು ರಾಮನಿಗೆ

ದೂತನಾಗಿ ನಿನ್ನ ಬಳಿಗೆ ಬಂದಿದ್ದೇನೆ. ಅವನು ನಿನ್ನ ವಿರಹದಿಂದ ದುಃಖಿತನಾಗಿ ನಿನ್ನ ಯೋಗಕ್ಷೇಮವನ್ನು ವಿಚಾರಿಸುವಂತೆ ಹೇಳಿಕಳಿಸಿದ್ದಾನೆ (೩೩–೩೪). ಸುಮಿತ್ರಾತನಯನೂ ಶೂರಾಗ್ರಣಿಯೂ ಆದ ಲಕ್ಷ್ಮಣನು ನಿನಗೆ ಅಭಿವಂದಿಸಿ ಕುಶಲವನ್ನು ವಿಚಾರಿಸುವಂತೆ ಹೇಳಿದ್ದಾನೆ. ದೇವಿ, ಶ್ರೀರಾಮನಿಗೆ ಮಿತ್ರನಾದ ಸುಗ್ರೀವನೆಂಬ ವಾನರೇಂದ್ರನೂ ಕೂಡ ನಿನ್ನ ಕ್ಷೇಮವನ್ನು ವಿಚಾರಿಸಬೇಕೆಂದು ಹೇಳಿದ್ದಾನೆ (೩೫–೩೬). ಶ್ರೀರಾಮ, ಲಕ್ಷ್ಮಣ, ಸುಗ್ರೀವ—ಈ ಮೂವರೂ ಸದಾ ನಿನ್ನ ವಿಷಯವನ್ನೇ ಚಿಂತಿಸುತ್ತಿರುವರು. ವೈದೇಹಿ, ಹೀಗೆ ರಾಕ್ಷಸಿಯರ ಕೈಗೆ ಸಿಕ್ಕಿದ್ದರೂ ನೀನು ಬದುಕಿರುವುದು ನಮ್ಮ ಭಾಗ್ಯ. ಸದ್ಯದಲ್ಲಿಯೇ ಮಹಾವೀರರಾದ ರಾಮಲಕ್ಷ್ಮಣರನ್ನೂ ಕೋಟಿಸಂಖ್ಯೆಯಲ್ಲಿ ವಾನರಸೈನ್ಯದೊಡನೆ ಬರುವ ಮಹಾತೇಜಸ್ವಿಯಾದ ಸುಗ್ರೀವನನ್ನೂ ನೀನು ನೋಡುವೆ (೩೭–೩೮). ನಾನು ಸುಗ್ರೀವನ ಮಂತ್ರಿ. ಹನುಮಂತನೆಂದು ನನ್ನ ಹೆಸರು. ಮಹಾಸಾಗರವನ್ನು ಹಾರಿ ಲಂಕಾನಗರಕ್ಕೆ ಬಂದಿದ್ದೇನೆ. ದುರಾತ್ಮನಾದ ರಾವಣನ ತಲೆಯನ್ನು ಕಾಲಿನಿಂದ ಮೆಟ್ಟಿ ನಿನ್ನನ್ನು ನೋಡಿ ಹೋಗಬೇಕೆಂದು ಸಾಹಸಮಾಡಿ ಬಂದಿದ್ದೇನೆ. ದೇವಿ, ನೀನು ಭ್ರಮಿಸಿದಂತೆ ನಾನು ರಾವಣನಲ್ಲ. ಸಂದೇಹವನ್ನು ಬಿಡು. ನನ್ನ ಮಾತನ್ನು ನಂಬು" ಎಂದು ಹೇಳಿದನು (೩೯–೪೧).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಮೂವತ್ತುನಾಲ್ಕನೆಯ ಸರ್ಗ

# ಸರ್ಗ ೩೫

ಸೀತೆಯು ಹನುಮಂತನನ್ನು ಕುರಿತು ರಾಮಲಕ್ಷ್ಮಣರ ರೂಪಲಕ್ಷಣಗಳನ್ನೂ
ಅವರಿಗೆ ಸುಗ್ರೀವನೊಡನೆ ಸ್ನೇಹವಾದ ಬಗೆಯನ್ನೂ ವಿಚಾರಿಸಲು
ಹನುಮಂತನು ಅದೆಲ್ಲವನ್ನೂ ತಿಳಿಸಿ ಸಮಾಧಾನಪಡಿಸುವುದು.

ಹೀಗೆ ಹನುಮಂತನು ಹೇಳಿದ ರಾಮಕಥೆಯನ್ನು ಕೇಳಿ ಜಾನಕಿಯು ಸಾಂತ್ವಪೂರ್ವಕವಾಗಿ "ಎಲೈ ವಾನರನೆ, ನೀನು ರಾಮನನ್ನು ಎಲ್ಲಿ ನೋಡಿದೆ? ಲಕ್ಷ್ಮಣನನ್ನು ಹೇಗೆ ಬಲ್ಲೆ? ಕಪಿಗಳಿಗೂ ಮನುಷ್ಯರಿಗೂ ಸ್ನೇಹವಾದದ್ದು ಹೇಗೆ? (೧–೨). ರಾಮಲಕ್ಷ್ಮಣರ ದೇಹಲಕ್ಷಣಗಳನ್ನು ಹೇಳು. ಅದರಿಂದ ನನ್ನ ಸಂದೇಹವು ನೀಗಿ ದುಃಖವು ಶಾಂತವಾದೀತು. ರಾಮನ ಆಕಾರ ಹೇಗಿದೆ? ಅವನ ಮೈಬಣ್ಣ ಎಂತಹುದು? ಅವನ ತೊಡೆಗಳೂ ಬಾಹುಗಳೂ ಹೇಗಿವೆ? ಹಾಗೆಯೇ ಲಕ್ಷ್ಮಣನ ರೂಪಲಕ್ಷಣಗಳನ್ನು ವಿವರಿಸು" ಎಂದಳು (೩–೪). ಆಗ ಹನುಮಂತನು ಹೇಳಲಾರಂಭಿಸಿದನು: "ವೈದೇಹಿ, ನಾನು ರಾಮದೂತನೆಂದು ಗೊತ್ತಾದರೂ ರಾಮಲಕ್ಷ್ಮಣರನ್ನು ವರ್ಣಿಸಿ ಹೇಳೆಂದು ಕೇಳುತ್ತಿರುವುದು ನನ್ನ ಭಾಗ್ಯದಿಂದಲೇ ಸರಿ. ನಾನು ಅವರಲ್ಲಿ ಕಂಡ ಲಕ್ಷಣಗಳನ್ನು ಹೇಳುತ್ತೇನೆ, ಕೇಳು (೫): ಶ್ರೀರಾಮನ ಕಣ್ಣುಗಳು ಕಮಲದಳದಂತೆ ಸುಂದರವಾಗಿವೆ. ಅವನನ್ನು ನೋಡಿದರೆ ಸಕಲ ಪ್ರಾಣಿಗಳಿಗೂ ಆನಂದವಾಗುತ್ತದೆ. ಸೌಂದರ್ಯ ದಾಕ್ಷಿಣ್ಯಗುಣಗಳು ಹುಟ್ಟುವಾಗಲೇ ಅವನಿಗೆ ಕೂಡಿಬಂದಿವೆ (೬–೮). ಅವನು ತೇಜಸ್ಸಿನಲ್ಲಿ ಸೂರ್ಯನಿಗೂ ತಾಳ್ಮೆಯಲ್ಲಿ ಭೂದೇವಿಗೂ ಸಮಾನನು. ಬುದ್ಧಿಯಲ್ಲಿ ಬೃಹಸ್ಪತಿಗೂ ಕೀರ್ತಿಯಲ್ಲಿ ದೇವೇಂದ್ರನಿಗೂ ಸಮಾನನು. ಸಮಸ್ತ ಪ್ರಾಣಿವರ್ಗವನ್ನೂ ರಕ್ಷಿಸಬಲ್ಲವನು. ಆಶ್ರಿತಜನರನ್ನು ಪಾಲಿಸತಕ್ಕವನು. ತನ್ನ ಕ್ಷತ್ರಿಯಧರ್ಮವನ್ನೂ ಲೋಕಧರ್ಮವನ್ನೂ ಪಾಲಿಸುತ್ತಿರುವನು (೯–೧೦). ಚಾತುರ್ವರ್ಣ್ಯದ ಕರ್ತವ್ಯವನ್ನೂ ಲೋಕಮರ್ಯಾದೆಯನ್ನೂ ನಡೆಸುತ್ತ, ಜನರೂ ಹಾಗೆಯೇ ನಡೆಸುವಂತೆ ನಿಯಮಿಸುತ್ತಿರುವನು. ಅವನು ತೇಜಸ್ವಿ; ಪೂಜಾರ್ಹ. ಈಗ ಬ್ರಹ್ಮಚರ್ಯವ್ರತದಲ್ಲಿದ್ದಾನೆ. ಸಜ್ಜನರಿಗೆ ಉಪಕಾರಮಾಡುತ್ತಾನೆ. ಕರ್ಮಗಳ ಅನುಷ್ಠಾನ ಕ್ರಮವನ್ನು ತಿಳಿದಿದ್ದಾನೆ (೧೧–೧೨). ಶ್ರೀರಾಮನು ರಾಜನೀತಿಯಲ್ಲಿ ಪಳಗಿರುವನು. ಬ್ರಾಹ್ಮಣರ ಸೇವೆಯಲ್ಲಿ ನಿರತನು. ವಿದ್ಯಾವಂತ; ಆಚಾರ

ಸಂಪನ್ನ; ವಿನಯಶಾಲಿ; ಶತ್ರುಘಾತಿ. ಅವನು ಯಜುರ್ವೇದದಲ್ಲಿ ವಿಶಾರದ. ಶ್ರೋತ್ರಿಯರಿಂದ ಪೂಜಿತ. ವೇದವೇದಾಂಗಗಳಲ್ಲಿಯೂ ಧನುರ್ವೇದದಲ್ಲಿಯೂ ಪಂಡಿತ (೧೩–೧೪). ದೇವಿ, ಶ್ರೀರಾಮನಿಗೆ ವಿಶಾಲವಾದ ಹೆಗಲು; ದೀರ್ಘವಾದ ಬಾಹು; ಶಂಖದಂತಹ ಕುತ್ತಿಗೆ; ಶುಭಲಕ್ಷಣಗಳಿರುವ ಮುಖ; ಮಾಂಸಪುಷ್ಟವಾದ್ದರಿಂದ ಕಾಣಿಸದಿರುವ ಭುಜದ ಕೀಲು; ಕೆಂಪಗಿರುವ ಕಡೆಗಣ್ಣು; ದುಂದುಭಿಯಂತೆ ಗಂಭೀರವಾದ ಧ್ವನಿ; ಹೊಳಪಾದ ಬಣ್ಣ; ಬಲಿಷ್ಠವಾದ ಸಮಪ್ರಮಾಣದ ದೇಹ; ಒಂದಕ್ಕೊಂದು ಅನುರೂಪವಾದ ಅವಯವ; ಮೈಬಣ್ಣ ಶ್ಯಾಮಲ (೧೫–೧೬). ಶ್ರೀರಾಮನ ಎದೆ, ಮಣಿಕಟ್ಟು, ಮುಷ್ಟಿ, ಇವು ಮೂರು ಗಟ್ಟಿಯಾಗಿವೆ. ಹುಬ್ಬು, ತೋಳು, ವೃಷಣಗಳು ಉದ್ದವಾಗಿವೆ.* ತಲೆಗೂದಲಿನ ಅಗ್ರಭಾಗ, ಎರಡು ವೃಷಣಗಳು, ಮೊಣಕಾಲುಗಳು ಒಂದೇ ಅಳತೆಯಲ್ಲಿವೆ. ನಾಭಿಯ ಮಧ್ಯಭಾಗ, ಹೊಟ್ಟೆ, ಎದೆಗಳು ಉಬ್ಬಿರುತ್ತವೆ. ಕಡೆಗಣ್ಣು, ಉಗುರು, ಅಂಗೈ, ಅಂಗಾಲುಗಳು ಕೆಂಪಾಗಿವೆ. ಪಾದರೇಖೆ, ಕೇಶ, ಲಿಂಗಮಣಿಗಳು ನುಣುವಾಗಿವೆ. ಕಂಠಧ್ವನಿ, ನಡಿಗೆ, ನಾಭಿಗಳು ಗಂಭೀರವಾಗಿವೆ (೧೭). ಉದರ, ಕಂಠಪ್ರದೇಶಗಳಲ್ಲಿ ತ್ರಿವಳಿಯೆಂಬ ಮೂರು ಮೂರು ರೇಖೆಗಳಿವೆ. ಅಂಗಾಲಿನ ಮಧ್ಯಭಾಗ, ಪಾದರೇಖೆ, ಸ್ತನಾಗ್ರಗಳು ಹಳ್ಳವಾಗಿವೆ. ಕುತ್ತಿಗೆ, ಶಿಶ್ನ, ಪೃಷ್ಠ, ಮೊಳಕಾಲು ಈ ನಾಲ್ಕೂ ಚಿಕ್ಕದಾಗಿವೆ. ತಲೆಯಲ್ಲಿ ಮೂರು ಸುಳಿಗಳಿವೆ. ಕೈ ಹೆಬ್ಬೆರಳಿನ ಕೆಳಗಡೆ ನಾಲ್ಕು ರೇಖೆಗಳಿವೆ.† ಶ್ರೀರಾಮನ ಹಣೆ, ಅಂಗೈ, ಅಂಗಾಲುಗಳಲ್ಲಿ ಆಯುಃಸೂಚಕಗಳಾದ ನಾಲ್ಕು ನಾಲ್ಕು ರೇಖೆಗಳುಂಟು. ಅವನ ದೇಹವು ನಾಲ್ಕು ಕಿಷ್ಕುಗಳಷ್ಟು (ತೊಂಬತ್ತಾರು ಅಂಗುಲ) ಎತ್ತರವಾಗಿದೆ. ತೋಳು, ತೊಡೆ, ಮೊಳಕಾಲು,

---

* ಹನುಮಂತನು ರಾಮನ ಅವಯವಗಳನ್ನೆಲ್ಲಾ ನೋಡಿದ್ದನೆಂದಾಗಲಿ, ಅವುಗಳನ್ನೆಲ್ಲಾ ಒಂದೊಂದಾಗಿ ವರ್ಣಿಸುತ್ತಾನೆ ಎಂದಾಗಲಿ ತಿಳಿಯಬಾರದು. ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿದ ಶುಭಲಕ್ಷಣಗಳು ರಾಮನಲ್ಲಿವೆಯೆಂದು ಅವನು ಹೇಳುತ್ತಿದ್ದಾನೆ. ಮೂಲದಲ್ಲಿ ಅವಯವಗಳ ವಿವರವಿಲ್ಲ. ಸೌಕರ್ಯಕ್ಕಾಗಿ ಕನ್ನಡದಲ್ಲಿ ಮಾತ್ರ ವಿವರಿಸಿ ಬರೆದಿದೆ.

† ಇವು ನಾಲ್ಕು ವೇದಗಳಲ್ಲಿಯೂ ಪಂಡಿತನೆಂದು ಸೂಚಿಸುತ್ತವೆ. ಮೂರಾಗಲಿ, ಎರಡಾಗಲಿ, ಕಡೆಗೆ ಒಂದಾಗಲಿ ರೇಖೆಯು ದ್ವಿಜನಿಗೆ ಇರಬೇಕು,

ಕೆನ್ನೆಗಳು ಸಮವಾಗಿವೆ (೧೮). ಅವನ ಹುಬ್ಬು, ಮೂಗಿನ ರಂಧ್ರ, ಕಣ್ಣು, ಕಿವಿ, ತುಟಿ, ಸ್ತನಾಗ್ರ, ಮೊಳಕೈ, ಮಣಿಕಟ್ಟು, ಮೊಳಕಾಲು, ವೃಷಣ, ತೊಡೆ, ಕೈ, ಕಾಲು, ಪೃಷ್ಠ – ಈ ಹದಿನಾಲ್ಕು ಜೊತೆಗಳೂ ಒಂದಕ್ಕೊಂದು ಅನುರೂಪವಾಗಿ ಸಮಪ್ರಮಾಣದಲ್ಲಿರುತ್ತವೆ. ನಾಲ್ಕು ದವಡೆಯ ಹಲ್ಲುಗಳೂ ಹರಿತವಾಗಿಯೂ, ಗಟ್ಟಿಯಾಗಿಯೂ ಇವೆ. ಅವನ ನಡಿಗೆಯು ಸಿಂಹ, ಹುಲಿ, ಆನೆ, ವೃಷಭಗಳೆಂಬ ನಾಲ್ಕು ಪ್ರಾಣಿಗಳ ನಡಿಗೆಯಂತೆ ಗಂಭೀರವಾಗಿದೆ. ತುಟಿ, ಕೆನ್ನೆ, ಮೂಗು – ಇವು ದೊಡ್ಡದಾಗಿ ಉಬ್ಬಿವೆ. ಮಾತು, ಮುಖ, ಉಗುರು, ಕೂದಲು, ಚರ್ಮ – ಈ ಐದು ಮೃದುವಾಗಿವೆ. ಅವನ ಬೆನ್ನು ಮೂಳೆ, ದೇಹ, ಬೆರಳು, ಕೈ, ಮೂಗು, ಕಣ್ಣು, ಕಿವಿ, ಶಿಶ್ನ – ಈ ಎಂಟು ಆಯತವಾಗಿವೆ (೧೯). ಮುಖ, ನೇತ್ರ, ಬಾಯಿ, ನಾಲಗೆ, ತುಟಿ, ತಾಲು (ಬಾಯಿಯ ಮೇಲ್ಭಾಗ, ಅಂಗಳ: Palate), ಸ್ತನ, ಉಗುರು, ಹಸ್ತ, ಪಾದಗಳೆಂಬ ಹತ್ತು ಅವಯವಗಳೂ ಪದ್ಮದಂತೆ ಇವೆ. ಎದೆ, ತಲೆ, ಹಣೆ, ಕುತ್ತಿಗೆ, ತೋಳು, ಹೆಗಲು, ಹೊಕ್ಕುಳು, ಪಕ್ಕೆ, ಬೆನ್ನು, ಕಂಠಧ್ವನಿ – ಈ ಹತ್ತು ದೊಡ್ಡದಾಗಿರುವುವು. ಶ್ರೀರಾಮನು ತೇಜಸ್ಸು, ಸಂಪತ್ತುಗಳಿಂದ ಸಮೇತನಾದವನು. ಅವನು ಮಾತೃವಂಶ, ಪಿತೃವಂಶಗಳೆರಡರಿಂದಲೂ ಪರಿಶುದ್ಧನು. (ಅಥವಾ ದಂತಪಂಕ್ತಿ, ನೇತ್ರ ಇವೆರಡೂ ಶುಭ್ರವಾಗಿರುವುವು). ಅವನ ಕಂಕುಳು, ಉದರ, ಎದೆ, ಮೂಗು, ಹೆಗಲು, ಹಣೆ–ಇವು ಆರೂ ಉನ್ನತವಾಗಿವೆ. ಬೆರಳಿನ ಗಿಣ್ಣು, ತಲೆಗೂದಲು, ಮೀಸೆ, ಉಗುರು, ಚರ್ಮ, ಶಿಶ್ನ, ಮೈಗೂದಲು, ದೃಷ್ಟಿ, ಬುದ್ಧಿ–ಈ ಒಂಭತ್ತು ಸೂಕ್ಷ್ಮವಾಗಿವೆ. ಶ್ರೀರಾಮನು ಉಚಿತಕಾಲದಲ್ಲಿ ಧರ್ಮಾರ್ಥಕಾಮಗಳೆಂದು ತ್ರಿವರ್ಗವನ್ನು ಸೇವಿಸತಕ್ಕವನಾಗಿದ್ದಾನೆ (೨೦). ಅವನು ಸತ್ಯಧರ್ಮಗಳಲ್ಲಿ ನಿಷ್ಠೆಯಿಂದಿದ್ದು, ಧನಬಲಾದಿಗಳನ್ನು ಸಂಪಾದಿಸುತ್ತ ಸಜ್ಜನರನ್ನು ಪೋಷಿಸುವುದರಲ್ಲಿ ಆಸಕ್ತನಾಗಿದ್ದಾನೆ. ದೇಶಕಾಲಗಳನ್ನು ಬಲ್ಲವನಾಗಿದ್ದಾನೆ. ಸಮಸ್ತರೊಡನೆಯೂ ಪ್ರಿಯವಾದ ಮಾತನ್ನಾಡುತ್ತಾನೆ (೨೧). ಅವನ ತಮ್ಮ ಸೌಮಿತ್ರಿಯೂ ಸ್ನೇಹ, ರೂಪ, ದಾಕ್ಷಿಣ್ಯಾದಿ ಗುಣಗಳಲ್ಲಿ ರಾಮನಂತೆಯೇ ಇರುವನು. ಆ ಪುರುಷಸಿಂಹರಿಬ್ಬರೂ ನಿನ್ನನ್ನು ಕಾಣುವ ತವಕದಿಂದ ಎಲ್ಲಾ ಸ್ಥಳವನ್ನೂ ಹುಡುಕಿಕೊಂಡು ಬರುತ್ತಿರುವಾಗ ನಮ್ಮ ಪರಿಚಯವಾಯಿತು (೨೨–೨೩). ಅವರು ನಮ್ಮೊಡೆಯ

ನಾದ ಸುಗ್ರೀವನನ್ನು ಕಂಡರು. ಸುಗ್ರೀವನು ಅಣ್ಣನಾದ ವಾಲಿಯಿಂದ ರಾಜ್ಯ ಭ್ರಷ್ಟನಾಗಿ, ಭಯದಿಂದ ಋಷ್ಯಮೂಕಪರ್ವತದ ಮೇಲೆ ವೃಕ್ಷನಿಬಿಡವಾದ ತಪ್ಪಲಿನಲ್ಲಿ ಇದ್ದನು. ರಾಜ್ಯಭ್ರಷ್ಟನಾದ ಆ ವಾನರೇಶ್ವರನು ಸತ್ಯಸಂಧನಾದ್ದ ರಿಂದ, ನಾವು ಅನೇಕ ವಾನರರು ಅವನಿಗೆ ಬೆಂಬಲವಾಗಿ ಸೇವೆಮಾಡಿಕೊಂಡಿ ದ್ದೆವು (೨೪–೨೬). ಹೀಗಿರಲು ನಾರುಬಟ್ಟೆಯನ್ನುಟ್ಟು ಧನುರ್ಧಾರಿಗಳಾದ ರಾಮಲಕ್ಷ್ಮಣರು, ಋಷ್ಯಮೂಕಪರ್ವತದಲ್ಲಿ ನಾವಿದ್ದ ರಮ್ಯಪ್ರದೇಶಕ್ಕೆ ಬಂದರು. ಸುಗ್ರೀವನು ಅವರನ್ನು ನೋಡಿ, ವಾಲಿಯು ಅವರನ್ನು ಕಳಿಸಿರ ಬಹುದೆಂಬ ಭೀತಿಯಿಂದ ಮೇಲಕ್ಕೆ ನೆಗೆದು ಪರ್ವತಶಿಖರಕ್ಕೆ ಹೋಗಿಬಿಟ್ಟನು. ಸುಗ್ರೀವನು ಆ ಶಿಖರದಮೇಲೆ ನನ್ನನ್ನು ಕರೆದು ರಾಮಲಕ್ಷ್ಮಣರ ನಿಜಸ್ಥಿತಿ ಏನೆಂದು ತಿಳಿದುಬರುವುದಕ್ಕಾಗಿ ಕೂಡಲೇ ಅವರ ಬಳಿಗೆ ಕಳುಹಿಸಿದನು. ಸುಗ್ರೀವನ ಮಾತಿನಂತೆ ನಾನು ರಾಮಲಕ್ಷ್ಮಣರ ಬಳಿಗೆ ಹೋಗಿ ಕೈಮುಗಿದು ನಿಂತುಕೊಂಡೆನು (೨೭–೩೦). ಅವರ ನಿಜಸ್ಥಿತಿಯನ್ನು ವಿಚಾರಿಸಿ ತಿಳಿದು ಕೊಂಡೆನು. ನಮ್ಮ ವಿಷಯವೂ ಗೊತ್ತಾಗಲು ಅವರಿಗೆ ಸಂತೋಷವಾಯಿತು. ನಾನು ಅವರಿಬ್ಬರನ್ನೂ ಬೆನ್ನಮೇಲೆ ಕುಳ್ಳಿರಿಸಿಕೊಂಡು ಸುಗ್ರೀವನಿದ್ದ ಸ್ಥಳಕ್ಕೆ ಕರೆತಂದೆನು (೩೧). ಸುಗ್ರೀವನಿಗೆ ಅವರ ಸಂಗತಿಯನ್ನು ತಿಳಿಸಲಾಗಿ ರಾಮ ಸುಗ್ರೀವರಿಬ್ಬರೂ ಪರಸ್ಪರ ಸಂಭಾಷಣೆಯನ್ನು ನಡೆಸಿದರು. ಕಡೆಗೆ ಅವರೀರ್ವರಿಗೂ ಸ್ನೇಹವು ಬೆಳೆಯಿತು (೩೨). ತಮ್ಮ ಪೂರ್ವವೃತ್ತಾಂತ ವನ್ನು ಹೇಳಿಕೊಂಡು ತಾವೇ ಅನ್ಯೋನ್ಯವಾಗಿ ಸಮಾಧಾನಪಡಿಸಿಕೊಂಡರು. ಪರಾಕ್ರಮಿಯಾದ ವಾಲಿಯಿಂದ ಸ್ತ್ರೀನಿಮಿತ್ತವಾಗಿ ಸುಗ್ರೀವನು ಅವಮಾನಿತ ನಾಗಿರುವುದನ್ನು ತಿಳಿದು, ರಾಮನು (ವಾಲಿಯನ್ನು ಕೊಲ್ಲುತ್ತೇನೆಂದು ಮಾತು ಕೊಟ್ಟು) ಸುಗ್ರೀವನನ್ನು ಸಮಾಧಾನಪಡಿಸಿದನು (೩೩–೩೪). ಆಮೇಲೆ ಲಕ್ಷ್ಮಣನು, ನಿನ್ನನ್ನು ಅಗಲಿದುದರಿಂದ ಶ್ರೀರಾಮನಿಗೆ ಎಷ್ಟು ದುಃಖವಾಗಿದೆ ಯೆಂಬುದನ್ನು ಸುಗ್ರೀವನಿಗೆ ತಿಳಿಸಿದನು. ಅದನ್ನು ಕೇಳಿ ಸುಗ್ರೀವನಿಗೆ ಬಹಳ ದುಃಖವಾಯಿತು. ರಾಹುಗ್ರಸ್ತನಾದ ಸೂರ್ಯನಂತೆ ಅವನ ಮುಖವು ಕಂದಿ ಹೋಯಿತು (೩೫–೩೬). ರಾವಣನು ನಿನ್ನನ್ನು ಅಪಹರಿಸಿ ಒಯ್ಯುತ್ತಿರುವಾಗ ಮೈಮೇಲಿದ್ದ ಆಭರಣಗಳನ್ನು ನೀನು (ಋಷ್ಯಮೂಕದಮೇಲೆ) ಬಿಸುಟಿದ್ದೆ. ಅವುಗಳೆಲ್ಲವನ್ನೂ ವಾನರನಾಯಕರು ತಂದು ಸಂತೋಷದಿಂದ ಶ್ರೀರಾಮನಿಗೆ

ತೋರಿಸಿದರು. ಆದರೆ ನೀನಿರುವ ಸ್ಥಳವು ಮಾತ್ರ ಯಾರಿಗೂ ತಿಳಿಯದು (೩೭–೩೮). ಆ ಒಡವೆಗಳು ಘಲ್ ಘಲ್ ಎನ್ನುತ್ತ ನೆಲದಮೇಲೆ ಬಿದ್ದಾಗ, ನಾನೇ ಅವುಗಳನ್ನು ಆರಿಸಿ ತಂದಿದ್ದೆನು. ಆಗ ರಾವಣನು ಒಡವೆಗಳು ಬಿದ್ದುದನ್ನು ಗಮನಿಸಲಿಲ್ಲ. ಶ್ರೀರಾಮನು ಸುಂದರವಾದ ಆ ಒಡವೆಗಳನ್ನು ತೊಡೆಯ ಮೇಲಿಟ್ಟುಕೊಂಡು ರೋದಿಸತೊಡಗಿದನು (೩೯–೪೦). ಅವುಗಳನ್ನು ಮತ್ತೆ ಮತ್ತೆ ನೋಡಿದನು. ನೋಡಿ ನೋಡಿ ಅಳುವನು. ಒಡವೆಗಳಿಂದ ಅವನ ಶೋಕಾಗ್ನಿಯು ಹೆಚ್ಚಿಹೋಯಿತು. ಆ ಮಹಾತ್ಮನು ಅಳುತ್ತಲೇ ದುಃಖದಿಂದ ನೆಲದಮೇಲೆ ಕುಸಿದುಹೋದನು. ನಾವು ಸಮಾಧಾನ ಹೇಳಿ ಬಹುಕಷ್ಟದಿಂದ ಅವನು ಚೇತರಿಸಿಕೊಳ್ಳುವಂತೆ ಮಾಡಿದೆವು (೪೧–೪೨). ರಾಮನೂ ಲಕ್ಷ್ಮಣನೂ ಅಮೂಲ್ಯವಾದ ಆಭರಣಗಳನ್ನು ಮತ್ತೆ ಮತ್ತೆ ನೋಡುತ್ತ ಸುಗ್ರೀವನಿಗೆ ತೋರಿಸುತ್ತ, ಕಡೆಗೆ ಸುಗ್ರೀವನ ವಶಕ್ಕೆ ಕೊಟ್ಟರು. ಆರ್ಯೆ, ರಾಮನು ನಿನ್ನನ್ನು ಕಾಣದೆ, ಬೆಂಕಿಯಿಂದ ಆವೃತವಾದ ಅಗ್ನಿಪರ್ವತದಂತೆ ಸದಾ ತಪಿಸುತ್ತಿರುವನು (೪೩–೪೪). ನಿನ್ನ ವಿರಹದಿಂದ ರಾಘವನಿಗೆ ನಿದ್ರೆ ಇಲ್ಲ. ಅಗ್ನಿಗೃಹದಲ್ಲಿ ತ್ರೇತಾಗ್ನಿಗಳು ಉರಿಯುವಂತೆ ಜಾಗರಣೆ, ಶೋಕ, ಚಿಂತೆಗಳು ಉರಿಯುತ್ತ ಅವನನ್ನು ಸುಡುತ್ತಿವೆ. ಭೂಕಂಪದಿಂದ ನಡುಗುವ ಬೆಟ್ಟದಂತೆ ಶೋಕದಿಂದ ನಡುಗುತ್ತಿರುವನು (೪೫–೪೬). ರಾಜಕುಮಾರಿ, ಮನೋಹರವಾದ ಮನದಲ್ಲಾಗಲಿ ನದಿಯಲ್ಲಾಗಲಿ ಝರಿಯಲ್ಲಾಗಲಿ–ಎಲ್ಲಿ ಸುತ್ತಿದರೂ ಅವನ ಮನಸ್ಸಿಗೆ ನೆಮ್ಮದಿ ಇಲ್ಲ (೪೭). ಜಾನಕಿ, ಶ್ರೀರಾಮನು ಕ್ಷಿಪ್ರದಲ್ಲಿಯೇ ಬಂದು ಈ ರಾವಣನನ್ನೂ ಇವನ ಬಂಧುಮಿತ್ರರನ್ನೂ ಕೊಂದು ನಿನ್ನನ್ನು ಪಡೆಯುವನು. ರಾಮಸುಗ್ರೀವರಿಬ್ಬರೂ ಸೇರಿದಾಗಲೇ ರಾಮನು ವಾಲಿಯನ್ನು ಕೊಲ್ಲುವುದಾಗಿಯೂ ಸುಗ್ರೀವನು ನಿನ್ನನ್ನು ಹುಡುಕಿಸುವುದಾಗಿಯೂ ಪರಸ್ಪರ ಪ್ರತಿಜ್ಞೆಯನ್ನು ಮಾಡಿಕೊಂಡಿದ್ದಾರೆ (೪೮–೪೯). ಅನಂತರ ಸುಗ್ರೀವನು ಆ ರಾಜಪುತ್ರರೊಡನೆ ಕಿಷ್ಕಿಂಧೆಗೆ ಬಂದು ವಾಲಿಯನ್ನು ಕೊಲ್ಲಿಸಿದನು. ರಾಮನು ವಾಲಿಯನ್ನು ಕೊಂದು ಸುಗ್ರೀವನನ್ನು ಸಮಸ್ತ ವಾನರ ಭಲ್ಲೂಕಗಳಿಗೂ ಅಧಿಪತಿಯನ್ನಾಗಿ ಮಾಡಿಬಿಟ್ಟನು. ದೇವಿ, ರಾಮಸುಗ್ರೀವರಿಗೆ ಈ ಪ್ರಕಾರ ಸ್ನೇಹವು ಬೆಳೆಯಿತು. ನಾನು ರಾಮಸುಗ್ರೀವರ ದೂತನಾಗಿ ಬಂದಿದ್ದೇನೆ. ನನ್ನ ಹೆಸರು ಹನುಮಂತ (೫೦–೫೨). ತನ್ನ ರಾಜ್ಯವು ಲಭಿಸಿ

ದೊಡನೆ, ಸುಗ್ರೀವನು ಕಪಿವೀರರನ್ನೆಲ್ಲ ಕರೆಸಿ ನಿನ್ನನ್ನು ಹುಡುಕುವುದಕ್ಕಾಗಿ ಹತ್ತು ದಿಕ್ಕುಗಳಿಗೂ ಕಳುಹಿಸಿದನು. ಕಪೀಶ್ವರನಿಂದ ಆಜ್ಞೆಯಾದ ಕೂಡಲೆ ಪರ್ವತಾಕಾರದ ಕಪಿಗಳು ಎಲ್ಲಾ ಕಡೆಗೂ ಹೊರಟರು (೫೩–೫೪). ಅವನ ಆಜ್ಞೆಯಂತೆ ನಾವು ಬಹುಮಂದಿ ವಾನರರು ಈ ಭೂಮಿಯನ್ನೇ ಸುತ್ತು ವುದಕ್ಕೆ ಹೊರಟೆವು. ಅಂಗದ ಎಂಬವನು ವಾಲಿಯ ಮಗ; ಮಹಾಬಲಶಾಲಿ. ಅವನು ಕಪಿಸೈನ್ಯದಲ್ಲಿ ಮೂರನೇ ಒಂದುಪಾಲು ಸೈನ್ಯವನ್ನು ತೆಗೆದುಕೊಂಡು ಹೊರಟನು (೫೫–೫೬). ಅವರಲ್ಲಿ ನಾನೊಬ್ಬನು. ಹೀಗೆ ಬರುತ್ತಿರುವಾಗ ನಾವು ವಿಂಧ್ಯಪರ್ವತದಲ್ಲಿ ಒಂದು ಗುಹೆಯೊಳಗೆ ಸಿಕ್ಕಿಬಿದ್ದು ದುಃಖಾಕ್ರಾಂತ ರಾಗಿರಲು ಎಷ್ಟೋ ಹಗಲು ರಾತ್ರಿಗಳು ಕಳೆದುಹೋದವು (೫೭). 'ಮುಂದಿನ ಕಾರ್ಯ ಫಲಿಸುವುದೆಂಬ ಆಸೆ ಇಲ್ಲ; ಗೊತ್ತುಪಡಿಸಿದ ಕಾಲವು ಕಳೆಯುತ್ತ ಬಂದಿತು. ಸುಗ್ರೀವನು ದಂಡಿಸುವನೆಂಬ ಭಯ. ಕಾಡುಮೇಡುಗಳಲ್ಲಿ, ಗಿರಿನದಿ ಗಳಲ್ಲಿ ಎಷ್ಟು ಹುಡುಕಿದರೂ ಸೀತಾದೇವಿಯು ಸಿಗಲಿಲ್ಲ'. ಹೀಗಾಗಿ ನಾವು ಅಲ್ಲಿಯೇ ಪ್ರಾಣವನ್ನು ತ್ಯಜಿಸಬೇಕೆಂದು ನಿರ್ಧರಿಸಿಬಿಟ್ಟೆವು (೫೮–೫೯). ನಾವು ಗಿರಿಶಿಖರದ ಮೇಲೆ ಉಪವಾಸವನ್ನು ಆರಂಭಿಸಿದೆವು. ಆಗ ನಮ್ಮನ್ನು ನೋಡಿ ಅಂಗದನು ಬಹಳ ದುಃಖದಿಂದ ಗಟ್ಟಿಯಾಗಿ ಅಳತೊಡಗಿದನು. ವೈದೇಹಿ, ಅವನು ನಿನ್ನ ಅಪಹಾರ, ವಾಲಿಯ ವಧೆ, ನಮ್ಮ ಆಮರಣಾಂತವಾದ ಉಪವಾಸ, ಜಟಾಯುವಿನ ಮರಣ–ಇವೆಲ್ಲವನ್ನೂ ಬಾಯಲ್ಲಿ ಆಡುತ್ತ ವಿಲಾಪಿಸ ತೊಡಗಿದನು. ನಾವಂತೂ ಸುಗ್ರೀವನ ಆಜ್ಞೆಯನ್ನು ನೆರವೇರಿಸಲಾರದೆ ನಿರಾಶ ರಾಗಿ ಬದುಕುವ ಆಸೆಯನ್ನು ತೊರೆದಿದ್ದೆವು (೬೦–೬೨). ಅಷ್ಟರಲ್ಲಿ ನಮ್ಮ ಕಾರ್ಯಸಿದ್ಧಿಯಾಗಲೆಂದೋ ಏನೋ ಬೃಹದಾಕಾರದ ಒಬ್ಬ ಗೃಧ್ರರಾಜನು ಅಲ್ಲಿಗೆ ಬಂದನು. ಅವನು ಜಟಾಯುವಿನ ಅಣ್ಣ. ಸಂಪಾತಿ ಎಂದು ಹೆಸರು. ತನ್ನ ತಮ್ಮನು ಹತನಾದ ವಿಚಾರವನ್ನು ಕೇಳಿ ಕೋಪದಿಂದ 'ಎಲೈ ಕಪಿಗಳೆ, ಯಾವನು ನನ್ನ ತಮ್ಮನನ್ನು ಕೊಂದವನು? ಎಲ್ಲಿ ಕೊಂದನು? ಹೇಳಿರಿ' ಎಂದನು. ಆಗ ಜನಸ್ಥಾನದಲ್ಲಿ ಜಟಾಯುವನ್ನು ಭೀಮಾಕಾರದ ರಾಕ್ಷಸ ನೊಬ್ಬನು ಕೊಂದನೆಂದು ಅಂಗದನು ವಿವರಿಸಿ ಹೇಳಿದನು. ಸಂಪಾತಿಗೆ ಬಹಳ ಸಂಕಟವಾಯಿತು (೬೩–೬೬). ತರುವಾಯ ಸಂಪಾತಿಯು ರಾವಣನ ವಾಸ ಸ್ಥಾನವಾದ ಲಂಕೆಯಲ್ಲಿ ನೀನು ಇರುವುದಾಗಿ ತಿಳಿಸಿದನು. ಈ ಸಂತೋಷದ

ವಾರ್ತೆಯನ್ನು ಕೇಳಿ ಅಂಗದನೊಡನೆ ನಾವೆಲ್ಲರೂ ವಿಂಧ್ಯಪರ್ವತದಿಂದ ಹೊರಟು ಸಮುದ್ರದ ಉತ್ತರತೀರಕ್ಕೆ ಬಂದು ಸೇರಿದೆವು (೬೭–೬೮). ನಿನ್ನನ್ನು ನೋಡುವುದಕ್ಕೆ ಉತ್ಸುಕರಾಗಿ ಆನಂದದಿಂದ ನಮ್ಮ ಕಪಿಗಳೆಲ್ಲರೂ ಸಮುದ್ರದ ದಡಕ್ಕೆ ಬಂದರು. ಆದರೆ (ಸಮುದ್ರವನ್ನು ಕಂಡೊಡನೆ ನಿರಾಸೆಯಿಂದ) ಅವರಿಗೆ ದೊಡ್ಡ ಚಿಂತೆ ಹುಟ್ಟಿತು. ಅನಂತರ ನಾನು ತಲ್ಲಣಗೊಂಡಿದ್ದ ಕಪಿಸೈನ್ಯವನ್ನು ನೋಡಿ, ಅವರಿಗೆ ಹೆದರಬೇಡಿರೆಂದು ಸಮಾಧಾನಪಡಿಸಿ, ನೂರುಯೋಜನ ದಗಲದ ಸಮುದ್ರವನ್ನು ಹಾರಿಬಂದೆನು. ರಾಕ್ಷಸರಿಂದ ತುಂಬಿದ್ದ ಈ ಲಂಕೆಯನ್ನು ರಾತ್ರಿಯಲ್ಲಿ ಪ್ರವೇಶಮಾಡಿದೆನು (೬೯–೭೧). ರಾವಣನನ್ನು ನೋಡಿದೆ. ದುಃಖಿತಳಾದ ನಿನ್ನನ್ನು ನೋಡಿದೆ. ದೇವಿ, ನಡೆದ ಸಂಗತಿಯನ್ನು ಯಥಾಸ್ಥಿತ ವಾಗಿ ತಿಳಿಸಿದ್ದೇನೆ. ನನ್ನೊಡನೆ ಮಾತನಾಡು. ನಾನು ಶ್ರೀರಾಮನ ದೂತ. ರಾಮನಿಗೋಸ್ಕರ ನಿನ್ನನ್ನು ಹುಡುಕಿಕೊಂಡು ಇಲ್ಲಿಗೆ ಬಂದಿದ್ದೇನೆ (೭೨–೭೩). ನಾನು ಸುಗ್ರೀವನ ಮಂತ್ರಿ; ವಾಯುಪುತ್ರ. ಶಸ್ತ್ರಧಾರಿಗಳಲ್ಲಿ ಅಗ್ರಗಣ್ಯನಾದ ನಿನ್ನ ಪತಿಯು ಕುಶಲಿಯಾಗಿದ್ದಾನೆ. ಲಕ್ಷ್ಮಣನು ಅಣ್ಣನ ಸೇವೆಯಲ್ಲಿ ನಿರತ ನಾಗಿದ್ದಾನೆ. ನಿನ್ನ ಪತಿಯ ಹಿತವನ್ನೇ ಬಯಸುತ್ತಿದ್ದಾನೆ (೭೪–೭೫). ಸುಗ್ರೀವನ ಆಜ್ಞೆಯನ್ನು ಮನ್ನಿಸಿ ನಾನು ಒಬ್ಬನೇ ಇಲ್ಲಿಗೆ ಬಂದಿದ್ದೇನೆ. ಕಾಮ ರೂಪಿಯಾದ ನಾನು ನಿನ್ನನ್ನು ಅರಸುತ್ತ ಏಕಾಕಿಯಾಗಿ ಈ ದಕ್ಷಿಣದಿಕ್ಕಿಗೆ ಬಂದಿ ದ್ದೇನೆ. ನಿನ್ನನ್ನು ಕಾಣದೆ ಶೋಕಿಸುತ್ತಿರುವ ವಾನರಸೈನ್ಯಕ್ಕೆ ನಿನ್ನನ್ನು ಕಂಡ ವಾರ್ತೆಯನ್ನು ತಿಳಿಸಿ ಅವರ ಶೋಕವನ್ನು ಪರಿಹರಿಸುವೆನು. ಇದು ನನ್ನ ಭಾಗ್ಯ. ದೇವಿ, ನಾನು ಸಾಗರವನ್ನು ಲಂಘಿಸಿದ್ದು ವ್ಯರ್ಥವಾಗಲಿಲ್ಲ (೭೬–೭೮). ನನ್ನ ಭಾಗ್ಯದಿಂದಲೇ ನಿನ್ನ ದರ್ಶನಮಾಡಿದೆನೆಂಬ ಕೀರ್ತಿಗೆ ಭಾಗಿಯಾದೆ. ಮಹಾ ಬಲಾಢ್ಯನಾದ ರಾಮನು ರಾವಣನನ್ನು ಬಂಧುಮಿತ್ರರೊಡನೆ ಸಂಹರಿಸಿ, ಶೀಘ್ರ ದಲ್ಲಿಯೇ ನಿನ್ನನ್ನು ಪಡೆಯುವನು. ದೇವಿ, ಮಾಲ್ಯವಂತ ಎಂಬ ಒಂದು ಪರ್ವತ ಉಂಟು (೭೯–೮೦). ಅಲ್ಲಿ ವಾಸವಾಗಿದ್ದ ಕೇಸರಿ ಎಂಬ ವಾನರನು ಒಮ್ಮೆ ಗೋಕರ್ಣ ಪರ್ವತಕ್ಕೆ ಹೋದನು. ಆ ವಾನರೋತ್ತಮನೇ ನನ್ನ ತಂದೆ. ಅವನು ಸಮುದ್ರತೀರದಲ್ಲಿದ್ದ ಆ ಪುಣ್ಯಕ್ಷೇತ್ರದಲ್ಲಿ ಶಂಬಸಾದನನೆಂಬ ರಾಕ್ಷಸ ನನ್ನು ದೇವರ್ಷಿಗಳ ಆದೇಶದಂತೆ ಸಂಹಾರಮಾಡಿದನು. ಆ ಕೇಸರಿಯ ಪತ್ನಿ ಯಲ್ಲಿ ವಾಯುದೇವನ ಅನುಗ್ರಹದಿಂದ ನಾನು ಜನಿಸಿದೆನು (೮೧–೮೩). ನಾನು

ಮಾಡಿದ ಒಂದು ಕೆಲಸಕ್ಕೆ ಗುರುತಾಗಿ ನನಗೆ ಹನುಮಂತನೆಂದು ಹೆಸರಾಯಿತು. ನಿನಗೆ ನಂಬಿಕೆಯಾಗಲೆಂದು ನಿನ್ನ ಪತಿಯ ಗುಣಗಳನ್ನು ವರ್ಣಿಸಿದೆನು. ರಾಘವನು ಸದ್ಯದಲ್ಲಿಯೇ ನಿನ್ನನ್ನು ಇಲ್ಲಿಂದ ಬಿಡಿಸಿಕೊಂಡು ಹೋಗುವನು." ಹೀಗೆ ಸರಿಯಾದ ಕಾರಣಗಳನ್ನೂ ಗುರುತುಗಳನ್ನೂ ಹೇಳಲು, ಸೀತೆಗೆ ನಂಬಿಕೆಯಾಯಿತು (೮೩–೮೪). ಅವನು ರಾಮದೂತನೆಂದು ತಿಳಿದಮೇಲೆ ಅವಳ ಹರ್ಷಕ್ಕೆ ಪಾರವೇ ಇಲ್ಲವಾಯಿತು. ಕಣ್ಣುಗಳಿಂದ ಆನಂದಬಾಷ್ಪ ತುಳುಕಿತು. ಆ ವಿಶಾಲಾಕ್ಷಿಯ ಸುಂದರವದನವು ರಾಹುಮುಕ್ತನಾದ ಚಂದ್ರಮನಂತೆ ಕಂಗೊಳಿಸಿತು. ಹನುಮಂತನು ಬೇರೆಯವನಲ್ಲವೆಂದು ನಿಶ್ಚಯಿಸಿದಳು (೮೫–೮೭). ಆಗ ಹನುಮಂತನು "ದೇವಿ, ಇದ್ದ ಸಂಗತಿಯನ್ನು ತಿಳಿಸಿದ್ದೇನೆ. ಸಮಾಧಾನ ಹೊಂದು. ಇನ್ನು ಏನು ಮಾಡಲಿ? ನಿನ್ನ ಇಷ್ಟವೇನು? ನಾನು ಇನ್ನು ಹಿಂತಿರುಗಿ ಹೋಗಬೇಕಾಗಿದೆ. ಮೈಥಿಲಿ, ಮಹರ್ಷಿಗಳ ಪ್ರೇರಣೆಯಿಂದ ಕಪಿವೀರನಾದ ನನ್ನ ತಂದೆ ಶಂಬಸಾದನನೆಂಬ ಅಸುರನನ್ನು ಸಂಹಾರಮಾಡಲಾಗಿ, ಮಹರ್ಷಿಗಳ ಪ್ರಸಾದದಿಂದ ಕೇಸರಿಯ ಪತ್ನಿಯಲ್ಲಿ ನಾನು ವಾಯುದೇವನಿಂದ ಜನಿಸಿದೆನು. ವೇಗಪರಾಕ್ರಮಗಳಲ್ಲಿ ನಾನು ವಾಯುದೇವನಿಗೆ ಸಮಾನ" ಎಂದನು (೮೮–೮೯).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಮೂವತ್ತೈದನೆಯ ಸರ್ಗ

---

## ಸರ್ಗ ೩೬

ಹನುಮಂತನು ಶ್ರೀರಾಮನ ಅಂಗುಲೀಯಕವನ್ನು ಸೀತೆಗೆ ಕೊಡುವುದು.
ಅವನು ಸೀತೆಯ ನಾನಾ ಪ್ರಶ್ನೆಗಳಿಗೆ ಉತ್ತರ ಹೇಳಿ, ಶ್ರೀರಾಮನ
ಶೋಕಾವಸ್ಥೆಯನ್ನು ವರ್ಣಿಸುವುದು.

ವಾಯುಪುತ್ರನಾದ ಹನುಮಂತನು ಸೀತೆಗೆ ನಂಬಿಕೆಯಾಗಲೆಂದು ಪುನಃ ವಿನಯದಿಂದ "ದೇವಿ, ನಾನು ಶ್ರೀರಾಮನ ದೂತ. ಇದೊ! ಶ್ರೀರಾಮನ ಹೆಸರನ್ನು ಕೆತ್ತಿದ ಅಂಗುಲೀಯಕವನ್ನು ನೋಡು! ಆ ಮಹಾತ್ಮನು ನಿನಗೆ ವಿಶ್ವಾಸಹುಟ್ಟಲೆಂದು ಇದನ್ನು ನನ್ನ ಕೈಗೆ ಕೊಟ್ಟು ಕಳುಹಿಸಿದ್ದಾನೆ. ದೇವಿ,

ಸಮಾಧಾನಹೊಂದು. ನಿನಗೆ ಶುಭವಾಗುವುದು. ನಿನ್ನ ಕಷ್ಟವು ನೀಗಿತೆಂದೇ ತಿಳಿ" ಎಂದನು (೧–೩). ಜಾನಕಿಯು ತನ್ನ ಗಂಡನ ಹಸ್ತಭೂಷಣವಾಗಿದ್ದ ಆ ಉಂಗುರವನ್ನು ಕೈಯಲ್ಲಿ ತೆಗೆದುಕೊಂಡು, ಅದನ್ನೇ ನೋಡುತ್ತ, ಶ್ರೀರಾಮನೇ ಅಲ್ಲಿಗೆ ಬಂದಷ್ಟು ಆನಂದವಾಗಿ ಉಬ್ಬಿಹೋದಳು. ಕೆಂಪು ಬಿಳುಪು ಮಿಶ್ರವಾದ ವಿಶಾಲನೇತ್ರಗಳುಳ್ಳ ಆಕೆಯ ಸುಂದರವದನವು ಹರ್ಷದಿಂದ ಹಿಗ್ಗಿ, ಗ್ರಹಣವು ಬಿಟ್ಟ ಪೂರ್ಣಚಂದ್ರನಂತೆ ಮಿನುಗಿತು. ಪತಿಯು ಹೇಳಿ ಕಳಿಸಿದ ಕುಶಲವಾರ್ತೆಯಿಂದ ಸಂತುಷ್ಟಳಾದ ಆ ಬಾಲೆಯು ಸ್ವಲ್ಪ ನಾಚಿಕೆ ಪಡುತ್ತ ಆಂಜನೇಯನನ್ನು ಪ್ರಶಂಸೆಮಾಡತೊಡಗಿದಳು (೪–೬): "ವಾನರೋತ್ತಮ, ನೀನೇ ಪರಾಕ್ರಮಶಾಲಿ, ನೀನೇ ಸಮರ್ಥ, ಬುದ್ಧಿವಂತನೆಂದರೆ ನೀನೇ. ಈ ರಾಕ್ಷಸರ ಆವಾಸಸ್ಥಾನಕ್ಕೆ ಯಾರನ್ನೂ ಲಕ್ಷ್ಯಮಾಡದೆ ನೀನೊಬ್ಬನೇ ಬಂದಿದ್ದೀಯೆ. ಮೊಸಳೆ ಮುಂತಾದ ಕ್ರೂರಪ್ರಾಣಿಗಳಿರುವ ನೂರುಯೋಜನದಗಲದ ಮಹಾಸಾಗರವನ್ನು ಗೋವಿನ ಹೆಜ್ಜೆಯ ಕುಳಿಯನ್ನು ದಾಟುವಂತೆ ದಾಟಿ ಬಂದಿದ್ದೀಯೆ (೭–೮). ಕಪಿಶ್ರೇಷ್ಠ, ನೀನು ಸಾಮಾನ್ಯ ಕಪಿಯಲ್ಲ. ನಿನಗೆ ರಾವಣನಿಂದ ಭಯವೂ ಆಗಲಿಲ್ಲ, ಗಾಬರಿಯೂ ಆಗಲಿಲ್ಲ. ಪ್ರಾಜ್ಞನಾದ ರಾಮನು ನಿನ್ನನ್ನು ಕಳಿಸಿದಮೇಲೆ, ನಿನ್ನೊಡನೆ ನಾನು ಧಾರಾಳವಾಗಿ ಮಾತನಾಡಬಹುದು (೯–೧೦) ಅಜೇಯನಾದ ರಾಮನು ದೂತನನ್ನು ಪರೀಕ್ಷೆಮಾಡದೆ, ಅವನ ಪರಾಕ್ರಮವನ್ನು ತಿಳಿದುಕೊಳ್ಳದೆ ಕಳಿಸಲಾರನು. ಅದರಲ್ಲಿಯೂ ಈಗ ನನ್ನ ಬಳಿಗೆ ಸಾಮಾನ್ಯರನ್ನು ಕಳಿಸುವುದಿಲ್ಲ. ಧರ್ಮಾತ್ಮನಾದ ರಾಮನೂ ಸುಮಿತ್ರಾತನಯನಾದ ಲಕ್ಷ್ಮಣನೂ ಕ್ಷೇಮದಿಂದಿರುವುದು ನನ್ನ ಭಾಗ್ಯ (೧೧–೧೨). ಶ್ರೀರಾಮನು ಕ್ಷೇಮದಿಂದ ಇದ್ದಮೇಲೆ, ಅವನಿಗೆ ಕೋಪವೇಕೆ ಬರಲಿಲ್ಲ? ಪ್ರಳಯಕಾಲಾಗ್ನಿಯಂತೆ ಕ್ರುದ್ಧನಾಗಿ ಈ ಜಗತ್ತನ್ನು ಧ್ವಂಸಮಾಡದೆ ಬಿಟ್ಟಿರುವುದೇಕೆ? ಆ ವೀರರಿಬ್ಬರೂ ದೇವತೆಗಳನ್ನು ಕೂಡ ನಿಗ್ರಹಿಸಬಲ್ಲವರು. ಆದರೆ ನನ್ನ ದುಃಖಕ್ಕೆ ಇನ್ನೂ ಮುಗಿಯುವ ಕಾಲ ಬಂದಿಲ್ಲವೆಂದು ಎಣಿಸಬೇಕಾಗಿದೆ (೧೩–೧೪). ಅದು ಹಾಗಿರಲಿ. ರಾಮನು ನನಗೋಸ್ಕರ ವ್ಯಥೆಗೊಂಡು ಸದಾ ಸಂಕಟಪಡುತ್ತಿಲ್ಲವಷ್ಟೆ? ಮುಂದೆ ಮಾಡಬೇಕಾದ ಕಾರ್ಯಗಳನ್ನು ನಡೆಸುತ್ತಿರುವನಷ್ಟೆ? ಆ ರಾಜಪುತ್ರನು ದೈನ್ಯ ದಿಗ್ಭ್ರಮೆಗಳಿಂದ ಕರ್ತವ್ಯದಲ್ಲಿ ಪ್ರಮಾದಮಾಡುವುದಿಲ್ಲವಷ್ಟೆ? ಪುರುಷ

ಪ್ರಯತ್ನಗಳನ್ನು ನಡೆಸುತ್ತಿರುವನಷ್ಟೆ? (೧೫–೧೬). ಧರ್ಮ, ಅರ್ಥ, ಕಾಮ ಗಳೆಂಬ ತ್ರಿವರ್ಗಗಳಿಗೆ ಸಾಧನವಾದ ಸಾಮ, ದಾನ, ಭೇದ, ದಂಡ ಎಂಬ ಉಪಾಯಗಳು ಎರಡು ವಿಧ. ಸಾಮದಾನಗಳು ಸೌಮ್ಯ. ಭೇದದಂಡಗಳು ಉಗ್ರ. ಶ್ರೀರಾಮನು ಇವುಗಳನ್ನು ಯಥೋಚಿತವಾಗಿ ಶತ್ರುಗಳಲ್ಲಿ ಉಪ ಯೋಗಿಸುತ್ತಿರುವನೆ? ಆ ಪರಂತಪನು ಮಿತ್ರರ ವಿಷಯದಲ್ಲಿ ಸಂತೃಪ್ತನಾಗಿ ಉತ್ಸಾಹದಿಂದಿರುವನೆ? (೧೬). ಮಿತ್ರರನ್ನು ಸಂಪಾದಿಸಿಕೊಳ್ಳುತ್ತಿದ್ದಾನೆಯೆ? ಅವರು ಇವನ ಬಳಿಗೆ ಸಹಾಯಾಪೇಕ್ಷೆಯಿಂದ ಬರುತ್ತಿರುವರೆ? ಅವರೆಲ್ಲರೂ ಒಳ್ಳೆಯವರಾಗಿದ್ದಾರೆಯೆ? ಇವನನ್ನು ಗೌರವಿಸುತ್ತಾರೆಯೆ? (೧೮). ಶ್ರೀರಾಮನು ದೇವತಾನುಗ್ರಹವನ್ನು ಸಂಪಾದಿಸುವುದಕ್ಕಾಗಿ ಇಷ್ಟದೇವತೆ ಯನ್ನು ಪ್ರಾರ್ಥಿಸುತ್ತಾನಷ್ಟೆ? ದೈವ ಪೌರುಷಗಳೆರಡರಲ್ಲಿಯೂ ನಂಬಿಕೆ ಇಟ್ಟಿರುವನಷ್ಟೆ? ಬಹುದಿನಗಳಿಂದ ಅಗಲಿದರೂ ನನ್ನಲ್ಲಿ ಸ್ನೇಹವು ತಪ್ಪಿಲ್ಲವಷ್ಟೆ? ವಾನರೋತ್ತಮ, ನನ್ನನ್ನು ಈ ಕಷ್ಟದಿಂದ ಶ್ರೀರಾಮನು ಪಾರುಮಾಡುವನೆ? (೧೯–೨೦). ಅವನು ಯಾವಾಗಲೂ ದುಃಖವನ್ನೇ ಕಾಣದೆ ಸುಖದಿಂದ ಇದ್ದ ವನು. ಈಗ ಈ ಮಹಾದುಃಖ ಬಂದೊದಗಿತು. ಇದರಿಂದ ದೇಹದಲ್ಲಿ ಕೃಶನಾಗಿ ಬಿಟ್ಟಿಲ್ಲವೆ? ಕೌಸಲ್ಯಾದೇವಿ, ಸುಮಿತ್ರಾದೇವಿ, ಭರತ–ಇವರ ಯೋಗಕ್ಷೇಮ ವೇನಾದರೂ ಕೇಳಿಬರುತ್ತಿದೆಯೆ? (೨೧–೨೨). ರಾಘವನು ನನಗೋಸ್ಕರ ಶೋಕಿಸುತ್ತಿರುವನೆ? ಅವನ ಮನಸ್ಸು ಬೇರೆಯಾಗಿಲ್ಲವೆ? ನನ್ನನ್ನು ಅವನು ಪಾರುಮಾಡಬಹುದೆ? ಭರತನು ಸೋದರವಾತ್ಸಲ್ಯವನ್ನಿಟ್ಟು ಮಂತ್ರಿಗಳಿಂದ ರಕ್ಷಿತವಾದ ಮಹಾಸೈನ್ಯವನ್ನು ನನಗೋಸ್ಕರ ಯುದ್ಧಮಾಡಲು ಕಳಿಸಿಕೊಡ ಬಹುದೆ? (೨೩–೨೪). ವಾನರೇಶ್ವರನಾದ ಸುಗ್ರೀವನು ದಂತನಖಗಳಿಂದಲೇ ಹೋರಾಡುವ ಕಪಿವೀರರೊಡನೆ ನನಗಾಗಿ ಬರಬಹುದೆ? ಅಸ್ತ್ರವಿದ್ಯೆಯಲ್ಲಿ ನಿಪುಣ ನಾದ ವೀರಲಕ್ಷ್ಮಣನು ಶರಜಾಲಗಳಿಂದ ರಾಕ್ಷಸರನ್ನು ಧ್ವಂಸಮಾಡಬಹು ದಲ್ಲವೆ? ರಾಮನ ರೌದ್ರಾಸ್ತ್ರದಿಂದ ಯುದ್ಧರಂಗದಲ್ಲಿ ರಾವಣನು ಮಿತ್ರಸಮೇತ ನಾಗಿ ಸತ್ತುಬೀಳುವುದನ್ನು ಶೀಘ್ರದಲ್ಲಿ ನಾನು ನೋಡುವೆನೆ? (೨೫–೨೭). ವಾನರೋತ್ತಮ, ಆ ರಾಮನ ಮುಖವು ಚಿನ್ನದಂತೆ ಮಿನುಗುವುದು. ಪದ್ಮ ದಂತೆ ಸುಗಂಧವನ್ನು ಬೀರುವುದು. ನೀರಿಲ್ಲದೆ ಬಿಸಿಲಿನಿಂದ ತಾವರೆಯ ಹೂವು ಬಾಡಿಹೋಗುವಂತೆ, ಅದು ನಾನಿಲ್ಲದೆ ಶೋಕದಿಂದ ಬಾಡಿಹೋಗದೆ ಇದ್ದೀತೆ?

(೨೮). ಧರ್ಮದ ಹೆಸರಿನಲ್ಲಿ ರಾಜ್ಯವನ್ನು ತೊರೆದಾಗಲೂ, ಕಾಲ್ನಡಿಗೆಯಲ್ಲಿ ನನ್ನನ್ನು ಅರಣ್ಯಕ್ಕೆ ಕರೆತಂದಾಗಲೂ ಅವನು ಚಿಂತೆ, ಭಯ, ಶೋಕಗಳೊಂದೂ ಇಲ್ಲದೆ ಧೀರನಾಗಿದ್ದನು. ಈಗ ನನ್ನನ್ನು ಅಗಲಿದಮಾತ್ರಕ್ಕೆ ಧೈರ್ಯವನ್ನು ಬಿಟ್ಟಿಲ್ಲವಷ್ಟೆ ? (೨೯). ಅಪ್ಪಾ—ರಾಮದೂತ, ರಾಮನಿಗೆ ತಾಯಿಯಲ್ಲಾಗಲಿ, ತಂದೆಯಲ್ಲಾಗಲಿ, ಬೇರೆ ಯಾವ ಬಂಧುವಿನಲ್ಲಿಯಾಗಲಿ ನನ್ನ ಮೇಲಿರುವಷ್ಟು ಪ್ರೀತಿ ಇರಲಾರದು ! ನನ್ನ ಪ್ರಿಯನು ನನ್ನನ್ನು ಬಿಡಿಸಿಕೊಳ್ಳುವ ವಾರ್ತೆಯನ್ನು ಒಂದು ದಿನ ಕೇಳುತ್ತೇನೆಂಬ ಆಸೆಯಿಂದ ಇದುವರೆಗೂ ಜೀವಿಸಿದ್ದೇನೆ" (೩೦). ಹೀಗೆ ಸೀತಾದೇವಿಯು ಅರ್ಥವತ್ತಾಗಿಯೂ ಮಧುರವಾಗಿಯೂ ಮಾತನಾಡಿ, ಹನುಮಂತನು ಹೇಳುವ ಆನಂದಕರವಾದ ರಾಮನ ವೃತ್ತಾಂತವನ್ನು ಕೇಳೋಣವೆಂದು ಸುಮ್ಮನಾದಳು (೩೧). ಆಗ ಹನುಮಂತನು ತಲೆಯಮೇಲೆ ಕೈಜೋಡಿಸಿಕೊಂಡು " ವೈದೇಹಿ, ಶ್ರೀರಾಮನಿಗೆ ನೀನು ಇಲ್ಲಿರುವುದು ಗೊತ್ತಿಲ್ಲವಾದ್ದರಿಂದ ನಿನ್ನನ್ನು ಕರೆದುಕೊಂಡುಹೋಗಿಲ್ಲ. ಗೊತ್ತಿದ್ದರೆ, ದೇವೇಂದ್ರನು ಶಚೀದೇವಿಯನ್ನು ಕರೆದೊಯ್ಯುವಂತೆ ನಿನ್ನನ್ನು ಕರೆದೊಯ್ಯುತ್ತಿದ್ದನು (೩೨–೩೩). ಇಲ್ಲಿರುವ ಸುದ್ದಿಯನ್ನು ನನ್ನಿಂದ ಕೇಳುತ್ತಲೇ ರಾಘವನು ವಾನರಭಲ್ಲೂಕಗಳ ಮಹಾಸೈನ್ಯವನ್ನು ಕರೆತರುವನು. ಅಸ್ತ್ರಜಾಲಗಳಿಂದ ಸಮುದ್ರವನ್ನು ಸ್ತಬ್ಧಗೊಳಿಸಿ, ಲಂಕೆಯಲ್ಲಿ ರಾಕ್ಷಸರ ಸದ್ದಿಲ್ಲದಂತೆ ಅವರ ಹುಟ್ಟಡಗಿಸುವನು (೩೪–೩೫). ಒಂದು ವೇಳೆ ದೇವತೆಗಳಾಗಲಿ, ಅಸುರರಾಗಲಿ, ಮೃತ್ಯುದೇವತೆಯೋ ಆಗಲಿ ಅಡ್ಡಬಂದರೂ ರಾಮನು ಅವರನ್ನು ವಧಿಸದೆ ಬಿಡುವುದಿಲ್ಲ. ಆರ್ಯೆ, ಸಿಂಹದಿಂದ ಕಂಗೆಟ್ಟ ಗಜರಾಜನಂತೆ, ನಿನ್ನ ವಿಯೋಗದುಃಖದಿಂದ ರಾಮನು ಸಂತೋಷವನ್ನೇ ಕಾಣದೆ ಇದ್ದಾನೆ (೩೬–೩೭). ಈ ವಿಷಯದಲ್ಲಿ (ನಮ್ಮ ಕಪಿಗಳಿಗೆ ಆಶ್ರಯವಾದ) ಮಲಯಪರ್ವತದ ಆಣೆ ! ವಿಂಧ್ಯಪರ್ವತದ ಆಣೆ ! ಮೇರುಪರ್ವತದ ಆಣೆ ! ಮಂದರ ದರ್ದುರ ಪರ್ವತಗಳ ಆಣೆ ! ಕಂದಮೂಲಗಳ ಆಣೆ ! (೩೮). ದೇವಿ, ಶೀಘ್ರದಲ್ಲಿಯೇ ನೀನು ಸುಂದರನೇತ್ರಗಳಿಂದೊಪ್ಪುವ, ತೊಂಡೆಯಹಣ್ಣಿನಂತಹ ತುಟಿಯುಳ್ಳ, ಮನೋಹರ ಕುಂಡಲಗಳಿಂದ ಶೋಭಿತವಾದ, ಪೂರ್ಣಚಂದ್ರನಿಗೆ ಎಣೆಯಾದ ಶ್ರೀರಾಮನ ರಮಣೀಯವಾದ ಮುಖವನ್ನು ನೋಡುತ್ತೀಯೆ. ದೇವಲೋಕದಲ್ಲಿರುವ ದೇವೇಂದ್ರನಂತೆ ಪ್ರಸ್ರವಣಗಿರಿಯಲ್ಲಿರುವ ರಾಮನನ್ನು ನೋಡುತ್ತೀಯೆ

(೩೯–೪೦). ನಿನ್ನ ವಿರಹದುಃಖದಿಂದ ರಾಘವನು ಮಾಂಸವನ್ನೂ ಮಧು ವನ್ನೂ ಸೇವಿಸುವುದೇ ಇಲ್ಲ. ನಿತ್ಯವೂ ಸಂಜೆ ಕಾಡಿನಲ್ಲಿ ದೊರೆಯುವ ಫಲ ಮೂಲಗಳನ್ನು ಮಾತ್ರ ಸ್ವಲ್ಪ ತಿನ್ನುತ್ತಿರುವನು. ಅವನ ಮನಸ್ಸು ನಿನ್ನಲ್ಲಿಯೇ ಲಯಿಸಿಹೋಗಿರುವುದರಿಂದ, ತನ್ನ ಮೈಮೇಲೆ ಕಾಡುನೊಣವಾಗಲಿ ಸೊಳ್ಳೆ ಯಾಗಲಿ ಹುಳು ಹಲ್ಲಿಗಳಾಗಲಿ ಎರಗಿದರೆ ಅವುಗಳನ್ನು ಓಡಿಸುವುದೇ ಇಲ್ಲ (೪೧–೪೨). ಕಾಮವಶನಾಗಿ ಸದಾ ನಿನ್ನನ್ನು ಚಿಂತಿಸುತ್ತ, ಸದಾ ಶೋಕಿಸುತ್ತ ಇರುವನು. ಬೇರೆ ಯಾವುದನ್ನೂ ಯೋಚಿಸುವುದೇ ಇಲ್ಲ. ಆತನಿಗೆ ನಿದ್ರೆಯೇ ಬರುತ್ತಿಲ್ಲ. ಆಕಸ್ಮಿಕವಾಗಿ ನಿದ್ರೆ ಬಂದರೂ 'ಹಾ ಸೀತೆ' ಎಂದು ಕನವರಿಸುತ್ತಲೇ ಎಚ್ಚರಗೊಳ್ಳುವನು (೪೩–೪೪). ಎಲ್ಲಿಯಾದರೂ ಹಣ್ಣನ್ನಾಗಲಿ ಸುಂದರವಾದ ಹೂವನ್ನಾಗಲಿ ನೋಡಿದರೆ, ನಿನ್ನನ್ನು ಸ್ಮರಿಸಿ ಕೊಂಡು 'ಹಾ ಸೀತೆ' ಎಂದು ಹಂಬಲಿಸುತ್ತ ನಿಟ್ಟುಸಿರು ಬಿಡುವನು. ದೇವಿ, ದುಃಖಸಂತಪ್ತನಾದ ಆ ರಾಜಕುಮಾರನು ಯಾವಾಗಲೂ 'ಸೀತೆ' ಎಂದು ನಿನ್ನ ಹೆಸರನ್ನು ನುಡಿಯುತ್ತಿರುವನು. ನಿನ್ನನ್ನು ಹುಡುಕಲೇಬೇಕೆಂದು ದೃಢನಿಶ್ಚಯ ದಿಂದ ಪ್ರಯತ್ನಮಾಡಿದ್ದಾನೆ" ಎಂದನು (೪೫–೪೬). ಶ್ರೀರಾಮನ ವೃತ್ತಾಂತ ವನ್ನು ಕೇಳಿ ಮನಸ್ಸಿಗೆ ನೆಮ್ಮದಿಯಾದರೂ, ಅವನು ತನಗಾಗಿ ಅನುಭವಿಸು ತ್ತಿರುವ ಕಷ್ಟವನ್ನು ತಿಳಿದು ಜಾನಕಿಯು ರಾಮನಂತೆಯೇ ದುಃಖಿತಳಾದಳು. ಆಗ, ಶರತ್ಕಾಲಾರಂಭದಲ್ಲಿ ತೆಳುವಾದ ಮೋಡದಿಂದ ಮಾಸಿದ ಚಂದ್ರನಿರುವ ರಾತ್ರಿಯಂತೆ, ಆಕೆಯು ಕಾಣಿಸುತ್ತಿದ್ದಳು (೪೭).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಮೂವತ್ತಾರನೆಯ ಸರ್ಗ

# ಸರ್ಗ ೩೭

ಹನುಮಂತನು ಸೀತೆಯನ್ನು ತನ್ನ ಭುಜದಮೇಲೆ ಕುಳ್ಳಿರಿಸಿ ರಾಮನ ಬಳಿಗೆ ಬರುವಂತೆ ಕೇಳುವುದು. ರಾಮನೇ ಇಲ್ಲಿಗೆ ಬಂದು ರಾವಣನನ್ನು ಸಂಹರಿಸಿ ತನ್ನನ್ನು ಕರೆದೊಯ್ಯುವುದು ಯುಕ್ತವೆಂದು ಸೀತೆಯು ಹೇಳುವುದು.

ಆಮೇಲೆ ಸೀತೆಯು ಸಾರವತ್ತಾಗಿಯೂ, ಧರ್ಮಯುಕ್ತವಾಗಿಯೂ ಇರುವ ಮಾತಿನಿಂದ ಹನುಮಂತನನ್ನು ಕುರಿತು "ಎಲೈ ಕಪಿಶ್ರೇಷ್ಠನೆ, ಶ್ರೀರಾಮನು ಬೇರೆ ಏನನ್ನೂ ಚಿಂತಿಸದೆ ನನ್ನನ್ನೇ ಸ್ಮರಿಸಿಕೊಳ್ಳುತ್ತಿರುವನೆಂದೂ, ನನಗಾಗಿ ಶೋಕದಲ್ಲಿ ಮುಳುಗಿಹೋಗಿರುವನೆಂದೂ ಹೇಳಿದೆಯಲ್ಲ. ಇದು ವಿಷಮಿಶ್ರ ವಾದ ಅಮೃತ (೧—೨). ವಿಪುಲವಾದ ಐಶ್ವರ್ಯದಲ್ಲಾಗಲಿ, ಮಹಾದುಃಖ ದಲ್ಲಾಗಲಿ ವಿಧಾತನೇ ಮನುಷ್ಯನನ್ನು ಹಗ್ಗದಿಂದ ಬಿಗಿದು ಎಳೆದುಕೊಂಡು ಹೋಗುವನು. (ಸುಖ—ದುಃಖಗಳು ನಮ್ಮ ಅಧೀನವಲ್ಲ.) ದೈವವನ್ನು ಮೀರಿ ನಡೆಯುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ನಮ್ಮ ಅವಸ್ಥೆಯನ್ನು ನೋಡು. ಲಕ್ಷ್ಮಣ, ನಾನು, ರಾಮ—ಈ ಮೂವರೂ ವ್ಯಸನಪರಂಪರೆಯಲ್ಲಿ ಸಿಕ್ಕಿ ದಿಕ್ಕು ಕಾಣದೆ ಇದ್ದೇವೆ (೩—೪). ಸಮುದ್ರಮಧ್ಯದಲ್ಲಿ ದೋಣಿ ಮುಳುಗಿದವನು ಈಜುತ್ತ ಬಳಲಿಹೋಗುವಂತೆ ಶ್ರೀರಾಮನು ಶೋಕಸಮುದ್ರದಲ್ಲಿ ಸಿಕ್ಕಿರು ತ್ತಾನೆ. ಯಾವಾಗ ಅದರ ಪಾರವನ್ನು ಕಾಣುವನೋ! ಅವನು ರಾಕ್ಷಸರನ್ನು ವಧಿಸಿ, ರಾವಣನನ್ನು ಸಂಹಾರಮಾಡಿ, ಲಂಕೆಯನ್ನು ನಿರ್ಮೂಲಗೊಳಿಸಿ ನನ್ನನ್ನು ಎಂದಿಗೆ ನೋಡುವನೋ! (೫—೬). ವಾನರೋತ್ತಮ, ನೀನು ಹೋಗಿ ನನ್ನ ಪ್ರಿಯನನ್ನು ತ್ವರೆಗೊಳಿಸಬೇಕು. ವರ್ಷ ಮುಗಿಯುವುದರೊಳಗೆ ಈ ಕೆಲಸವಾಗಬೇಕು. ಅಲ್ಲಿಯವರೆಗೆ ಮಾತ್ರ ನನ್ನ ಪ್ರಾಣ ಇರುತ್ತದೆ. ಇದು ಹತ್ತನೆಯ ತಿಂಗಳು. ಪಾಪಿ ರಾವಣನು ಗೊತ್ತುಮಾಡಿದ ಅವಧಿಗೆ ಇನ್ನು ಎರಡೇ ತಿಂಗಳು ಉಳಿದಿವೆ (೭—೮). ಅವನ ತಮ್ಮನಾದ ವಿಭೀಷಣನು ನನ್ನನ್ನು ರಾಮನಿಗೆ ಒಪ್ಪಿಸಿಬಿಡಬೇಕೆಂದು ಒತ್ತಾಯಮಾಡಿದನು. ಆದರೆ ರಾವಣನು ಒಪ್ಪಲಿಲ್ಲ. ನನ್ನನ್ನು ಹಿಂದಕ್ಕೆ ಒಪ್ಪಿಸುವುದು ರಾವಣನಿಗೆ ಹಿಡಿಸು ವುದಿಲ್ಲ. ಮುಖ್ಯವಾಗಿ ಅವನು ಕಾಲವಶನಾಗಿದ್ದಾನೆ. ಯುದ್ಧದಲ್ಲಿ ಮೃತ್ಯುವು ಅವನಿಗಾಗಿ ಕಾದಿದೆ (೯—೧೦). ವಿಭೀಷಣನಿಗೆ ಅನಲೆ ಎಂಬ ಹಿರಿಯ ಮಗಳಿದ್ದಾಳೆ. ಅವಳು ತನ್ನ ತಾಯಿಯ ಮಾತಿನಮೇಲೆ ಇಲ್ಲಿಗೆ ಬಂದು ನನಗೆ

ಈ ವಿಷಯವನ್ನು ಹೇಳಿದಳು. ಕಪಿಶ್ರೇಷ್ಠ, ಶೀಘ್ರದಲ್ಲಿಯೇ ನನ್ನ ಪತಿಯು ನನ್ನನ್ನು ಬಿಡಿಸಿಕೊಳ್ಳುತ್ತಾನೆಂದೇ ತೋರುತ್ತಿದೆ. ನನ್ನ ಅಂತರಾತ್ಮವು ಶುದ್ಧವಾಗಿದೆ. ಶ್ರೀರಾಮನು ಅತ್ಯಂತ ಗುಣಶಾಲಿ (೧೧–೧೨). ಉತ್ಸಾಹ, ಪೌರುಷ, ಬಲ, ಕರುಣೆ, ಕೃತಜ್ಞತೆ, ಪರಾಕ್ರಮ, ದಿವ್ಯಾಸ್ತ್ರದ ಮಹಿಮೆ— ಇವೆಲ್ಲವೂ ರಾಘವನಲ್ಲಿ ನೆಲೆಸಿವೆ. ಜನಸ್ಥಾನದಲ್ಲಿ ತಮ್ಮನ ಸಹಾಯವನ್ನು ಬಯಸದೆ ಏಕಾಕಿಯಾಗಿ ಹದಿನಾಲ್ಕು ಸಾವಿರ ರಾಕ್ಷಸರನ್ನು ಧ್ವಂಸಮಾಡಿದ ಆ ಧೀರನಿಗೆ ಯಾವ ಶತ್ರುವು ತಾನೆ ಹೆದರಲಿಕ್ಕಿಲ್ಲ? (೧೩–೧೪). ಕಷ್ಟಗಳಿಗೆ ಅವನು ಜಗ್ಗತಕ್ಕವನಲ್ಲ. ಅವನ ಮಹಿಮೆ ಎಂತಹುದೆಂಬುದು ನನಗೆ ಗೊತ್ತು! ದೇವೇಂದ್ರನ ಮಹಿಮೆ ಶಚೀದೇವಿಗೇ ಗೊತ್ತು. ರಾಮನೆಂಬ ಭಾಸ್ಕರನು ಅಸ್ತ್ರಜಾಲಗಳೆಂಬ ಕಿರಣಗಳಿಂದ ಈ ರಾಕ್ಷಸರೆಂಬ ನೀರನ್ನು ಒಣಗಿಸಿಬಿಡುತ್ತಾನೆ" ಎಂದು ಹೇಳುತ್ತಿದ್ದಳು (೧೫–೧೬). ಅಷ್ಟರಲ್ಲಿ ಆಂಜನೇಯನು ದುಃಖದಿಂದ ಕಣ್ಣೀರು ತುಂಬಿಕೊಂಡಿದ್ದ ಸೀತೆಯನ್ನು ನೋಡಿ "ದೇವಿ, ನಾನು ಹೋಗಿ ಹೇಳುವುದೇ ತಡ, ಶ್ರೀರಾಮನು ವಾನರ ಭಲ್ಲೂಕಗಳ ಮಹಾಸೇನೆಯೊಡನೆ ಇಲ್ಲಿಗೆ ಬಂದೇಬಿಡುವನು (೧೭–೧೮). ಅಥವಾ ಅದೂ ಬೇಡ. ನಿನ್ನನ್ನು ಈಗಲೇ ಕಷ್ಟದಿಂದ ಪಾರುಮಾಡುತ್ತೇನೆ. ಇದೋ! ನನ್ನ ಬೆನ್ನನ್ನೇರಿ ಕುಳಿತುಕೊ. ನಿನ್ನನ್ನು ಬೆನ್ನಮೇಲೇರಿಸಿಕೊಂಡೇ ಈ ಮಹಾಸಾಗರವನ್ನು ದಾಟಿಹೋಗುವೆನು. ರಾವಣಸಹಿತವಾಗಿ ಈ ಲಂಕಾಪಟ್ಟಣವನ್ನೇ ಹೊತ್ತುಕೊಂಡು ಹೋಗುವಷ್ಟು ಶಕ್ತಿ ನನಗುಂಟು! (೧೯–೨೦). ಮೈಥಿಲಿ, ಅಗ್ನಿಯು ಹವಿಸ್ಸನ್ನು ಇಂದ್ರನಿಗೆ ಒಪ್ಪಿಸುವಂತೆ, ನಿನ್ನನ್ನು ಒಯ್ದು ಪ್ರಸ್ರವಣಪರ್ವತದಲ್ಲಿರುವ ಶ್ರೀರಾಮನಿಗೆ ಅರ್ಪಿಸುವೆನು. ದೈತ್ಯವಧೆಯಲ್ಲಿ ತೊಡಗಿದ ಮಹಾವಿಷ್ಣುವಿನಂತೆ ಇರುವ, ಲಕ್ಷ್ಮಣಸಮೇತನಾದ ರಾಮನನ್ನು ಈಗಲೇ ನೋಡಬಹುದು (೨೧–೨೨). ಬಲಾಢ್ಯನಾದ ರಾಘವನು ನಿನ್ನನ್ನು ನೋಡುವ ತವಕದಿಂದ ಪರ್ವತದಮೇಲೆ ದೇವೇಂದ್ರನಂತೆ ಕುಳಿತಿರುವನು. ಅಮ್ಮ, ನನ್ನ ಬೆನ್ನಮೇಲೇರು; ಭಯಪಡಬೇಡ. ರೋಹಿಣಿಯು ಚಂದ್ರನನ್ನು ಸೇರುವಂತೆ, ನೀನು ರಾಮಚಂದ್ರನನ್ನು ಸೇರಬಹುದು (೨೩–೨೪). ಮಾತನಾಡುತ್ತಿರುವಾಗಲೇ ಆಕಾಶಮಾರ್ಗದಲ್ಲಿ ಮಹಾಸಾಗರವನ್ನು ದಾಟಿಬಿಡುತ್ತೀಯೆ. ನನ್ನ ಬೆನ್ನಮೇಲೇರು. ನಾನು ವೇಗದಿಂದ ನಿನ್ನನ್ನು ಒಯ್ಯು

ತ್ತಿರುವಾಗ, ಲಂಕಾವಾಸಿಗಳಾದ ಯಾವ ರಾಕ್ಷಸರೂ ನನ್ನನ್ನು ಬೆನ್ನಟ್ಟಿಬರಲು ಸಾಧ್ಯವಿಲ್ಲ (೨೫–೨೬). ನೋಡುತ್ತಿರು; ನಾನು ಯಾವ ರೀತಿಯಲ್ಲಿ ಸಮುದ್ರವನ್ನು ಹಾರಿ ಇಲ್ಲಿಗೆ ಬಂದೆನೋ, ಅದೇ ರೀತಿಯಲ್ಲಿ ನಿನ್ನನ್ನು ಹೊತ್ತುಕೊಂಡು ಆಕಾಶಮಾರ್ಗದಲ್ಲಿ ಹೋಗಬಲ್ಲೆನು. ಸಂದೇಹವಿಲ್ಲ" ಎಂದನು (೨೭). ಈ ಅದ್ಭುತವಾದ ಮಾತನ್ನು ಕೇಳಿ ಸೀತೆಯು ಆನಂದ ವಿಸ್ಮಯಗಳಿಂದ ರೋಮಾಂಚಗೊಂಡಳು. "ಹನುಮಂತ, ಅಷ್ಟು ದೂರದವರೆಗೆ ನನ್ನನ್ನು ಹೇಗೆ ಹೊತ್ತುಕೊಂಡು ಹೋಗುತ್ತೀಯೆ ? ಇದಕ್ಕೇ ನಿನ್ನನ್ನು ಕಪಿ ಎಂದು ಹೇಳುವುದು ! ಇಷ್ಟು ಚಿಕ್ಕಶರೀರ ನಿನ್ನದು. ನನ್ನನ್ನು ಹೊತ್ತುಕೊಂಡು ನನ್ನ ಗಂಡನ ಬಳಿಗೆ ಹೋಗಿ ಸೇರಿಸಬಲ್ಲೆಯಾ ?" ಎಂದಳು (೨೮–೩೦). ಇದನ್ನು ಕೇಳಿ ತೇಜಸ್ವಿಯಾದ ಆ ವಾಯುಪುತ್ರನಿಗೆ ಎಂದೂ ಆಗದ ಅಪಮಾನವಾದಂತಾಯಿತು. "ಈಕೆಗೆ ನನ್ನ ಪರಾಕ್ರಮವಾಗಲಿ ಮಹಿಮೆಯಾಗಲಿ ಗೊತ್ತಿಲ್ಲ. ನನ್ನ ನಿಜರೂಪವನ್ನು ಒಮ್ಮೆ ನೋಡಲಿ" ಎಂದುಕೊಂಡು ತನ್ನ ನಿಜಸ್ವರೂಪವನ್ನು ತೋರಿಸಿದನು (೩೧–೩೩). ಅವನು ಶಿಂಶಪಾ ವೃಕ್ಷದಿಂದ ಕೆಳಕ್ಕೆ ಧುಮುಕಿ ಸೀತೆಗೆ ನಂಬಿಕೆಯಾಗಲೆಂದು ತನ್ನ ದೇಹವನ್ನು ಬೆಳೆಯಿಸತೊಡಗಿದನು. ಆ ವಾನರೋತ್ತಮನು ಉರಿಯುವ ಅಗ್ನಿಯಂತೆ ಜ್ವಲಿಸುತ್ತ, ಇದೇನು ಮೇರು ಪರ್ವತವೋ ಮಂದರಪರ್ವತವೋ ಎಂಬಂತೆ ಸೀತೆಯ ಎದುರಿಗೆ ಬೆಳೆದು ನಿಂತನು (೩೪–೩೫). ಪರ್ವತಾಕಾರವಾದ ದೇಹ, ಕೆಂಪಾದ ಮೋರೆ ! ವಜ್ರಾಯುಧದಂತೆ ತೀಕ್ಷ್ಣವಾದ ಕೋರೆಯಹಲ್ಲುಗಳು, ಉಗುರುಗಳು ! ಹೀಗೆ ಭೀಕರಾಕಾರವನ್ನು ತಳೆದ ಬಲಾಢ್ಯನಾದ ಹನುಮಂತನು ಸೀತೆಯನ್ನು ಕುರಿತು "ದೇವಿ, ಈ ಸಮಸ್ತ ಪರ್ವತಾರಣ್ಯಗಳು, ಉಪ್ಪರಿಗೆ, ಪ್ರಾಕಾರ ಪುರದ್ವಾರಗಳು, ಈ ರಾವಣ–ಇವರೆಲ್ಲರನ್ನೂ ಸೇರಿಸಿ ಇಡೀ ಲಂಕೆಯನ್ನೇ ಎತ್ತಿಕೊಂಡು ಹೋಗುವ ಶಕ್ತಿ ನನಗುಂಟು ! (೩೬–೩೭). ಆದ್ದರಿಂದ ಧೈರ್ಯದಿಂದಿರು. ಸಂದೇಹಪಡಬೇಡ ; ರಾಮಲಕ್ಷ್ಮಣರ ವ್ಯಸನವನ್ನು ಹೋಗಲಾಡಿಸು" ಎಂದನು. ಆಗ ಜಾನಕಿಯು ಪರ್ವತಾಕಾರನಾದ ವಾಯುಪುತ್ರನನ್ನು, ಪದ್ಮದಳದಂತೆ ಇದ್ದ ಕಣ್ಣುಗಳನ್ನರಳಿಸಿ ನೋಡುತ್ತ "ಮಹಾಕಪಿಯೆ, ನಿನ್ನ ಧೈರ್ಯವೂ ಪರಾಕ್ರಮವೂ ನನಗೆ ಗೊತ್ತಾಯಿತು. ದಿಟವಾಗಿಯೂ ವೇಗದಲ್ಲಿ ನೀನು ವಾಯುವಿಗೆ ಸಮಾನ ; ಅಗ್ನಿಯಂತೆ ಅದ್ಭುತನಾದ ತೇಜಸ್ವಿ ! (೩೮–೪೦).

ಸಾಮಾನ್ಯನಾದವನು ಊಹಾತೀತವಾದ ಸಮುದ್ರವನ್ನು ದಾಟಿ ಈ ಸ್ಥಳಕ್ಕೆ ಬಂದಾನೆ? ನನ್ನನ್ನು ಬೆನ್ನಮೇಲೆ ಏರಿಸಿಕೊಂಡು ಹೋಗಬಲ್ಲ ಶಕ್ತಿ ನಿನಗೆ ಇದೆ. ಆದರೆ ಮಹಾತ್ಮನಾದ ರಾಮನ ಕಾರ್ಯಸಿದ್ಧಿಯು ಯಾವ ರೀತಿಯಲ್ಲಿ ಆಗಬೇಕೆಂಬುದನ್ನು ನಿಶ್ಚಯಿಸಬೇಕಾಗಿದೆ (೪೧–೪೨). ನಾನು ನಿನ್ನೊಡನೆ ಬರುವುದು ಯುಕ್ತವಲ್ಲ. ವಾಯುವೇಗದಿಂದ ನೀನು ಹೋಗುವಾಗ, ನನಗೆ ಪ್ರಜ್ಞೆದಪ್ಪಬಹುದು. ಮಹಾಸಾಗರದಮೇಲೆ ಆಕಾಶದಲ್ಲಿ ಹೋಗುತ್ತಿರುವಾಗ, ಹೆದರಿಕೆಯಿಂದ ನಾನು ಕೆಳಗೆ ಬಿದ್ದುಬಿಡಬಹುದು (೪೩–೪೪). ಆಗ ತಿಮಿಂಗಲ ಮೊಸಳೆ ಮುಂತಾದ ಪ್ರಾಣಿಗಳಿಗೆ ನಾನು ಒಳ್ಳೆಯ ಆಹಾರ ವಾದೇನು. ಅಲ್ಲದೆ ಒಬ್ಬ ಹೆಂಗಸನ್ನು* ಕರೆದುಕೊಂಡು ಹೋಗುತ್ತಿದ್ದರೆ, ನಿನ್ನ ವಿಷಯದಲ್ಲಿಯೂ ಪ್ರೇಕ್ಷಕರಿಗೆ ಸಂದೇಹ ಹುಟ್ಟುತ್ತದೆ. ಆದ್ದರಿಂದ ನಿನ್ನೊಡನೆ ನಾನು ಬರಲಾರೆ (೪೫–೪೬). ನನ್ನನ್ನು ನೀನು ಒಯ್ಯುವುದನ್ನು ಕಂಡು ದುರಾತ್ಮನಾದ ರಾವಣನು ಕಳಿಸಿದ ಘೋರರಾಕ್ಷಸರು ಅಟ್ಟಿಸಿಕೊಂಡು ಬರಬಹುದು. ಶೂಲ ಮುದ್ಗರ ಮುಂತಾದ ಆಯುಧಗಳನ್ನು ಹಿಡಿದು ರಾಕ್ಷಸರು ಸುತ್ತಲೂ ಮುತ್ತಿಕೊಂಡಾಗ, ಜೊತೆಯಲ್ಲಿ ಹೆಂಗಸನ್ನು ರಕ್ಷಿಸಿಕೊಳ್ಳಬೇಕಾದ ನೀನು ವಿಪತ್ತಿನಲ್ಲಿ ಸಿಕ್ಕಿಕೊಳ್ಳುತ್ತೀಯೆ (೪೭–೪೮). ಅವರಾದರೋ ಆಯುಧಧಾರಿಗಳಾದ ಬಹುಮಂದಿ ರಾಕ್ಷಸರು. ನೀನು ಆಕಾಶಮಧ್ಯದಲ್ಲಿ ನಿರಾಯುಧನಾಗಿ ಒಂಟಿಯಾಗಿರುತ್ತೀಯೆ. ಆಗ ನೀನು ಯುದ್ಧಮಾಡುವುದು ಹೇಗೆ? ನನ್ನನ್ನು ಉಳಿಸಿಕೊಳ್ಳುವುದು ಹೇಗೆ? (೪೯). ಕಪಿವೀರನೆ, ಆ ಕ್ರೂರಿಗಳೊಡನೆ ನೀನು ಹೋರಾಡುವಾಗ ನಾನು ಭಯದಿಂದ ಕೆಳಗೆ ಬಿದ್ದುಬಿಡಬಹುದು. ಆ ರಾಕ್ಷಸರು ಭಯಂಕರರೂ, ಬಲಶಾಲಿಗಳೂ ಆದ್ದರಿಂದ ಒಂದು ವೇಳೆ ಯುದ್ಧದಲ್ಲಿ ಗೆದ್ದುಬಿಟ್ಟಾರು. ನೀನು ಯುದ್ಧದಲ್ಲಿ ತಲ್ಲೀನನಾದಾಗ ನಾನು ಜಾರಿಬಿದ್ದರೆ, ಆ ಪಾಪಿಗಳು ನನ್ನನ್ನು ಎತ್ತಿಕೊಂಡು ಹೋಗಿಬಿಡಬಹುದು (೫೦–೫೨). ಯುದ್ಧದಲ್ಲಿ ಸೋಲಾಗಲಿ ಗೆಲುವಾಗಲಿ ನಿಶ್ಚಿತವಲ್ಲ ನಿನ್ನ ಕೈಯಿಂದ ನನ್ನನ್ನು ಸೆಳೆದುಕೊಂಡು ಹೋದರೂ ಹೋಗಬಹುದು. ಕೊನೆಗೆ

* ಮೂಲದಲ್ಲಿ ಕಲತ್ರ ಎಂಬ ಶಬ್ದವಿದೆ. ಕಲತ್ರ= ಹೆಂಡತಿ; ರಕ್ಷಣೀಯ ವಸ್ತು. ಸ್ತ್ರೀಸಾಮಾನ್ಯ ಎಂಬ ಅರ್ಥವನ್ನು ಇಲ್ಲಿ ಗ್ರಹಿಸಿದೆ. ರಕ್ಷಣೀಯ ವಸ್ತು ಎಂಬ ಅರ್ಥವನ್ನೂ ಗ್ರಹಿಸಲು ಸಾಧ್ಯವಿದೆ.

ನನ್ನನ್ನೇ ಕೊಲ್ಲಬಹುದು. ಇಲ್ಲವೆ, ಆ ರಾಕ್ಷಸರ ಗರ್ಜನೆಯನ್ನು ಕೇಳಿಯೇ ನನ್ನ ಪ್ರಾಣಹೋಗಬಹುದು. ಹೇಗಾದರೂ ನಿನ್ನ ಸಾಹಸ ಪ್ರಯತ್ನ ವ್ಯರ್ಥವೇ ಆಗುತ್ತದೆ (೫೩–೫೪). ಸಮಸ್ತ ರಾಕ್ಷಸರನ್ನೂ ಕೊಂದುಹಾಕಲು ನೀನು ಸಮರ್ಥನೇ ಹೌದು. ಆದರೂ ನೀನು ರಾಕ್ಷಸರನ್ನೆಲ್ಲಾ ಕೊಂದರೆ ಶ್ರೀರಾಮನ ಕೀರ್ತಿಗೆ ಕೊರತೆಯಾಗುತ್ತದೆಯಲ್ಲವೆ? ನಿನ್ನನ್ನು ವಂಚಿಸಿ ವಾನರರಿಗಾಗಲಿ ರಾಮಲಕ್ಷ್ಮಣರಿಗಾಗಲಿ ತಿಳಿಯದಂತೆ ಈ ರಾಕ್ಷಸರು ನನ್ನನ್ನು ಗೂಢವಾಗಿ ಅಡಗಿಸಿಟ್ಟರೆ, ಆಗಲೂ ನೀನು ಇದುವರೆಗೆ ಮಾಡಿದ ಪ್ರಯತ್ನವೆಲ್ಲವೂ ನಿಷ್ಫಲ ವಾಗುತ್ತದೆ. ಆದ್ದರಿಂದ ನಿನ್ನೊಡನೆ ರಾಮನೇ ಇಲ್ಲಿಗೆ ಬರುವುದರಲ್ಲಿ ಬಹಳ ಗುಣವಿದೆ (೫೫–೫೭). ಹೇ ವೀರಾಗ್ರಣಿ! ಶ್ರೀರಾಮ, ಅವನ ತಮ್ಮಂದಿರು, ನಿನ್ನ ಪ್ರಭುವಾದ ಸುಗ್ರೀವನ ಪರಿವಾರ—ಇವರೆಲ್ಲರ ಪ್ರಾಣವೂ ಈಗ ನನ್ನ ಪ್ರಾಣದಮೇಲೆ ನಿಂತಿದೆ. ಶೋಕದಿಂದ ಕೃಶರಾದ ರಾಮಲಕ್ಷ್ಮಣರಿಗೆ ನನ್ನ ವಿಷಯದಲ್ಲಿ ನಿರಾಸೆಯಾದರೆ, ಅವರು ವಾನರಭಲ್ಲೂಕಗಳೊಡನೆ ಪ್ರಾಣವನ್ನು ಬಿಡುತ್ತಾರೆ. ಹನುಮಂತ, ಪತಿಭಕ್ತಿಯೊಂದನ್ನೇ ಗೌರವಿಸಿರುವ ನಾನು ರಾಮನ ಹೊರತು ಇನ್ನೊಬ್ಬನ ದೇಹವನ್ನು ಮುಟ್ಟುವುದಿಲ್ಲ (೫೮–೬೦). ರಾವಣನು ಬಲಾತ್ಕಾರವಾಗಿ ನನ್ನನ್ನು ಎತ್ತಿತಂದಾಗ ಅವನ ದೇಹಸ್ಪರ್ಶವಾಗಿ ದ್ದರೆ, ನಾನು ಏನುಮಾಡಲಿ? ಅನಾಥಳೂ ಕೈಲಾಗದವಳೂ ಪರಾಧೀನಳೂ ಆಗಿದ್ದೆ. ರಾಮನೇ ಬಂದು ದಶಕಂಠನನ್ನು ಬಂಧುಸಮೇತವಾಗಿ ವಧಿಸಿ ನನ್ನನ್ನು ಬಿಡಿಸಿಕೊಂಡುಹೋದರೆ, ರಾಮನ ಯೋಗ್ಯತೆಗೆ ತಕ್ಕ ರೀತಿಯಾದೀತು (೬೧–೬೨). ರಣಧೀರನಾದ ಆ ಮಹಾತ್ಮನ ಪರಾಕ್ರಮ ಕಾರ್ಯಗಳನ್ನು ನಾನು ಕೇಳಿದ್ದೇನೆ; ಕಣ್ಣಿಂದ ನೋಡಿಯೂ ಇದ್ದೇನೆ. ಯುದ್ಧದಲ್ಲಿ ದೇವ, ಗಂಧರ್ವ, ಭುಜಂಗ, ರಾಕ್ಷಸರು ಯಾರೂ ರಾಮನಿಗೆ ಸಮರಲ್ಲ (೬೩). ದೇವೇಂದ್ರನಂತೆ ಪರಾಕ್ರಮಶಾಲಿಯಾದ ರಾಮನು ಧನುಸ್ಸನ್ನು ಹಿಡಿದು, ವಾಯುವಿನ ಸಹಾಯ ದಿಂದ ಜ್ವಲಿಸುವ ಅಗ್ನಿಯಂತೆ, ಲಕ್ಷ್ಮಣಸಹಿತನಾಗಿ ಯುದ್ಧಕ್ಕೆ ನಿಂತರೆ ಅವ ನನ್ನು ಎದುರಿಸುವವನಾರು? (೬೪). ಶತ್ರುಮರ್ದನನಾದ ರಘುನಾಥನು ಲಕ್ಷ್ಮಣಸಮೇತನಾಗಿ, ಮದಿಸಿದ ದಿಗ್ಗಜದಂತೆ ನಿಂತು, ಪ್ರಳಯಕಾಲದ ಸೂರ್ಯನಂತೆ, ಕಿರಣಗಳಂತಿರುವ ಅಸ್ತ್ರಗಳನ್ನು ಚಲ್ಲುತ್ತಿದ್ದರೆ—ಯಾವನು ತಡೆದುಕೊಂಡಾನು? (೬೫). ಕಪಿಶ್ರೇಷ್ಠ, ನನ್ನ ಪತಿಯು ಲಕ್ಷ್ಮಣಸುಗ್ರೀವ

ಸಮೇತನಾಗಿ ಬೇಗನೆ ಇಲ್ಲಿಗೆ ಬರುವಂತೆ ಮಾಡು. ಹನುಮಂತ, ಬಹುದಿನಗಳಿಂದಲೂ ದುಃಖದಿಂದ ಕುಗ್ಗಿ ಹಂಬಲಿಸುತ್ತಿರುವ ನನಗೆ ಸಂತೋಷವನ್ನುಂಟುಮಾಡು" ಎಂದು ಹೇಳಿದಳು (೬೬).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಮೂವತ್ತೇಳನೆಯ ಸರ್ಗ

---

## ಸರ್ಗ ೩೮

ರಾಮನಿಗೆ ನಂಬಿಕೆಯಾಗುವುದಕ್ಕಾಗಿ ಒಂದು ಗುರುತನ್ನು ಕೊಡಬೇಕೆಂದು ಹನುಮಂತನು ಕೇಳಲು ಸೀತೆಯು ಕಾಕಾಸುರವೃತ್ತಾಂತವನ್ನು ಹೇಳಿ ಚೂಡಾಮಣಿಯನ್ನು ಕೊಡುವುದು.

ಆಂಜನೇಯನು ಸೀತೆಯ ಮಾತಿನಿಂದ ಸಂತುಷ್ಟನಾಗಿ "ದೇವಿ, ನೀನು ಯೋಗ್ಯವಾದ ಮಾತನ್ನಾಡಿದೆ. ಇದು ಸ್ತ್ರೀಯರ ಸ್ವಭಾವಕ್ಕೂ ಪತಿವ್ರತೆಯರ ವಿನಯಗುಣಕ್ಕೂ ಒಪ್ಪತಕ್ಕ ಮಾತು (೧—೨). ನನ್ನಮೇಲೆ ಕುಳಿತು ನೂರು ಯೋಜನದಗಲದ ಸಮುದ್ರವನ್ನು ದಾಟುವುದು ಸ್ತ್ರೀಯಾದ ನಿನಗೆ ಸಾಧ್ಯವಲ್ಲ. ಶ್ರೀರಾಮನನ್ನು ಬಿಟ್ಟು ಇನ್ನೊಬ್ಬನನ್ನು ಸ್ಪರ್ಶಮಾಡುವುದಿಲ್ಲವೆಂದು ನೀನು ಹೇಳುವ ಎರಡನೆಯ ಕಾರಣವು ಕೂಡ ಆ ಮಹಾತ್ಮನ ಪತ್ನಿಯಾದ ನಿನಗೆ ಯೋಗ್ಯವಾದದ್ದೇ ಸರಿ. ಇಂತಹ ಮಾತನ್ನು ನೀನಲ್ಲದೆ ಇನ್ನು ಯಾವಳು ತಾನೇ ಹೇಳುತ್ತಾಳೆ? (೩—೫). ದೇವಿ, ನೀನು ಆತ್ಮಹತ್ಯೆಗೆ ಪ್ರಯತ್ನಿಸಿದ್ದು ಮೊದಲಾದ ಸಮಸ್ತ ಕೃತ್ಯಗಳನ್ನೂ ನೀನು ಆಡಿದ ಎಲ್ಲ ಮಾತುಗಳನ್ನೂ ಶ್ರೀರಾಮನಿಗೆ ತಿಳಿಸುತ್ತೇನೆ. (ನಿನ್ನನ್ನು ಬೆನ್ನಮೇಲೆ ಏರಿಸಿಕೊಂಡು ಹೋಗುತ್ತೇನೆಂದು) ನಾನು ಹೇಳಿದುದು ಕೆಲವು ಕಾರಣಗಳಿಂದ. ಶ್ರೀರಾಮನಿಗೆ ಸಂತೋಷವನ್ನುಂಟುಮಾಡಬೇಕೆಂಬ ಅಪೇಕ್ಷೆಯಿಂದಲೂ, ನಿನ್ನ ಕಷ್ಟವನ್ನು ನೋಡಿ ಮನಸ್ಸು ಕರಗಿಹೋದ್ದರಿಂದಲೂ ಹೀಗೆ ಹೇಳಿದೆನು (೬—೭). ಲಂಕೆಯನ್ನು ಪ್ರವೇಶಿಸುವುದೂ ಸಮುದ್ರವನ್ನು ದಾಟುವುದೂ ಇತರರಿಗೆ ಅಶಕ್ಯವಾದ್ದರಿಂದ ನನ್ನ ಸಾಮರ್ಥ್ಯವನ್ನು ತೋರಿಸುವುದಕ್ಕೋಸ್ಕರ ಹೀಗೆ ಹೇಳಿಬಿಟ್ಟೆನು. ರಾಘವನಲ್ಲಿ ನನಗೆ ಇರುವ ಅಪಾರವಾದ ಸ್ನೇಹಭಕ್ತಿಗಳಿಂದ

ಈಗಲೇ ನಿನ್ನನ್ನು ಅವನ ಬಳಿಗೆ ಸೇರಿಸಬೇಕೆಂದು ಇಚ್ಛೆಯಾಯಿತು. ಆದ್ದರಿಂದ ಈ ಮಾತನ್ನು ಹೇಳಿದೆನೇ ಹೊರತು ಬೇರೆಯಲ್ಲ (೮–೯). ನನ್ನೊಡನೆ ಬರುವುದು ನಿನಗೆ ಸಮ್ಮತವಾಗದಿದ್ದರೆ ನಿನ್ನನ್ನು ನೋಡಿಬಂದ ವಿಷಯದಲ್ಲಿ ರಾಮನಿಗೆ ನಂಬಿಕೆಯಾಗುವಂತೆ ಏನಾದರೂ ಒಂದು ಗುರುತನ್ನು ಕೊಡು" ಎಂದು ಹೇಳಿದನು (೧೦). ಆಗ ಸೀತಾದೇವಿಯು ಕಣ್ಣಲ್ಲಿ ನೀರುತುಂಬಿಕೊಂಡು ಗದ್ಗದಸ್ವರದಿಂದ ಮೆಲ್ಲಗೆ ಹೇಳತೊಡಗಿದಳು—"ಹನುಮಂತ, ಇದೇ ದೊಡ್ಡ ಗುರುತು. ಇದನ್ನು ನನ್ನ ಪ್ರಿಯನಿಗೆ ಹೇಳು: 'ಹಿಂದೊಮ್ಮೆ ಚಿತ್ರಕೂಟದ ಈಶಾನ್ಯದ ಕಡೆಗಿರುವ ಒಂದು ಉಪಪರ್ವತದಮೇಲೆ, ಮಂದಾಕಿನೀ ನದಿಯ ಸಮೀಪದಲ್ಲಿದ್ದ ಸಿದ್ಧಾಶ್ರಮದಲ್ಲಿ ವಾಸವಾಗಿದ್ದೆವು. ಹಣ್ಣುಹಂಪಲುಗಳಿಂದ ಸಮೃದ್ಧವಾದ ಆ ಸ್ಥಳದಲ್ಲಿ ಇರುವಾಗ, ಒಂದು ದಿನ ನಾನು ನಾನಾವಿಧ ಪುಷ್ಪಗಳ ಗಂಧವನ್ನು ಬೀರುವ ಉಪವನಗಳಲ್ಲಿ ವಿಹರಿಸಿ ಬೆವತು, ನಿನ್ನ ತೊಡೆಯಮೇಲೆ ಕುಳಿತಿದ್ದೆನು (೧೧–೧೪). ಆಗ ಒಂದು ಕಾಗೆಯು ಬಂದು ನನ್ನನ್ನು ಕುಕ್ಕತೊಡಗಿತು. ನಾನು ಒಂದು ಮಣ್ಣುಹೆಂಟೆಯನ್ನು ತೆಗೆದುಕೊಂಡು ಅದನ್ನು ಓಡಿಸುವುದಕ್ಕೆ ಯತ್ನಿಸಿದೆನು. ಅದು ಮತ್ತೆ ಮತ್ತೆ ಕುಕ್ಕುತ್ತ ಅಲ್ಲಿಯೇ ಅಡಗಿಕೊಳ್ಳುತ್ತಿತ್ತು. ಆ ಕಾಗೆಯು ಮಾಂಸಾಪೇಕ್ಷೆಯಿಂದ ನನ್ನನ್ನು ಬಿಟ್ಟು ತೊಲಗಲೇ ಇಲ್ಲ (೧೫–೧೬). ನಾನು ಆ ಪಕ್ಷಿಯಮೇಲೆ ಕೋಪಗೊಂಡು ಹೊಡೆಯುವುದಕ್ಕಾಗಿ ಕಾಂಚಿಯನ್ನು ಬಿಚ್ಚಿ ಕೈಗೆ ತೆಗೆದುಕೊಳ್ಳಲು, ನನ್ನ ಸೀರೆಯು ಸಡಿಲಿತು. ಆಗ ನನ್ನನ್ನು ನೋಡಿ ನೀನು ಹಾಸ್ಯಮಾಡಿದೆ. ನನಗೆ ಇತ್ತ ಕೋಪ, ಇತ್ತ ನಾಚಿಕೆ. ಕಡೆಗೂ ಕಾಗೆಯನ್ನು ಓಡಿಸಲಿಕ್ಕಾಗದೆ ಗಾಯಗೊಂಡು ಸಾಕುಸಾಕಾಗಿ, ಮತ್ತೆ ನಿನ್ನ ತೊಡೆಯಮೇಲೆ ಬಂದು ಕುಳಿತೆನು. ನಾನು ಕಣ್ಣೀರು ತುಂಬಿಕೊಂಡು ಕಣ್ಣನ್ನು ಒರೆಸಿಕೊಳ್ಳುತ್ತ ಕೋಪಗೊಂಡಿರಲು, ನೀನು ನಗುತ್ತಲೇ ನನ್ನನ್ನು ಸಮಾಧಾನಪಡಿಸಿದೆ' ಎಂದು ರಾಮನಿಗೆ ಹೇಳು (೧೭–೨೦). ವಾನರೋತ್ತಮ, ಅನಂತರ ನಾನು ಆಯಾಸಗೊಂಡು ರಾಘವನ ತೊಡೆಯಮೇಲೆ ಬಹಳಹೊತ್ತು ಮಲಗಿದ್ದೆನು. ನಾನು ಎದ್ದಮೇಲೆ ರಾಘವನು ನನ್ನ ತೊಡೆಯಮೇಲೆ ಮಲಗಿ ನಿದ್ರಿಸಿದನು. ಪುನಃ ಆ ಕಾಗೆಯು ಬಂದು ನನ್ನ ಎದೆಯನ್ನು ಕುಕ್ಕತೊಡಗಿತು (೨೧–೨೩). ರಕ್ತದ ಹನಿಗಳು ರಾಮನ ಮೇಲೆ ಸುರಿದವು. ಹೀಗೆ ಬಾಧೆಪಡುತ್ತಿದ್ದ ನಾನು ಬೇರೆ

ಉಪಾಯ ಕಾಣದೆ ಸುಖನಿದ್ರೆಯಲ್ಲಿದ್ದ ನನ್ನ ಪ್ರಿಯನನ್ನು ಎಚ್ಚರಗೊಳಿಸಿದೆನು. ಆ ವೀರನು ಎದ್ದು ನನ್ನ ಎದೆಯ ಗಾಯವನ್ನು ನೋಡಿ ಸರ್ಪದಂತೆ ಕ್ರುದ್ಧನಾದನು. 'ಸುಂದರಿ, ಯಾವನು ನಿನ್ನ ಎದೆಯನ್ನು ಗಾಯಗೊಳಿಸಿದವನು? ಐದು ಹೆಡೆಯ ಕ್ರುದ್ಧ ಸರ್ಪದೊಡನೆ ಸರಸವಾಡುವವನು ಯಾವನು?' ಎಂದು ಹೇಳುತ್ತ ಸುತ್ತಲೂ ನೋಡಿ ಆ ಕಾಗೆಯನ್ನು ಕಂಡನು (೨೪–೨೭). ಅದು ನನಗೆ ಅಭಿಮುಖವಾಗಿ ಕುಳಿತಿದ್ದಿತು. ಅದರ ತೀಕ್ಷ್ಣವಾದ ಉಗುರುಗಳು ರಕ್ತದಿಂದ ತೊಯ್ದಿದ್ದವು. ದೇವೇಂದ್ರನ ಮಗನಾದ ಜಯಂತನೇ ವಾಯಸ ವೇಷದಿಂದ ಭೂಲೋಕಕ್ಕೆ ಬಂದಿದ್ದನಂತೆ. ವೇಗದಲ್ಲಿ ಆ ವಾಯಸವು ವಾಯು ದೇವನಿಗೆ ಸಮಾನವಾಗಿತ್ತು. ರಾಘವನು ಕೋಪದಿಂದ ಕಣ್ಣನ್ನು ತಿರುಗಿಸುತ್ತ, ಆ ಕಾಗೆಯನ್ನು ಕೊಲ್ಲಬೇಕೆಂದು ಘೋರವಾದ ನಿಶ್ಚಯವನ್ನು ತಳೆದನು. ತಾನು ಕುಳಿತಿದ್ದ ಚಾಪೆಯಿಂದ ಒಂದು ದರ್ಭೆಯನ್ನು ಸೆಳೆದುಕೊಂಡು ಬ್ರಹ್ಮಾಸ್ತ್ರದ ಮಂತ್ರದಿಂದ ಅಭಿಮಂತ್ರಿಸಿದನು (೨೮–೩೦). ಆಗ ದರ್ಭೆಯು ಕಾಲಾಗ್ನಿಯಂತೆ ಜ್ವಲಿಸಲಾರಂಭಿಸಲು, ಅದನ್ನು ವಾಯಸದ ಮೇಲೆ ಪ್ರಯೋಗಿಸಿದನು. ವಾಯಸವು ದಿಕ್ಕುಗೆಟ್ಟು ಓಡಿತು. ದರ್ಭೆಯು ಆಕಾಶ ಮಾರ್ಗದಲ್ಲಿ ಅದನ್ನು ಬೆನ್ನಟ್ಟಿತು (೩೧–೩೨). ವಾಯಸವು ತನ್ನನ್ನು ಯಾರಾದರೂ ಉಳಿಸಿಯಾರೆಂದು ಪ್ರಪಂಚವನ್ನೆಲ್ಲಾ ಸುತ್ತಿತು. ಅದರ ತಂದೆಯಾದ ಇಂದ್ರನೂ, ದೇವತೆಗಳೂ, ಮಹರ್ಷಿಗಳೂ ಕೈಬಿಟ್ಟರು. ಕಾಗೆಯು ಮೂರು ಲೋಕಗಳನ್ನೂ ಸುತ್ತಿ ಕಡೆಗೆ ಶ್ರೀರಾಮನಿಗೇ ಶರಣುಬಂದು ನೆಲದ ಮೇಲೆ ಅಡ್ಡಬಿದ್ದಿತು. ಶರಣಾಗತವತ್ಸಲನಾದ ರಾಮನು ಕೃಪೆದೋರಿ ವಧಾರ್ಹವಾಗಿದ್ದರೂ ಆ ಕಾಗೆಯನ್ನು ಕಾಪಾಡಿದನು. ಬಳಲಿ ಬೆಂಡಾಗಿ ಬಂದ ಕಾಗೆಯನ್ನು ಕುರಿತು ಹೀಗೆ ಹೇಳಿದನು(೩೩–೩೫): 'ಎಲೈ, ಈ ಬ್ರಹ್ಮಾಸ್ತ್ರವು ಎಂದಿಗೂ ನಿರರ್ಥಕವಾಗಲಾರದು. ಇದು ಯಾವುದನ್ನು ನಾಶಮಾಡಲಿ? ಹೇಳು.' ಆ ಕಾಗೆಯು 'ನಿನ್ನ ಅಸ್ತ್ರವು ನನ್ನ ಬಲಗಣ್ಣನ್ನು ನಾಶಮಾಡಲಿ' ಎನ್ನಲಾಗಿ ಅಸ್ತ್ರವು ಅದರ ಬಲಗಣ್ಣನ್ನು ನಾಶಪಡಿಸಿತು. ಹೀಗೆ ವಾಯಸವು ಬಲಗಣ್ಣನ್ನು ಬಲಿಯಾಗಿ ಕೊಟ್ಟು ಪ್ರಾಣಸಹಿತ ಉಳಿದುಕೊಂಡಿತು(೩೬-೩೭). ಆಮೇಲೆ ಆ ಜಯಂತನು ಶ್ರೀರಾಮನಿಗೂ ದಶರಥಮಹಾರಾಜನಿಗೂ ವಂದಿಸಿ ಅನುಜ್ಞೆಯನ್ನು ಪಡೆದು ತನ್ನ ಲೋಕಕ್ಕೆ ಹೊರಟುಹೋದನು. (ಹನುಮಂತ,

ಈ ವೃತ್ತಾಂತವನ್ನು ರಾಮನಿಗೆ ತಿಳಿಸಿ ನಾನು ಹೇಳಿದೆನೆಂದು ಹೀಗೆ ಹೇಳು.) 'ನಾಥ, ನನಗೋಸ್ಕರ ಒಂದು ಕಾಗೆಯಮೇಲೆ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿದೆ. ಈಗ ನಿನ್ನನ್ನು ವಂಚಿಸಿ ನನ್ನನ್ನು ಕದ್ದುತಂದವನನ್ನು ಕ್ಷಮಿಸುವುದಾದರೂ ಏಕೆ? (೩೮-೩೯). ನನ್ನನ್ನು ಪಾರುಮಾಡಲು ಉತ್ಸಾಹಗೊಂಡು, ನನ್ನಮೇಲೆ ದಯೆಯನ್ನು ತೋರಿಸು. ನೀನೇ ನನಗೆ ದಿಕ್ಕು. ಈಗ ದಿಕ್ಕಿಲ್ಲದವಳಂತೆ ಆಗಿದ್ದೇನೆ. ದಯೆಯೆಂಬುದು ಶ್ರೇಷ್ಠವಾದ ಧರ್ಮವೆಂದು ನಿನ್ನ ಬಾಯಿಂದಲೇ ಕೇಳಿದ್ದೇನೆ. ನಿನ್ನ ಪರಾಕ್ರಮವನ್ನೂ ಬಲೋತ್ಸಾಹಗಳನ್ನೂ ನಾನು ಬಲ್ಲೆನು (೪೦-೪೧). ನೀನು ಅಪಾರಮಹಿಮನೂ, ಅಜೇಯನೂ, ಸಮುದ್ರದಂತೆ ಗಂಭೀರಸ್ವಭಾವದವನೂ, ಪೃಥಿವೀಮಂಡಲವನ್ನೇ ಪೋಷಿಸಬಲ್ಲವನೂ, ದೇವೇಂದ್ರಸದೃಶನೂ ಎಂಬುದನ್ನು ಬಲ್ಲೆನು. ಶ್ರೀರಾಮ, ಹೀಗೆ ಅಸ್ತ್ರವಿದರಲ್ಲಿ ಅಗ್ರಗಣ್ಯನೂ, ಸತ್ಯವಂತನೂ, ಬಲಾಢ್ಯನೂ ಆಗಿದ್ದರೂ ಈ ರಾಕ್ಷಸರಮೇಲೆ ನೀನು ಅಸ್ತ್ರವನ್ನೇಕೆ ಪ್ರಯೋಗಿಸುವುದಿಲ್ಲ?' ಎಂದು ರಘುನಾಥನಿಗೆ ತಿಳಿಸು (೪೨-೪೩). ಎಲೈ ಕಪಿವೀರನೆ, ನಾಗ, ಗಂಧರ್ವ, ಅಸುರ, ಮರುತ್ತುಗಳು ಯಾರೂ ಯುದ್ಧದಲ್ಲಿ ರಾಮನ ವೇಗವನ್ನು ತಡೆದುಕೊಳ್ಳಲಾರರು. ಆ ವೀರನಿಗೆ ನನ್ನ ವಿಷಯದಲ್ಲಿ ತವಕವಿದ್ದರೆ, ಈ ರಾಕ್ಷಸರನ್ನು ಉಗ್ರವಾದ ಬಾಣಗಳಿಂದ ಏಕೆ ನಾಶಪಡಿಸಬಾರದು? (೪೪-೪೫). ಬಲಾಢ್ಯನಾದ ಲಕ್ಷ್ಮಣನಾದರೂ ಅಣ್ಣನ ಆಜ್ಞೆಯನ್ನು ಪಡೆದು ನನ್ನನ್ನು ಏಕೆ ಉಳಿಸಿಕೊಳ್ಳದೆ ಇರಬಹುದು? ಅಗ್ನಿವಾಯುಗಳಂತೆ ಮಹಾತೇಜಸ್ವಿಗಳಾದ ಆ ಪುರುಷಶ್ರೇಷ್ಠರು ದೇವತೆಗಳಿಗೂ ಅಜೇಯರಾಗಿರುವಾಗ, ನನ್ನನ್ನು ಏಕೆ ಉಪೇಕ್ಷಿಸುತ್ತಿದ್ದಾರೆ? (೪೬-೪೭). ಮುಖ್ಯವಾಗಿ ನಾನು ಮಾಡಿರುವ ಪಾಪಕರ್ಮ ದೊಡ್ಡದು. ಅದು ಅವರನ್ನು ಉಪೇಕ್ಷಿಸುವಂತೆ ಮಾಡಿದೆ" ಎಂದಳು (೪೮). ಹೀಗೆ ಸೀತೆಯು ಕಣ್ಣೀರುಸುರಿಸುತ್ತ ಆಡಿದ ಎದೆ ಕರಗುವ ಮಾತನ್ನು ಆಲಿಸಿ ಹನುಮಂತನು "ದೇವಿ, ಆಣೆಮಾಡಿ ಹೇಳುತ್ತೇನೆ. ಶ್ರೀರಾಮನಿಗೆ ನಿನ್ನ ವಿರಹದುಃಖದಿಂದಲೇ ಸಮಸ್ತಕಾರ್ಯಗಳೂ ಬೇಡವಾಗಿವೆ. ಅವನ ದುಃಖವನ್ನು ನೋಡಿ ಲಕ್ಷ್ಮಣನೂ ಸಂಕಟಪಡುತ್ತಿದ್ದಾನೆ (೪೯-೫೦). ಅಂತೂ ನಿನ್ನನ್ನು ಕಂಡದ್ದಾಯಿತು. ಇದು ಶೋಕಿಸುವ ಕಾಲವಲ್ಲ ಸ್ವಲ್ಪಕಾಲದಲ್ಲಿಯೇ ನಿನ್ನ ಶೋಕವು ಪರಿಹಾರಹೊಂದುವುದು. ಆ ಇಬ್ಬರು ರಾಜಪುತ್ರರೂ

❀

ನಿನ್ನನ್ನು ಕಾಣುವ ಉತ್ಸಾಹದಿಂದ ಲಂಕೆಯನ್ನು ಸುಟ್ಟು ಬೂದಿಮಾಡುವರು (೫೧–೫೨). ಹೇ ವಿಶಾಲಾಕ್ಷಿ, ರಾಘವನು ಕ್ರೂರಿಯಾದ ರಾವಣನನ್ನು ಬಂಧುಸಮೇತ ಸಂಹಾರಮಾಡಿ ನಿನ್ನನ್ನು ಅಯೋಧ್ಯಾನಗರಕ್ಕೆ ಕರೆದುಕೊಂಡು ಹೋಗುವನು. ಈಗ ರಾಮಲಕ್ಷ್ಮಣರಿಗೂ ಸುಗ್ರೀವವಾನರರಿಗೂ ಏನನ್ನಾದರೂ ಹೇಳಿಕಳಿಸಬೇಕಾಗಿದ್ದರೆ ಹೇಳು" ಎಂದನು (೫೩–೫೪). ಆಗ ಸೀತಾದೇವಿಯು ದುಃಖಿಸುತ್ತ ಹನುಮಂತನಿಗೆ "ಕೌಸಲ್ಯಾಮಾತೆಯು ಲೋಕಸಂರಕ್ಷಣಾರ್ಥವಾಗಿ ಯಾರನ್ನು ಹಡೆದಿರುವಳೋ ಆತನಿಗೆ ಕುಶಲವನ್ನು ವಿಚಾರಿಸಿದ್ದೇನೆಂದು ನನ್ನ ಪರವಾಗಿ ಹೇಳಿ ತಲೆಬಾಗಿ ನಮಸ್ಕರಿಸಿದ್ದೇನೆಂದು ತಿಳಿಸು (೫೫–೫೬). ಸುಮಿತ್ರಾದೇವಿಯ ಸುಕುಮಾರ ಲಕ್ಷ್ಮಣ. ಅವನು ಹೂಮಾಲೆಗಳು, ರತ್ನಗಳು, ಉತ್ತಮಸ್ತ್ರೀಯರು, ಇನ್ನೆಲ್ಲಿಯೂ ದೊರಕದಷ್ಟು ಐಶ್ವರ್ಯ—ಇವೆಲ್ಲವನ್ನೂ ತೊರೆದು ತಂದೆತಾಯಿಗಳನ್ನು ಒಪ್ಪಿಸಿ ಹಿಂದೆಯೇ ಬಂದುಬಿಟ್ಟನು (೫೭–೫೮). ಆ ಧರ್ಮಾತ್ಮನು ಉತ್ತಮವಾದ ಸುಖವನ್ನು ತ್ಯಜಿಸಿ ಕಾಡಿನಲ್ಲಿ ಅಣ್ಣನಿಗೆ ಬೆಂಬಲವಾಗಿ ಇದ್ದುಬಿಟ್ಟನು. ಅವನಿಗೆ ಸಿಂಹದಂತಹ ಹೆಗಲು; ಆಜಾನುಬಾಹು; ಧೀರ; ನೋಡಿದರೆ ಆನಂದವಾಗುವುದು. ರಾಮನನ್ನು ತಂದೆಯೆಂದೂ, ನನ್ನನ್ನು ತಾಯಿಯೆಂದೂ ತಿಳಿದುಕೊಂಡಿದ್ದಾನೆ (೫೯–೬೦). ರಾವಣನು ನನ್ನನ್ನು ಅಪಹರಿಸಿದ್ದು ಆ ವೀರನಿಗೆ ಗೊತ್ತಾಗದೆ ಹೋಯಿತು. ಲಕ್ಷ್ಮಣನು ಗುರುಹಿರಿಯರ ಸೇವಕ; ಸಮರ್ಥ; ಹೆಚ್ಚು ಮಾತನಾಡತಕ್ಕವನಲ್ಲ. ನನ್ನ ಮಾವನಿಗೆ ಪ್ರಿಯನಾದ ರಾಜಪುತ್ರ. ಆತನಿಗೆ ತಕ್ಕ ಮಗ. ರಾಮನಿಗೆ ಲಕ್ಷ್ಮಣನೆಂದರೆ ನನ್ನಮೇಲೆ ಇರುವುದಕ್ಕಿಂತಲೂ ಅಧಿಕ ಪ್ರೀತಿ (೬೧–೬೨). ಯಾವ ಕಾರ್ಯವನ್ನು ವಹಿಸಿದರೂ ನಡೆಸಬಲ್ಲ ದಕ್ಷ. ರಾಮನು ಅವನನ್ನು ಕಂಡು, ಮೃತನಾದ ತನ್ನ ತಂದೆಯನ್ನೂ ಸ್ಮರಿಸಿಕೊಂಡು ದುಃಖಿಸದೆ ಇದ್ದನು. ಲಕ್ಷ್ಮಣನು ಮೃದುಸ್ವಭಾವದವನು; ಶುದ್ಧಾತ್ಮ; ಕಾರ್ಯದಕ್ಷ. ಆತನ ಕುಶಲವನ್ನು ನಾನು ವಿಚಾರಿಸಿದ್ದೇನೆಂದು ಹೇಳು (೬೩–೬೪). 'ವಾನರೋತ್ತಮ, ಮುಖ್ಯವಾಗಿ ನನ್ನ ಕಷ್ಟವು ಮುಗಿಯುವಂತೆ ಮಾಡುವ ಕಾರ್ಯಭಾರ ನಿನಗೆ ಸೇರಿದೆ. ನಿನ್ನ ಪ್ರಯತ್ನದಿಂದಲೇ ಶ್ರೀರಾಮನು ನನ್ನನ್ನು ಕರೆಯಿಸಿಕೊಳ್ಳಬೇಕಾಗಿದೆ. ನನ್ನ ಸ್ವಾಮಿಗೆ ಮತ್ತೆ ಮತ್ತೆ ಈ ಮಾತನ್ನು ಹೇಳು (೬೫–೬೬): 'ರಾಮ, ಇನ್ನು ಒಂದು ತಿಂಗಳು ಮಾತ್ರ ನಾನು ಬದುಕಿರುತ್ತೇನೆ. ಒಂದು

ತಿಂಗಳಾದಮೇಲೆ ಸತ್ಯದ ಆಣೆಯಾಗಿಯೂ ನಾನು ಬದುಕಿರುವುದಿಲ್ಲ. ಶ್ರೀಮನ್ನಾರಾಯಣನು ಇಂದ್ರನ ರಾಜ್ಯಲಕ್ಷ್ಮಿಯನ್ನು ಪಾತಾಳದಿಂದ ಉದ್ಧರಿಸಿ ತಂದಂತೆ,* ಪಾಪಿಯಾದ ರಾವಣನ ಸೆರೆಯಿಂದ ನನ್ನನ್ನು ಬಿಡಿಸಿ ನೀನೇ ರಕ್ಷಿಸಬೇಕು" ಎಂದಳು (೬೭–೬೮). ಅನಂತರ ತನ್ನ ಸೆರಗಿನಲ್ಲಿ ಕಟ್ಟಿದ್ದ ದಿವ್ಯವಾದ ಚೂಡಾಮಣಿಯನ್ನು ತೆಗೆದು 'ಇದನ್ನು ಶ್ರೀರಾಮನಿಗೆ ಕೊಡು' ಎಂದು ಹೇಳಿ ಹನುಮಂತನ ಕೈಯಲ್ಲಿ ಇಟ್ಟಳು. ಆಂಜನೇಯನು ಸರ್ವೋತ್ತಮವಾದ ಆ ಚೂಡಾಮಣಿಯನ್ನು ಸ್ವೀಕರಿಸಿ ತನ್ನ ಬೆರಳಿನಲ್ಲಿ ಹಾಕಿಕೊಂಡನು. (ಆಗ ಸೂಕ್ಷ್ಮರೂಪಿಯಾಗಿದ್ದರೂ) ಅವನ ಭುಜವು ರಂಧ್ರದಲ್ಲಿ ಹಿಡಿಸಲಿಲ್ಲ (೬೯–೭೦). ಅನಂತರ ಸೀತಾದೇವಿಗೆ ಪ್ರದಕ್ಷಿಣನಮಸ್ಕಾರವನ್ನು ಮಾಡಿ ನಮ್ರತೆಯಿಂದ ಬಳಿಯಲ್ಲಿ ನಿಂತುಕೊಂಡನು. ಸೀತಾದರ್ಶನದಿಂದ ಅವನಿಗಾದ ಹರ್ಷಕ್ಕೆ ಪಾರವೇ ಇರಲಿಲ್ಲ. ಆಗಲೇ ಮನಸ್ಸಿನಲ್ಲಿ ಶ್ರೀರಾಮನ ಬಳಿಗೆ ಹೋಗಿಬಿಟ್ಟಿದ್ದನು! ದೇಹದಿಂದ ಮಾತ್ರ ಅಲ್ಲಿ ನಿಂತಿದ್ದನು(೭೧–೭೨). ಹೀಗೆ ಆಂಜನೇಯನು ತನ್ನ ಒಂದು ಸಾಮರ್ಥ್ಯದಿಂದ, ಜಾನಕಿಯು ಧರಿಸಿದ್ದ ಅಮೂಲ್ಯವಾದ ಚೂಡಾಮಣಿಯನ್ನು ಪಡೆದನು. (ಸೀತೆಯು ಸಿಕ್ಕುವಳೋ ಇಲ್ಲವೋ ಎಂಬ ಕಳವಳವು ಮಾಯವಾಗಿ) ಮನಸ್ಸಿಗೆ ನೆಮ್ಮದಿಯಾಯಿತು. ಬಿರುಗಾಳಿಯು ಹೊಡೆತವು ನಿಂತಮೇಲೆ ಕಾಣುವ ಪರ್ವತದಂತೆ ಸ್ವಸ್ಥನಾಗಿ ಹಿಂದಿರುಗಿ ಪ್ರಯಾಣಮಾಡಲು ಸಿದ್ಧನಾದನು (೭೩).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಮೂವತ್ತೆಂಟನೆಯ ಸರ್ಗ

---

* ಅನುಬಂಧವನ್ನು ನೋಡಿ.

## ಸರ್ಗ ೩೯

ಸೀತೆಯು ತನ್ನನ್ನು ಬಿಡಿಸಿಕೊಂಡು ಹೋಗುವಂತೆ ರಾಮನಿಗೆ ಸಂದೇಶವನ್ನು ಕಳುಹಿಸುವುದು. ರಾಮ ಮುಂತಾದವರು ಸಮುದ್ರವನ್ನು ದಾಟುವುದು ಹೇಗೆಂದು ಅವಳು ಸಂದೇಹವನ್ನು ವ್ಯಕ್ತಪಡಿಸಲು, ಹನುಮಂತನು ಸಮಾಧಾನ ಹೇಳುವುದು.

ಸೀತೆಯು ಹನುಮಂತನಿಗೆ ಚೂಡಾಮಣಿಯನ್ನು ಕೊಟ್ಟು "ವಾನರೋತ್ತಮ, ಈ ಅಭಿಜ್ಞಾನವನ್ನು ಶ್ರೀರಾಮನು ಚೆನ್ನಾಗಿ ಬಲ್ಲನು. ಈ ಮಣಿಯನ್ನು ನೋಡಿದೊಡನೆ ಅವನಿಗೆ ತನ್ನ ತಾಯಿ, ನಾನು, ದಶರಥಮಹಾರಾಜ —ಈ ಮೂವರ ನೆನಪಾಗುವುದು (೧–೨). ಅವನು (ಮುಂದಿನ ರಾಜಕಾರ್ಯಕ್ಕಾಗಿ) ಉತ್ಸಾಹದಿಂದ ನಿನ್ನನ್ನೇ ಪ್ರೇರಿಸಬಹುದು. ಅನಂತರ ಏನು ಮಾಡಬೇಕೆಂಬುದನ್ನು ಆಲೋಚಿಸು. ಒಟ್ಟಿನಲ್ಲಿ ಈ ಕಾರ್ಯವು ನಿನ್ನನ್ನೇ ಅವಲಂಬಿಸಿದೆ. ಹೇಗಾದರೂ ಪ್ರಯತ್ನಿಸಿ ನನ್ನ ದುಃಖವು ನೀಗುವಂತೆ ಮಾಡು" ಎಂದಳು (೩–೪). ಪರಾಕ್ರಮಿಯಾದ ವಾಯುಪುತ್ರನು ಹಾಗೆಯೇ ಆಗಲೆಂದು ಮಾತುಕೊಟ್ಟು ಜಾನಕಿಗೆ ನಮಸ್ಕಾರ ಮಾಡಿ, ಹೊರಡಲು ಉದ್ಯುಕ್ತನಾದನು. ಆಗ ಜಾನಕಿಯು ಮತ್ತೆ ಕಣ್ಣೀರು ಬಿಡುತ್ತ ಗದ್ಗದಸ್ವರದಿಂದ "ಹನುಮಂತ, ರಾಮಲಕ್ಷ್ಮಣರ ಯೋಗಕ್ಷೇಮಗಳನ್ನು ಕೇಳಿದೆನೆಂದು ಹೇಳು (೫–೭). ಸುಗ್ರೀವನಿಗೂ ಅವನ ಮಂತ್ರಿಗಳಿಗೂ ಹಿರಿಯರಾದ ಎಲ್ಲಾ ವಾನರರಿಗೂ ನಾನು ಧರ್ಮಯುಕ್ತವಾಗಿ ಕ್ಷೇಮವನ್ನು ವಿಚಾರಿಸಿದೆನೆಂದು ಹೇಳು. ಈ ದುಃಖಸಮುದ್ರದಿಂದ ನನ್ನನ್ನು ಪಾರುಮಾಡಬೇಕೆಂದು ನೀನು ರಾಮನನ್ನು ಪ್ರೋತ್ಸಾಹಿಸಬೇಕು. ಅಪ್ಪಾ—ಹನುಮಂತ, ನಾನು ಪ್ರಾಣವನ್ನು ಬಿಡುವುದರೊಳಗೆ ರಾಮನು ನನ್ನನ್ನು ಉಳಿಸಿ ಮನ್ನಿಸುವಹಾಗೆ ಮಾಡು. ಹೀಗೆ ಹೇಳುವುದರಿಂದ ನಿನಗೆ ಎಷ್ಟೋ ಪುಣ್ಯಬರುತ್ತದೆ (೮–೧೦). ನೀನು ಪ್ರೋತ್ಸಾಹದ ಮಾತನ್ನಾಡಿದರೆ ನನ್ನನ್ನು ಬಿಡಿಸಿಕೊಳ್ಳಬೇಕೆಂದು ರಾಮನಿಗೆ ಉತ್ಸಾಹ ಹುಟ್ಟುತ್ತದೆ. ನನ್ನ ಸಂದೇಶವನ್ನು ನಿನ್ನ ಮುಖದಿಂದ ಕೇಳಿದೊಡನೆ, ಆ ವೀರನು ಪರಾಕ್ರಮವನ್ನು ಮೆರೆಸಲು ಮನಸ್ಸುಮಾಡುತ್ತಾನೆ" ಎಂದಳು (೧೧–೧೨). ಆಗ ಆಂಜನೇಯನು ತಲೆಯಮೇಲೆ ಕೈಜೋಡಿಸಿಕೊಂಡು "ಅಮ್ಮಾ, ಶ್ರೀರಾಮನು ವಾನರಭಲ್ಲೂಕಗಳೊಡನೆ ಶೀಘ್ರದಲ್ಲಿಯೇ ಬಂದು

ಶತ್ರುಗಳನ್ನು ಗೆದ್ದು ನಿನ್ನ ಶೋಕವನ್ನು ಪರಿಹರಿಸುವನು. ಅವನು ಅಸ್ತ್ರಗಳನ್ನು ಸೆಳೆದು ಬಿಡುತ್ತ ಯುದ್ಧಕ್ಕೆ ನಿಂತರೆ, ಮನುಷ್ಯರಲ್ಲಾಗಲಿ, ದೇವಾಸುರರಲ್ಲಾಗಲಿ ಎದುರಿಸಬಲ್ಲವನನ್ನು ನಾನು ಅರಿಯೆ (೧೩–೧೫). ಸೂರ್ಯನನ್ನಾಗಲಿ, ಇಂದ್ರನನ್ನಾಗಲಿ, ಕಡೆಗೆ ಯಮನನ್ನೇ ಆಗಲಿ–ಅವನು ಎದುರಿಸಿ ನಿಲ್ಲಬಲ್ಲನು. ಆದರಲ್ಲಿಯೂ ನಿನಗೋಸ್ಕರ ಯುದ್ಧಮಾಡುತ್ತಾನೆಂದರೆ ಹೇಳುವುದೇನು ? ಜನಕಪುತ್ರಿ, ನಿನಗೋಸ್ಕರ ಜಯಾಪೇಕ್ಷೆಯಿಂದ ನಿಂತರೆ ಇಡೀ ಜಗತ್ತನ್ನೇ ವಶಪಡಿಸಿಕೊಳ್ಳಬಲ್ಲನು" ಎಂದು ಹೇಳಿದನು (೧೬-೧೭). ಸತ್ಯವೂ ಮಧುರವೂ ಆದ ಹನುಮಂತನ ಮಾತನ್ನು ಆಲಿಸಿ, ಜಾನಕಿಯು ಅವನನ್ನು ಶ್ಲಾಘಿಸಿದಳು. ಅವನನ್ನೇ ಮತ್ತೆಮತ್ತೆ ನೋಡುತ್ತಿದ್ದಳು. ತನ್ನ ಗಂಡನಮೇಲಿದ್ದ ಪ್ರೇಮದಿಂದ ಹನುಮಂತನನ್ನು ಕುರಿತು "ಎಲೈ ವೀರನೆ, ನಿನಗೆ ಸಮ್ಮತವಾದರೆ ಒಂದು ದಿನ ಇಲ್ಲಿಯೇ ಉಳಿದುಕೊ. ಎಲ್ಲಿಯಾದರೂ ಅಡಗಿಕೊಂಡು ವಿಶ್ರಾಂತಿಯನ್ನು ಪಡೆದು ನಾಳೆ ಹೋಗಬಹುದು (೧೮–೨೦). ನೀನು ಇದ್ದರೆ ಮಂದಭಾಗ್ಯಳಾದ ನನ್ನ ದುಃಖವು ಸ್ವಲ್ಪಹೊತ್ತಾದರೂ ತಪ್ಪುವುದು. ವಾನರಶ್ರೇಷ್ಠ, ನೀನು ಹೊರಟುಹೋದರೆ ಪುನಃ ಬರುವವರೆಗೆ ನನ್ನ ಪ್ರಾಣವು ಉಳಿದಿರುತ್ತದೆಯೊ ಇಲ್ಲವೊ (೨೧–೨೨). ನೀನು ಹೋದಮೇಲೆ ನಿನ್ನನ್ನು ಕಾಣದಿರುವ ದುಃಖವು ನನ್ನ ಹಿಂದಿನ ದುಃಖವನ್ನು ಕೆರಳಿಸಿ ಎಬ್ಬಿಸುವುದು. ಅಲ್ಲದೆ ನಿನಗೆ ಸಹಾಯವಾಗಿ ಬರುವ ವಾನರಭಲ್ಲೂಕಗಳ ವಿಷಯದಲ್ಲಿ ನನಗೆ ಒಂದು ಸಂಶಯ ಇನ್ನೂ ಇದೆ (೨೩–೨೪). ದುಸ್ತರವಾದ ಮಹಾಸಾಗರವನ್ನು ಅವರಾಗಲಿ, ರಾಮಲಕ್ಷ್ಮಣರಾಗಲಿ ಹೇಗೆ ದಾಟುವರು ? ಈ ಸಾಗರವನ್ನು ದಾಟಲು ಗರುಡ, ನೀನು, ವಾಯು—ಈ ಮೂವರಿಗೆ ಮಾತ್ರ ಶಕ್ತಿ ಇದೆ (೨೫–೨೬). ಇಂತಹ ಅಸಾಧ್ಯವಾದ ಕಾರ್ಯದಲ್ಲಿ ನಿನ್ನ ಸಮಾಧಾನವೇನು ? ಕಾರ್ಯವನ್ನು ಸಾಧಿಸುವುದರಲ್ಲಿ ನೀನೇ ಅಗ್ರಗಣ್ಯ. ವೀರಾಗ್ರಣಿ, ನೀನೊಬ್ಬನೇ ಬೇಕಾದರೂ (ನನ್ನನ್ನು ಬಿಡಿಸಿ) ಕಾರ್ಯವನ್ನು ಸಾಧಿಸಬಲ್ಲೆ. ಬಲಶಾಲಿಯೆಂದು ನಿನಗೆ ಕೀರ್ತಿಬರುವುದು (೨೭–೨೮). ಆದರೆ ರಾಮನು ತನ್ನ ಸಮಗ್ರಬಲದಿಂದ ರಾವಣನನ್ನು ಗೆದ್ದು ವಿಜಯಶಾಲಿಯಾಗಿ ನನ್ನನ್ನು ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗುವುದಾದರೆ, ನನಗೆ ಒಳ್ಳೆಯ ಹೆಸರು ಬರುತ್ತದೆ. ಆ ವೀರನು ತನ್ನ ಶರಗಳಿಂದ ಲಂಕೆಯನ್ನು ಮುಚ್ಚಿ, ಶತ್ರುವನ್ನು ನಾಶಮಾಡಿ ನನ್ನನ್ನು

ಕರೆದೊಯ್ದರೆ, ಆಗ ಅದು ರಾಮನ ಹೆಸರಿಗೆ ಯೋಗ್ಯವಾದ ಕೆಲಸವಾಗುವುದು (೨೯–೩೦). ರಣಧೀರನಾದ ಆ ಮಹಾತ್ಮನು ತನಗೆ ಅನುರೂಪವಾದ ಪರಾಕ್ರಮವನ್ನು ತೋರಿಸುವಂತೆ ನೀನು ಏರ್ಪಡಿಸಬೇಕು" ಎಂದು ಹೇಳಿದಳು (೩೧). ಅರ್ಥಗರ್ಭಿತವೂ ಯುಕ್ತಿಯುಕ್ತವೂ ಆದ ಸೀತೆಯ ಮಾತನ್ನು ಕೇಳಿ ಹನುಮಂತನು "ದೇವಿ, ನಮ್ಮ ವಾನರಭಲ್ಲೂಕಗಳಿಗೆ ಅಧಿಪತಿಯಾದ ಸುಗ್ರೀವನು ಮಹಾವೀರನು. ಈ ಕಾರ್ಯವನ್ನು ಸಾಧಿಸಬೇಕೆಂದು ದೃಢ ನಿಶ್ಚಯವನ್ನು ಮಾಡಿದ್ದಾನೆ. ರಾಕ್ಷಸರನ್ನು ಸಂಹರಿಸುವುದಕ್ಕಾಗಿ ಅವನು ಸಾವಿರಕೋಟಿ ವಾನರರೊಡನೆ ಕ್ಷಿಪ್ರದಲ್ಲಿಯೇ ಇಲ್ಲಿಗೆ ಬರುವನು (೩೨–೩೪). ಅವನ ಬಳಿಯಲ್ಲಿರುವ ಕಪಿಗಳು ಪರಾಕ್ರಮಿಗಳು; ಸತ್ತ್ವವುಳ್ಳವರು; ಅಧಿಕಬಲ ಸಂಪನ್ನರು; ಮನೋವೇಗದಿಂದ ಪ್ರಯಾಣ ಮಾಡಬಲ್ಲರು; ಮೇಲೆ, ಕೆಳಗೆ, ಅಡ್ಡಲಾಗಿ ಸಂಚಾರಮಾಡಲು ಎಲ್ಲಿಯೂ ಅವರಿಗೆ ತಡೆಯೇ ಇಲ್ಲ. ಯಾವ ದೊಡ್ಡ ಕಾರ್ಯವನ್ನು ಸಾಧಿಸುವುದಕ್ಕೂ ಅವರು ಹಿಂಜರಿಯುವುದಿಲ್ಲ (೩೫–೩೬). ಈ ಜಗತ್ತಿನಲ್ಲಿರುವ ಸಕಲ ಸಮುದ್ರಪರ್ವತಗಳನ್ನೂ ಆಕಾಶಮಾರ್ಗ ದಲ್ಲಿ ಎಷ್ಟೋಸಲ ಸುತ್ತಿ ಬಂದಿದ್ದಾರೆ. ಆ ಕಪಿಗಳು ನನಗಿಂತ ಬಲಶಾಲಿಗಳು. ಕೆಲವರು ನನ್ನಷ್ಟು ಬಲಶಾಲಿಗಳು. ನನಗಿಂತ ಕಡಿಮೆಯಾದವನು ಸುಗ್ರೀವನ ಬಳಿ ಒಬ್ಬನೂ ಇಲ್ಲ! (೩೭–೩೮). ನಾನೇ ಸಮುದ್ರವನ್ನು ದಾಟಿ ಬಂದೆ. ಆ ವೀರರ ವಿಷಯದಲ್ಲಿ ಹೇಳುವುದೇನು? ಸಾಮಾನ್ಯರಾದವರನ್ನು ಇಂತಹ ದೂತಕಾರ್ಯಕ್ಕೆ ಕಳುಹಿಸುತ್ತಾರೆಯೇ ಹೊರತು ಉತ್ತಮರನ್ನು ಕಳುಹಿಸು ವುದಿಲ್ಲ. ಆದ್ದರಿಂದ, ದೇವಿ, ನೀನು ಚಿಂತಿಸಬೇಡ. ಕಪಿವೀರರು ಒಂದೇ ನೆಗೆತಕ್ಕೆ ಲಂಕೆಯನ್ನು ಸೇರಿಬಿಡುವರು (೩೯–೪೦). ರಾಮಲಕ್ಷ್ಮಣರು ಉದಿಸಿ ಬಂದ ಸೂರ್ಯಚಂದ್ರರಂತೆ, ನನ್ನ ಬೆನ್ನಿನಮೇಲೆ ಏರಿ ಇಲ್ಲಿಗೆ ಬರುವರು. ನರ ಶ್ರೇಷ್ಠರಾದ ಆ ವೀರರು ಶರಗಳಿಂದ ಈ ಲಂಕೆಯನ್ನು ಧ್ವಂಸಮಾಡುವರು. ಶ್ರೀರಾಮನು ರಾವಣನನ್ನು ಸಪರಿವಾರವಾಗಿ ವಧಿಸಿ ನಿನ್ನನ್ನು ಅಯೋಧ್ಯಾ ನಗರಕ್ಕೆ ಕರೆದೊಯ್ಯುವನು (೪೧–೪೩). ಸಮಾಧಾನಮಾಡಿಕೊಳ್ಳಮ್ಮ. ನಿನಗೆ ಮಂಗಳವಾಗುವುದು. ಸ್ವಲ್ಪ ಸಮಯವನ್ನು ಪ್ರತೀಕ್ಷಿಸುತ್ತಿರು. ಪ್ರಜ್ವಲಿಸುವ ಅಗ್ನಿಯಂತೆ ರಾಮನು ನಿನಗೆ ಗೋಚರಿಸುವನು. ರಾವಣನು ಸತ್ತಮೇಲೆ, ರೋಹಿಣಿಯು ಚಂದ್ರನೊಡನೆ ಕೂಡಿಕೊಳ್ಳುವಂತೆ, ನೀನು

ರಾಮನೊಡನೆ ಸೇರುವೆ (೪೪–೪೫). ಸದ್ಯದಲ್ಲಿಯೇ ನಿನ್ನ ಶೋಕವು ಕೊನೆಗೊಳ್ಳುವುದು. ಶ್ರೀರಾಮನು ರಾವಣನನ್ನು ಕೊಲ್ಲುವುದನ್ನು ನೀನೇ ನೋಡುವೆ" ಎಂದು ಹೇಳಿ ಪ್ರಯಾಣಸನ್ನದ್ಧನಾದನು. ಮತ್ತೆ ಸೀತೆಯ ಕಡೆ ತಿರುಗಿ "ರಾಮಲಕ್ಷ್ಮಣರು ಧನುಷ್ಪಾಣಿಗಳಾಗಿ ಲಂಕೆಯ ಬಾಗಿಲಲ್ಲಿ ಬಂದು ನಿಲ್ಲುವುದನ್ನು ನೀನೇ ನೋಡುತ್ತೀಯೆ (೪೬–೪೭). ಸಿಂಹಶಾರ್ದೂಲಗಳಂತೆ ಪರಾಕ್ರಮಿಗಳೂ, ಸಲಗಗಳಂತೆ ಮಹಾಶರೀರಧಾರಿಗಳೂ, ನಖದಂಷ್ಟ್ರಗಳಿಂದಲೇ ಹೋರಾಡತಕ್ಕವರೂ ಆದ ಕಪಿವೀರರು ಬಂದು ಮುತ್ತುವುದನ್ನು ನೀನೇ ನೋಡುತ್ತೀಯೆ. ಲಂಕೆಯ ಸಮೀಪದಲ್ಲಿ ಮಲಯಪರ್ವತಗಳಮೇಲೆ ಬೆಟ್ಟಗಳಂತೆಯೂ ಮೇಘಗಳಂತೆಯೂ ನೆರೆದು, ಗರ್ಜಿಸುವ ಕಪಿವೀರರ ಸಿಂಹನಾದವನ್ನು ನೀನೇ ಕೇಳುತ್ತೀಯೆ (೪೮–೫೦). ಮದನಬಾಣದಿಂದ ಪೀಡಿತನಾದ ರಘುನಾಥನು ನಿನ್ನನ್ನು ಅಗಲಿದಮೇಲೆ, ಸಿಂಹಪೀಡಿತನಾದ ಗಜರಾಜನಂತೆ ವ್ಯಥೆಪಡುತ್ತಿದ್ದಾನೆ. ಅಮ್ಮ, ಅಳಬೇಡ; ಕೆಡಕನ್ನು ಚಿಂತಿಸಬೇಡ. ನಿನಗೆ ದೇವೇಂದ್ರನಂತಹ ಪತಿ ಇದ್ದಾನೆ. ನೀನು ಅನಾಥಳಲ್ಲ (೫೧–೫೨). ರಾಮನಿಗಿಂತ ಮೇಲಾದವರು ಯಾರು? ಲಕ್ಷ್ಮಣನಿಗೆ ನಾಟಿ ಯಾರು? ಆ ಸಹೋದರರು ಅಗ್ನಿಮಾರುತಗಳಂತೆ ನಿನಗೆ ಬೆಂಬಲವಾಗಿದ್ದಾರೆ. ದೇವಿ, ರಾಕ್ಷಸರು ವಾಸವಾಗಿರುವ ಈ ಭಯಂಕರ ದೇಶದಲ್ಲಿ ನೀನು ಇನ್ನು ಹೆಚ್ಚುಕಾಲ ಇರಬೇಕಾಗಿಲ್ಲ. ಸದ್ಯದಲ್ಲಿಯೇ ನಿನ್ನ ಪ್ರಿಯನ ಸಮಾಗಮವಾಗುವುದು. ನಾನು ರಾಮನ ಬಳಿಗೆ ಸೇರುವುದೊಂದೇ ತಡ. ಅಲ್ಲಿಯವರೆಗೆ ಸಹಿಸಿಕೊಂಡಿರು" ಎಂದನು (೫೩–೫೪).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಮೂವತ್ತೊಂಬತ್ತನೆಯ ಸರ್ಗ

# ಸರ್ಗ ೪೦

ರಾಮನು ಸೀತೆಯ ಹಣೆಯಮೇಲೆ ಮಣಿಶಿಲೆಯಿಂದ ತಿಲಕವನ್ನು ರಚಿಸಿದನೆಂಬ ಇನ್ನೊಂದು ಗುರುತನ್ನು ಹೇಳಿ, ಸೀತೆಯು ಹನುಮಂತನನ್ನು ಬೀಳ್ಕೊಡುವುದು.

ಆಗ ದೇವಕನ್ಯೆಯಂತಿರುವ ಸೀತಾದೇವಿಯು ತನಗೆ ಹಿತಕರವಾದ ಇನ್ನೊಂದು ಮಾತನ್ನು ಹೇಳಿದಳು : "ಕಪಿಶ್ರೇಷ್ಠನೆ, ಸಸಿಗಳು ಅರ್ಧ ಬೆಳೆದು ನಿಂತಿರುವಾಗ ಒಣಗುತ್ತಿರುವ ಭೂಮಿಗೆ ಮಳೆಯು ಬಂದರೆ ಉಲ್ಲಾಸವಾಗುವಂತೆ, ನಿನ್ನ ಮಾತನ್ನು ಕೇಳಿ ನನಗೆ ಉಲ್ಲಾಸವಾಯಿತು (೧–೨). ವಿರಹಶೋಕದಿಂದ ಬಸವಳಿದ ಅಂಗಗಳಿಂದ ಶ್ರೀರಾಮನನ್ನು ಗಾಢವಾಗಿ ಸ್ಪರ್ಶ ಮಾಡಲು ಹಾತೊರೆಯುತ್ತಿದ್ದೇನೆ. ನನ್ನ ಆಸೆಯನ್ನು ದಯೆದೋರಿ ನೆರವೇರಿಸಿಕೊಡು. ನಾನು ಅಭಿಜ್ಞಾನವಾಗಿ ಕೊಟ್ಟಿರುವ ಚೂಡಾಮಣಿಯನ್ನು ರಾಮನಿಗೆ ಕೊಡು. ಅವನು ಕೋಪದಿಂದ ದರ್ಭೆಯನ್ನು ಪ್ರಯೋಗಿಸಿ ಕಾಗೆಯ ಕಣ್ಣನ್ನು ನಾಶಮಾಡಿದ ವೃತ್ತಾಂತವನ್ನು ಹೇಳು (೩–೪). ಇನ್ನೂ ಒಂದು ಗುರುತನ್ನು ನಾನು ಹೇಳಿದೆನೆಂದು ತಿಳಿಸು : 'ಹೇ ಪ್ರಿಯ, ಒಮ್ಮೆ ನನ್ನ ತಿಲಕವು ಅಳಿಸಿಹೋಗಿರಲು, ನೀನೇ ನನ್ನ ಕಪೋಲದಮೇಲೆ ಮಣಿಶಿಲೆಯಿಂದ ತಿಲಕವನ್ನಿಟ್ಟಿಯಲ್ಲವೆ ? ಜ್ಞಾಪಿಸಿಕೊಂಡು ನೋಡು. ಅಂತಹ ನೀನು ಮಹಾವೀರನಾಗಿದ್ದರೂ ಸೀತೆಯು ಅಪಹೃತಳಾಗಿ ರಾಕ್ಷಸರ ಮಧ್ಯದಲ್ಲಿರುವುದನ್ನು ಹೇಗೆ ಸಹಿಸಿಕೊಂಡಿರುವೆ ? (೫–೬). ಈ ಚೂಡಾಮಣಿಯನ್ನು ಬಹು ಶ್ರಮದಿಂದ ಕಾಪಾಡಿಕೊಂಡಿದ್ದೆನು. ನನಗೆ ತಡೆಯಲಾರದಷ್ಟು ದುಃಖವಾದಾಗ ಇದನ್ನು ನೋಡಿ ನಿನ್ನನ್ನು ನೋಡಿದಂತೆ ಸಂತೋಷಪಡುತ್ತಿದ್ದೆನು. ಈ ದಿವ್ಯಮಣಿಯನ್ನು ಈಗ ನಿನಗೆ ಕಳಿಸಿಬಿಟ್ಟೆನು. ಇನ್ನು ಈ ದುಃಖದಲ್ಲಿ ನಾನು ಬದುಕುವುದು ಕಷ್ಟ (೭–೮). ಈ ಘೋರರಾಕ್ಷಸಿಯರು ಕೊಡುವ ಅಸಹ್ಯವಾದ ಯಾತನೆಗಳನ್ನು, ಆಡುವ ಕರ್ಣಕಠೋರವಾದ ಮಾತುಗಳನ್ನು—ನಿನಗೋಸ್ಕರ ಸಹಿಸಿಕೊಂಡಿದ್ದೇನೆ. ಇನ್ನು ಒಂದು ತಿಂಗಳು ಹೇಗಾದರೂ ಜೀವಿಸಿರುವೆನು. ಅನಂತರ ನಿಶ್ಚಯವಾಗಿಯೂ ಪ್ರಾಣವನ್ನಿಟ್ಟುಕೊಳ್ಳುವುದಿಲ್ಲ (೯–೧೦). ಈ ರಾಕ್ಷಸರಾಜನು ಭಯಂಕರನು. ಅವನಿಗೆ ನನ್ನಮೇಲೆ ಸ್ವಲ್ಪವೂ ಸೌಮ್ಯದೃಷ್ಟಿ ಇಲ್ಲ.

ನೀನು ತಡಮಾಡುವುದಾದರೆ ಒಂದು ನಿಮಿಷವೂ ನಾನು ಬದುಕಿರಲಾರೆ"(೧೧). ಸೀತೆಯು ಹೀಗೆ ಕಣ್ಣೀರು ಸುರಿಸುತ್ತ ಆಡಿದ ಮಾತನ್ನು ಕೇಳಿ ಹನುಮಂತನು "ಅಮ್ಮಾ, ಸತ್ಯದ ಆಣೆಯಾಗಿಯೂ ರಾಮನು ನಿನ್ನ ವಿರಹದುಃಖದಿಂದ ಲೋಕವ್ಯಾಪಾರವನ್ನೇ ಮರೆತಂತಿರುವನು. ಅವನ ದುಃಖವನ್ನು ಕಂಡು ಲಕ್ಷ್ಮಣನೂ ಸಂಕಟಪಡುತ್ತಿದ್ದಾನೆ. ಅಂತೂ ನಿನ್ನನ್ನು ಕಂಡದ್ದಾಯಿತು. ಇದು ಶೋಕಿಸುವ ಕಾಲವಲ್ಲ. ಬೇಗನೆ ನಿನ್ನ ದುಃಖವು ಮುಗಿಯುವುದು (೧೨–೧೪). ಆ ರಾಜಪುತ್ರರು ನಿನ್ನನ್ನು ಕಾಣುವ ಉತ್ಸಾಹದಿಂದ ಲಂಕೆಯನ್ನು ಸುಟ್ಟು ಬೂದಿಮಾಡುವರು. ಅವರು ರಾವಣನನ್ನು ಬಂಧುಸಮೇತವಾಗಿ ಕೊಂದು ನಿನ್ನನ್ನು ಅಯೋಧ್ಯೆಗೆ ಕರೆದೊಯ್ಯುವರು. ಶ್ರೀರಾಮನಿಗೆ ಆನಂದವನ್ನುಂಟುಮಾಡತಕ್ಕ ಇನ್ನೂ ಯಾವುದಾದರೂ ಅಭಿಜ್ಞಾನವಿದ್ದರೆ ಅದನ್ನು ಕೊಡು" ಎಂದನು (೧೫–೧೭). ಸೀತೆಯು "ಶ್ರೇಷ್ಠವಾದ ಅಭಿಜ್ಞಾನವನ್ನೇ ಕೊಟ್ಟಿರುವೆನು. ನನ್ನ ಶಿರೋಭೂಷಣವಾದ ಈ ಚೂಡಾಮಣಿಯನ್ನು ನೋಡಿದಕೂಡಲೆ, ರಾಮನಿಗೆ ನಿನ್ನ ಮಾತಿನಲ್ಲಿ ನಂಬಿಕೆ ಹುಟ್ಟುವುದು" ಎಂದಳು. ಆ ದಿವ್ಯಮಣಿಯನ್ನು ತೆಗೆದುಕೊಂಡು ಹನುಮಂತನು ಸೀತೆಗೆ ವಂದಿಸಿ ಹೊರಡಲನುವಾದನು (೧೮–೨೦). ಪ್ರಯಾಣಕ್ಕಾಗಿ ದೇಹವನ್ನು ಬೆಳೆಯಿಸಿಕೊಳ್ಳುತ್ತಿದ್ದ ಆ ವೇಗಶಾಲಿಯನ್ನು ಕಂಡು ಸೀತೆಗೆ ದುಃಖವು ಉಕ್ಕಿ ಬಂದಿತು. ಬಳಬಳನೆ ಕಣ್ಣೀರು ಸುರಿಸುತ್ತ ಗದ್ಗದಸ್ವರದಿಂದ "ಅಪ್ಪಾ–ಹನುಮಂತ, ಸಿಂಹಪರಾಕ್ರಮಿಗಳಾದ ರಾಮಲಕ್ಷ್ಮಣರಿಗೂ ಸುಗ್ರೀವನಿಗೂ, ಅವನ ಮಂತ್ರಿಗಳಿಗೂ, ಎಲ್ಲರಿಗೂ ಕುಶಲವನ್ನು ವಿಚಾರಿಸಿದೆನೆಂದು ಹೇಳು. ನನ್ನನ್ನು ಈ ದುಃಖಸಮುದ್ರದಿಂದ ಶ್ರೀರಾಮನು ಪಾರುಮಾಡುವಂತೆ ಏರ್ಪಡಿಸುವ ಭಾರ ನಿನಗೆ ಸೇರಿದ್ದು (೨೧–೨೩). ತಡೆಯಲಾಗದ ನನ್ನ ಕಷ್ಟವನ್ನೂ ಈ ರಾಕ್ಷಸರು ಹೆದರಿಸುವುದನ್ನೂ ರಾಮನ ಹತ್ತಿರ ಹೋಗಿ ಹೇಳು. ನಿನ್ನ ಪ್ರಯಾಣ ಸುಖವಾಗಿ ನಡೆಯಲಿ" ಎಂದಳು (೨೪). ಹೀಗೆ ಆಂಜನೇಯನು ಆ ರಾಜಪುತ್ರಿಯಿಂದ ವಿಷಯವೆಲ್ಲವನ್ನೂ ತಿಳಿದುಕೊಂಡು, ತಾನು ಬಂದುದು ಸಫಲವಾಯಿತೆಂದು ಆನಂದದಿಂದ ಹಿಗ್ಗಿಹೋದನು. ಇನ್ನು ಉಳಿದಿರುವ ಕೆಲಸ ಅತ್ಯಲ್ಪವೆಂದೆಣಿಸಿ, ಮನಸ್ಸಿನಲ್ಲಿಯೇ ಉತ್ತರದಿಕ್ಕಿನಲ್ಲಿ ರಾಮನಿದ್ದೆಡೆಯನ್ನು ಸೇರಿಬಿಟ್ಟನು (೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ನಲವತ್ತನೆಯ ಸರ್ಗ

# ಸರ್ಗ ೪೧

## ಹನುಮಂತನು ಅಶೋಕವನವನ್ನು ನಾಶಗೊಳಿಸುವುದು.

ಈ ಪ್ರಕಾರ ಸೀತೆಯಿಂದ ಸಮ್ಮಾನಿತನಾದ ಹನುಮಂತನು ಅಲ್ಲಿಂದ ಹೊರಟು ಮತ್ತೊಂದು ಸ್ಥಳಕ್ಕೆ ಹೋಗಿ, ತನ್ನ ಮನಸ್ಸಿನಲ್ಲಿಯೇ ಆಲೋಚಿಸಿದನು: "ಸೀತೆಯನ್ನು ನೋಡಬೇಕೆಂಬ ದೊಡ್ಡ ಕಾರ್ಯವು ನೆರವೇರಿತು. ಇನ್ನು ಉಳಿದಿರುವ ಕೆಲಸ ಅತ್ಯಲ್ಪ. ಇದನ್ನು ಸಾಧಿಸಲು ಸಾಮ ದಾನ ಭೇದಗಳೆಂಬ ಮೂರು ಉಪಾಯಗಳೂ ಉಪಯುಕ್ತವಾಗಲಾರವು. ನಾಲ್ಕನೆಯ ದಂಡೋಪಾಯವೇ ಸರಿಯೆಂದು ತೋರುತ್ತದೆ (೧–೨). ಕ್ರೂರಿಗಳಾದ ರಾಕ್ಷಸರಲ್ಲಿ ಸಾಮೋಪಾಯದಿಂದ ಗುಣವಿಲ್ಲ. ಶ್ರೀಮಂತರಲ್ಲಿ ದಾನವೂ ಕೆಲಸಕ್ಕೆ ಬಾರದು. ಬಲದಿಂದ ಸೊಕ್ಕಿಹೋಗಿರುವವರಲ್ಲಿ ಭೇದವೂ ಫಲಿಸುವುದಿಲ್ಲ. ಆದ್ದರಿಂದ ಇವರಲ್ಲಿ ಪರಾಕ್ರಮವನ್ನು ತೋರಿಸುವುದೇ ಸರಿಯೆಂದು ಅನ್ನಿಸುತ್ತದೆ. ಪರಾಕ್ರಮವನ್ನು ಬಿಟ್ಟರೆ ಇನ್ನು ಯಾವ ಉಪಾಯವೂ ಇಲ್ಲ. ಈಗ ನಾನೊಬ್ಬನೇ ರಾಕ್ಷಸರಲ್ಲಿ ಪ್ರಮುಖರಾದ ಕೆಲವರನ್ನು ಕೊಂದುಬಿಟ್ಟರೆ, ಉಳಿದವರು ಆಮೇಲೆ ತಗ್ಗಿ ನಡೆಯಬಹುದು (೩–೪). ಒಂದು ಕಾರ್ಯಕ್ಕೆ ನೇಮಿಸಿದಾಗ ಆ ಕಾರ್ಯಕ್ಕೆ ವಿರೋಧವಿಲ್ಲದಂತೆ ಅದರ ಜೊತೆಗೆ ಇತರ ಕಾರ್ಯಗಳನ್ನು ಸಾಧಿಸುವುದು ಯುಕ್ತ. ಹಾಗೆ ಸಾಧಿಸುವವನೇ ಕಾರ್ಯದಕ್ಷ. ಚಿಕ್ಕ ಕೆಲಸವನ್ನು ಮಹಾಪ್ರಯತ್ನದಿಂದ ಸಾಧಿಸುವವನು ಕಾರ್ಯಸಾಧಕನೆನಿಸಲಾರನು. ಕೆಲಸವನ್ನು ಬಹುಮುಖದಿಂದ ವಿಚಾರಮಾಡಿ ನಡೆಸತಕ್ಕವನು ಕಾರ್ಯಸಾಧಕನೆನಿಸಿಕೊಳ್ಳುತ್ತಾನೆ (೫–೬). ಈಗ ಶತ್ರುಗಳ ಬಲವೆಷ್ಟು? ನಮ್ಮ ಬಲವೆಷ್ಟು –ಎಂಬ ತಾರತಮ್ಯವನ್ನು ಇಲ್ಲಿಯೇ ನಾನು ನಿಶ್ಚಯಪಡಿಸಿಕೊಂಡು ಸುಗ್ರೀವನ ಬಳಿಗೆ ಹೋದರೆ ಸ್ವಾಮಿಯ ಆಜ್ಞೆಯನ್ನು ನೆರವೇರಿಸಿದಂತೆ ಆಗುವುದು (೭). ಏನುಮಾಡಿದರೆ ಈಗ ರಾಕ್ಷಸರೊಡನೆ ಯುದ್ಧಮಾಡುವ ಪ್ರಸಂಗವು ನನಗೆ ಸುಲಭವಾಗಿ ದೊರಕೀತು? ರಾವಣನಿಗೆ ತನ್ನ ಸೈನ್ಯಕ್ಕೂ ನನಗೂ ಇರುವ ಪರಾಕ್ರಮದ ವ್ಯತ್ಯಾಸವು ಮನವರಿಕೆಯಾದೀತು? (೮). ಯುದ್ಧದಲ್ಲಿ ರಾವಣನನ್ನೂ ಅವನ ಮಂತ್ರಿಗಳನ್ನೂ ಸೇನಾಪತಿಗಳನ್ನೂ ಸಂದರ್ಶಿಸಿ, ರಾವಣನ ಬಲವೆಷ್ಟು? ಅವನ ಮನಸ್ಸಿನಲ್ಲಿ ಇರುವುದಾದರೂ ಏನು? – ಎಂಬುದನ್ನು

ತಿಳಿದುಕೊಂಡೇ ಇಲ್ಲಿಂದ ಹೋಗಬೇಕು (೯). ಇರಲಿ. ಆ ದುಷ್ಟನಿಗೆ ಸೇರಿದ ಈ ಅಶೋಕವನವು ನಂದನವನದಂತೆ ನೇತ್ರಾನಂದಕರವಾಗಿದೆ. ಮರಬಳ್ಳಿಗಳಿಂದ ಸುಂದರವಾಗಿದೆ. ಕಾಳ್ಗಿಚ್ಚು ಒಣಗಿದ ಕಾಡನ್ನು ಸುಡುವಂತೆ, ಇದನ್ನು ಧ್ವಂಸಮಾಡಿಬಿಡುತ್ತೇನೆ. ಆಗ ರಾವಣನಿಗೆ ಕೋಪ ಬರುತ್ತದೆ (೧೦–೧೧). ಅವನು ಆನೆ, ಕುದುರೆ, ರಥಗಳಿಂದ ಯುಕ್ತವಾದ ಸೇನೆಯನ್ನು ನನ್ನಮೇಲೆ ಕಳಿಸುವನು. ಸೈನಿಕರು ಶೂಲ, ಪಟ್ಟಸ ಮುಂತಾದ ಆಯುಧಗಳನ್ನು ಧರಿಸಿ ಬರಲಾಗಿ ದೊಡ್ಡ ಯುದ್ಧವೇ ಆರಂಭವಾಗುವುದು (೧೨). ನಾನು ಪ್ರಚಂಡರಾದ ರಾಕ್ಷಸರೊಡನೆ ಹೋರಾಡಿ ನನ್ನ ಪರಾಕ್ರಮವನ್ನು ಮೆರೆಯಿಸಿ, ಅವರೆಲ್ಲರನ್ನೂ ಸಂಹಾರಮಾಡುವೆನು. ಆಮೇಲೆ ಸುಗ್ರೀವನ ಬಳಿಗೆ ಸುಲಭವಾಗಿ ಹೋಗಿಬಿಡುವೆನು" (೧೩). ಹೀಗೆಂದು ನಿಶ್ಚಯಿಸಿ ಆ ವಾಯುಪುತ್ರನು ಕ್ರುದ್ಧನಾಗಿ, ಬಿರುಗಾಳಿಯಂತೆ ತನ್ನ ತೊಡೆಯ ವೇಗದಿಂದಲೇ ಮರಗಳನ್ನು ಉರುಳಿಸಲಾರಂಭಿಸಿದನು. ಕೂಗುತ್ತಿರುವ ಮದಿಸಿದ ಪಕ್ಷಿಗಳಿಂದಲೂ ನಾನಾ ಬಗೆಯ ಗಿಡಬಳ್ಳಿಗಳಿಂದಲೂ ಸುಂದರವಾದ ಉದ್ಯಾನವನಗಳನ್ನು ಹಾಳುಮಾಡಿದನು (೧೪–೧೫). ಆ ಉದ್ಯಾನವನವು ಛಿನ್ನಭಿನ್ನವಾದ ಗಿಡಮರಗಳಿಂದಲೂ, ಕಲಕಿಹೋದ ಜಲಾಶಯಗಳಿಂದಲೂ, ಪುಡಪುಡಿಯಾದ ಕ್ರೀಡಾಪರ್ವತಗಳಿಂದಲೂ, ಗಾಬರಿಗೊಂಡ ಪಕ್ಷಿಗಳ ಕೂಗಿನಿಂದಲೂ, ಒಡೆದುಹೋದ ಕೆರೆಗಳಿಂದಲೂ, ಕಾಂತಿಗುಂದಿದ ಕೆಂದಳಿರುಗಳಿಂದಲೂ, ಬಾಡಿದ ಗಿಡಬಳ್ಳಿಗಳಿಂದಲೂ ಅಂದಗೆಟ್ಟುಹೋಯಿತು (೧೬–೧೭). ಅದು ದಾವಾಗ್ನಿಯಿಂದ ಸುಟ್ಟುಹೋದ ಕಾಡಿನಂತೆ ಕಾಂತಿಹೀನವಾಯಿತು. ಆಶ್ರಯವೃಕ್ಷಗಳು ಮುರಿದುಬಿದ್ದುದರಿಂದ ಬಳ್ಳಿಗಳು ಅನಾಥರಾದ ಹೆಂಗಸರಂತೆ ಕಾಣುತ್ತಿದ್ದವು. ಆ ಮಹಾವನದಲ್ಲಿದ್ದ ಲತಾಮಂಟಪಗಳೂ ಚಿತ್ರಶಾಲೆಗಳೂ ನಾಶವಾದವು. ದೊಡ್ಡ ದೊಡ್ಡ ಹಾವುಗಳೂ ಕಾಡುಮೃಗಗಳೂ ಓಡತೊಡಗಿದವು. ಕಲ್ಲಿನ ಮಂಟಪಗಳೂ ನಾನಾಬಗೆಯ ಮನೆಗಳೂ ನೆಲಸಮವಾದವು. ಅಶೋಕವನವು ಹಾಳುಬಿದ್ದುಹೋಯಿತು (೧೮–೧೯). ರಾವಣನ ಅಂತಃಪುರದಲ್ಲಿರುವ ಪ್ರಮದೆಯರಿಗೆ ವಿಹಾರಭೂಮಿಯಾಗಿದ್ದ ಉದ್ಯಾನವನದಲ್ಲಿ, ಆ ಕಪಿಯ ಬಲದಿಂದ ಅಶೋಕಲತೆಗಳೆಲ್ಲಾ ಛಿನ್ನಭಿನ್ನವಾಗಿ ಶೋಕಲತೆಗಳು ತುಂಬಿಹೋದವು (೨೦). ಈ ರೀತಿಯಲ್ಲಿ ಹನುಮಂತನು ರಾವಣನ ಮನಸ್ಸಿಗೆ ಬಹಳ

ನೋವಾಗುವ ಕೆಲಸವನ್ನು ಮಾಡಿ, ತಾನೊಬ್ಬನೇ ಬಲಾಢ್ಯರಾದ ರಾಕ್ಷಸರೊಡನೆ ಹೋರಾಡಬೇಕೆಂದು ನಿರ್ಧರಿಸಿದನು. ಉದ್ಯಾನವನದ ಹೊರಬಾಗಿಲಿಗೆ ಬಂದು ತೇಜಸ್ಸಿನಿಂದ ಜ್ವಲಿಸುತ್ತ ಕಾದುನಿಂತನು (೨೧).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ನಲವತ್ತೊಂದನೆಯ ಸರ್ಗ

---

## ಸರ್ಗ ೪೨

ರಾವಣನು ಅಶೋಕವನದ ಭಂಗವನ್ನು ಕೇಳಿ, ಹನುಮಂತನನ್ನು ನಿಗ್ರಹಿಸುವುದಕ್ಕಾಗಿ ಕಿಂಕರರೆಂಬ ರಾಕ್ಷಸರನ್ನು ಕಳುಹಿಸುವುದು. ಹನುಮಂತನು ಅವರನ್ನು ವಧಿಸಲು, ರಾವಣನು ಪ್ರಹಸ್ತನ ಮಗನನ್ನು ಕಳುಹಿಸುವುದು.

ಅಶೋಕವನದಲ್ಲಿ ಅಕಸ್ಮಾತ್ ಉಂಟಾದ ಪಕ್ಷಿಗಳ ಕೂಗಾಟವನ್ನೂ ಮರಗಳು ಮುರಿದುಬೀಳುವ ಶಬ್ದವನ್ನೂ ಕೇಳಿ ಲಂಕಾನಿವಾಸಿಗಳಿಗೆ ದಿಗ್ಭ್ರಮೆಯಾಯಿತು. ಮೃಗಪಕ್ಷಿಗಳು ಅರಚುತ್ತ ಪಲಾಯನಮಾಡಿದವು. ರಾಕ್ಷಸರಿಗೆ ಅನೇಕ ಕೆಟ್ಟಶಕುನಗಳಾದವು (೧–೨). ಇತ್ತ ವನದಲ್ಲಿ ಮಲಗಿದ್ದ ರಾಕ್ಷಸಿಯರು ನಿದ್ರೆಯಿಂದ ಎಚ್ಚೆತ್ತು, ಅಲ್ಲಿ ನಡೆದ ಹಾವಳಿಯನ್ನೂ ಆ ಮಹಾಕಪಿಯನ್ನೂ ಕಂಡರು. ಮಹಾವೀರನಾದ ಹನುಮಂತನೂ ಕೂಡ ರಾಕ್ಷಸಿಯರನ್ನು ಕಂಡು, ಅವರಿಗೆ ಹೆದರಿಕೆಯಾಗುವಂತೆ ಶರೀರವನ್ನು ದೊಡ್ಡದಾಗಿ ಬೆಳೆಯಿಸಿಕೊಂಡನು (೩–೪). ರಾಕ್ಷಸಿಯರು ಪರ್ವತಾಕಾರನೂ ಬಲಾಢ್ಯನೂ ಆದ ಆ ವಾನರನನ್ನು ಕಂಡು ಸೀತೆಯ ಬಳಿಗೆ ಬಂದು "ಸೀತೆ, ಈ ಕಪಿಯು ಯಾರು? ಯಾರ ಕಡೆಯವನು? ಎಲ್ಲಿಂದ ಬಂದಿದ್ದಾನೆ? ಏಕೆ ಬಂದಿದ್ದಾನೆ? ಇವನು ನಿನ್ನೊಡನೆ ಸಂಭಾಷಣೆಯನ್ನು ನಡೆಸಿದಂತೆ ಇತ್ತಲ್ಲ, ಅದೇನು? ಹೆದರಬೇಡ, ಹೇಳು. ಅವನು ನಿನ್ನೊಡನೆ ಏನು ಹೇಳಿದನು?" ಎಂದು ಕೇಳಿದರು (೫–೭). ಆಗ ಸೀತೆಯು "ಈ ರಾಕ್ಷಸರ ಸ್ವರೂಪ ನನಗೇನು ಗೊತ್ತು? ಇವನು ಯಾರು, ಏನು ಮಾಡುತ್ತಾನೆ—ಎಂಬುದನ್ನು ನೀವೇ ಬಲ್ಲಿರಿ. ಹಾವಿನ ಹೆಜ್ಜೆಯನ್ನು ಹಾವೇ ಬಲ್ಲುದು! ಇವನನ್ನು ನೋಡಿ ನನಗೂ ಭಯವಾಗಿದೆ. ಇವನು

ಯಾರೆಂಬುದು ನನಗೆ ತಿಳಿಯದು. ಯಾವನೋ ಕಾಮರೂಪಿಯಾದ ರಾಕ್ಷಸನಾಗಿರಬೇಕು" ಎಂದಳು * (೮–೧೦). ಅದನ್ನು ಕೇಳಿದಕೂಡಲೇ ರಾಕ್ಷಸಿಯರು ಭಯದಿಂದ ದಿಕ್ಕುದಿಕ್ಕಿಗೆ ಓಡಿಹೋದರು. ಕೆಲವರು ಅಲ್ಲಿಯೇ ಅವಿತುಕೊಂಡರು. ಕೆಲವರು ಈ ಸಂಗತಿಯನ್ನು ರಾವಣನಿಗೆ ತಿಳಿಸಬೇಕೆಂದು ಅವನ ಸಮೀಪಕ್ಕೆ ಹೋಗಿ, ಆ ಕಪಿಯ ವಿಲಕ್ಷಣವೂ ಭಯಂಕರವೂ ಆದ ಸ್ವಭಾವವನ್ನು ಹೇಳತೊಡಗಿದರು (೧೧–೧೨): "ಮಹಾರಾಜ, ಒಂದು ಭಯಂಕರವಾದ ಕಪಿಯು ಅಶೋಕವನಕ್ಕೆ ಬಂದಿದೆ. ಅದು ಸೀತೆಯೊಡನೆ ಏನೋ ಮಾತನಾಡಿತು. ಮಹಾಪರಾಕ್ರಮಶಾಲಿಯಾಗಿ ಕಾಣುತ್ತದೆ. ನಾವು ಸೀತೆಯೊಡನೆ ಆ ಕಪಿಯು ಯಾರೆಂದು ಕೇಳಿದರೂ ಹೇಳದೆಹೋದಳು. ಆ ಕಪಿಯು ದೇವೇಂದ್ರನ ದೂತನೋ, ಕುಬೇರನ ದೂತನೋ—ಅಲ್ಲದಿದ್ದರೆ ಸೀತೆಯನ್ನು ಹುಡುಕಲು ಬಂದ ರಾಮದೂತನೋ ಆಗಿರಬೇಕು (೧೩–೧೪). ಅದ್ಭುತಾಕಾರದ ಆ ಕಪಿಯು ನಿನಗೆ ಪ್ರಿಯವಾಗಿದ್ದ ಅಶೋಕವನವನ್ನು ನಾಶಮಾಡಿಬಿಟ್ಟಿತು. ಅದು ನಾಶಮಾಡದಿರುವ ಒಂದು ಪ್ರದೇಶವೂ ಅಲ್ಲಿಲ್ಲ. ಆದರೆ ಸೀತೆ ಇರುವ ಪ್ರದೇಶವನ್ನು ಮಾತ್ರ ಹಾಗೆಯೇ ಬಿಟ್ಟಿದೆ (೧೬–೧೭). ಅದೇನು ಸೀತೆಯನ್ನು ರಕ್ಷಿಸುವುದಕ್ಕಾಗಿಯೋ ಅಥವಾ ತನಗೆ ಬಹಳ ಆಯಾಸವಾದ್ದರಿಂದಲೋ ತಿಳಿಯದು. ಆ ಮಹಾಕಪಿಗೆ ಆಯಾಸವೆಂದರೇನು? ಬೇಕೆಂದೇ ಅದು ಸೀತೆಯನ್ನು ರಕ್ಷಿಸುವುದಕ್ಕಾಗಿ ಹೀಗೆ ಮಾಡಿದೆ. ಚಿಗುರು, ಹೂಗಳಿಂದ ಮನೋಹರವಾದ ಶಿಂಶಪಾವೃಕ್ಷವನ್ನು ಮಾತ್ರ ಉಳಿಸಿದೆ. ಅದರ ಅಡಿಯಲ್ಲಿಯೇ ಸೀತೆಯು ಕುಳಿತಿರುವುದು (೧೮–೧೯). ಮಹಾಪ್ರಭು, ಆ ಕಪಿಯು ಸೀತೆಯೊಡನೆ ಮಾತನಾಡಿದ್ದಲ್ಲದೆ ಉದ್ಯಾನವನವನ್ನೂ ಹಾಳುಮಾಡಿಬಿಟ್ಟಿದೆ. ಅದನ್ನು ಉಗ್ರವಾಗಿ ದಂಡಿಸಬೇಕು. ನೀನು ಮನಸ್ಸಿನಲ್ಲಿ ಪರಿಗ್ರಹಿಸಿದ ಸೀತೆಯನ್ನು ಯಾವನು ತಾನೆ ಮಾತನಾಡಿಸಿಯಾನು? ಅವನು ಬದುಕಬೇಕೆಂಬ ಆಸೆಯನ್ನು ತೊರೆದಿರಬೇಕು" ಎಂದರು (೨೦–೨೧). ಅದನ್ನು ಕೇಳಿ ರಾವಣನು ಸಿಟ್ಟಿನಿಂದ ಸಿಡಿದೆದ್ದನು. ಅವನ ಕಣ್ಣುಗಳು ಗಿರಗಿರನೆ ತಿರುಗಿದವು. ಉರಿಯುವ ದೀಪಗಳಿಂದ ಜ್ವಾಲೆಯೊಡಗೂಡಿ ಉದುರುವ ತೈಲಬಿಂದುಗಳಂತೆ,

* ಪ್ರಾಣಾಪಾಯಕಾಲದಲ್ಲಿ ಸುಳ್ಳುಹೇಳುವುದರಿಂದ ದೋಷವಿಲ್ಲವೆಂದು ಶಾಸ್ತ್ರವಚನವಿದೆ.

ಕಣ್ಣುಗಳಿಂದ ಕಿಡಿಗಳು ಸಿಡಿದವು. ಕೂಡಲೇ ಕಿಂಕರರೆಂಬ ಶೂರರಾದ ರಾಕ್ಷಸರನ್ನು ಕರೆದು ಹನುಮಂತನನ್ನು ನಿಗ್ರಹಿಸಬೇಕೆಂದು ಆಜ್ಞೆಮಾಡಿದನು (೨೨–೨೪). ಆಗ ವೀರರಾದ ಎಂಬತ್ತುಸಾವಿರ ಮಂದಿ ಕಿಂಕರರೆಂಬ ರಾಕ್ಷಸರು ಕೂಟ ಮುದ್ಗರ ಮುಂತಾದ ಆಯುಧಗಳನ್ನು ಹಿಡಿದು ಹೊರಟರು. ಅವರಲ್ಲಿ ಒಬ್ಬೊಬ್ಬರೂ ದೊಡ್ಡಹೊಟ್ಟೆಯವರು! ದೊಡ್ಡ ಕೋರೆಯ ಹಲ್ಲುಳ್ಳವರು! ಘೋರಾಕೃತಿಗಳು! ಬಲಶಾಲಿಗಳು. ಯುದ್ಧಮಾಡಿ ಹನುಮಂತನನ್ನು ಸೆರೆ ಹಿಡಿಯಬೇಕೆಂಬ ಉತ್ಸಾಹಶಾಲಿಗಳು (೨೫–೨೬). ಅವರೆಲ್ಲರೂ ಅಶೋಕ ವನದ ಮಹಾದ್ವಾರದ ಬಳಿಯಲ್ಲಿದ್ದ ಹನುಮಂತನ ಸಮೀಪಕ್ಕೆ ಬಂದು, ಪತಂಗದ ಹುಳುಗಳು ಅಗ್ನಿಯನ್ನು ಮುತ್ತುವಂತೆ ಅವನನ್ನು ಮುತ್ತಿದರು. ಗದೆ, ಪರಿಘ, ಬಾಣ, ಮುದ್ಗರ, ಪಟ್ಟಿಸ ಮೊದಲಾದ ಆಯುಧಗಳನ್ನು ಹಿಡಿದು ಹನುಮಂತನ ಮೇಲೆ ಎರಗಿದರು (೨೭–೨೯). ಆಗ ಪರ್ವತಾಕಾರನಾದ ಆಂಜನೇಯನು ಬಾಲವನ್ನು ನೆಲಕ್ಕೆ ಅಪ್ಪಳಿಸಿ, ಗಟ್ಟಿಯಾಗಿ ಒಂದು ಸಲ ಗರ್ಜಿಸಿದನು. ಆ ಧ್ವನಿಯು ಲಂಕಾನಗರದಲ್ಲಿ ಮೊಳಗಿಹೋಯಿತು (೩೦–೩೧). ಅದರ ರಭಸಕ್ಕೆ ಆಕಾಶದಲ್ಲಿ ಹಾರಾಡುತ್ತಿದ್ದ ಹಕ್ಕಿಗಳು ಕೆಳಕ್ಕೆ ಉದುರಿಬಿದ್ದವು. ಆಂಜನೇಯನು ಗಟ್ಟಿಯಾಗಿ–"ಅತಿಬಲಾಢ್ಯನಾದ ರಾಮನಿಗೆ ಜಯವಾಗಲಿ! ಲಕ್ಷ್ಮಣನಿಗೆ ಜಯವಾಗಲಿ! ರಾಮನಿಂದ ರಕ್ಷಿತನಾದ ಸುಗ್ರೀವಮಹಾರಾಜನಿಗೆ ಜಯವಾಗಲಿ! ನಾನು ಕೋಸಲೇಂದ್ರನಾದ ಶ್ರೀರಾಮನ ದಾಸ; ನನ್ನ ಹೆಸರು ಹನುಮಂತ; ನಾನು ವಾಯುಪುತ್ರ; ಶತ್ರುಸೈನ್ಯಗಳನ್ನು ಧ್ವಂಸಮಾಡತಕ್ಕವನು! (೩೨–೩೪). ರಾವಣನಂತಹವರು ಸಾವಿರ ಜನರು ಬಂದರೂ ನನಗೆ ಎದುರಲ್ಲ. ಕಲ್ಲು, ಮರಗಳಿಂದಲೇ ಯುದ್ಧಮಾಡುವೆನು. ಈ ರಾಕ್ಷಸರೆಲ್ಲರೂ ಕಣ್ಣುಬಿಟ್ಟು ನೋಡುತ್ತಿರುವಾಗಲೇ ಲಂಕಾಪಟ್ಟಣವನ್ನು ನಾಶಮಾಡಿ, ಸೀತಾದೇವಿಗೆ ವಂದಿಸಿ, ಕೃತಕೃತ್ಯನಾಗಿ ಹೊರಟುಹೋಗುವೆನು!" ಎಂದು ಘೋಷಿಸಿದನು (೩೫–೩೬). ಹನುಮಂತನ ಆರ್ಭಟವನ್ನು ಕೇಳಿ ರಾಕ್ಷಸರು ಭಯಗೊಂಡು ಸಂಧ್ಯಾಕಾಲದ ಮೇಘದಂತೆ ಉನ್ನತನಾದ ಅವನನ್ನು ನೋಡುತ್ತ ನಿಂತರು. ಅವರು ರಾಜಾಜ್ಞೆಗೆ ಬದ್ಧರಾದ್ದರಿಂದ ವಿವಿಧಾಯುಧಗಳಿಂದ ಅವನಮೇಲೆ ಯುದ್ಧಮಾಡತೊಡಗಿದರು (೩೭–೩೮). ಶೂರರಾದ ರಾಕ್ಷಸರು ತನ್ನ ಸುತ್ತಲೂ ಮುತ್ತಿಕೊಂಡಿರುವುದನ್ನು ನೋಡಿ, ಹನುಮಂತನು

ಮಹಾದ್ವಾರದ ಕದಕ್ಕೆ ಹಾಕಿದ್ದ ಕಬ್ಬಿಣದ ದೊಡ್ಡ ಲಾಳವಂಡಿಗೆ (ಅಗಳಿ) ಯನ್ನು ಕೈಗೆ ತೆಗೆದುಕೊಂಡು ರಾಕ್ಷಸರನ್ನು ಬಡಿಯಲಾರಂಭಿಸಿದನು. ಗರುಡನು ಕೃಷ್ಣಸರ್ಪವನ್ನು ಹಿಡಿದಿರುವಂತೆ, ಹನುಮಂತನು ಲಾಳವಂಡಿಗೆಯನ್ನು ಹಿಡಿದು ಆಕಾಶದಲ್ಲಿ ಚಿತ್ರಗತಿಯಿಂದ ಸುತ್ತುತ್ತ ರಾಕ್ಷಸರನ್ನು ಬಡಿದು ಬಡಿದು ಸಂಹಾರ ಮಾಡಿದನು. ಕಿಂಕರರೆಲ್ಲರನ್ನೂ ಸಂಹರಿಸಿ ಮಹಾದ್ವಾರದ ಬಳಿಗೆ ಬಂದು ಪುನಃ ಯುದ್ಧವಾಗುತ್ತದೆಯೆಂಬ ನಿರೀಕ್ಷಣೆಯಿಂದ ಕಾದಿದ್ದನು (೩೯–೪೧). ಇತ್ತಲಾಗಿ ತಪ್ಪಿಸಿಕೊಂಡುಬಂದ ಕೆಲವು ರಾಕ್ಷಸರು ರಾವಣನ ಹತ್ತಿರಕ್ಕೆ ಹೋಗಿ ಕಿಂಕರರೆಲ್ಲರೂ ಸತ್ತುಹೋದ ವಿಷಯವನ್ನು ಅರಿಕೆಮಾಡಿದರು. ಅದನ್ನು ಕೇಳಿ ರಾವಣನು ಕೋಪದಿಂದ ಕಣ್ಣನ್ನು ತಿರುಗಿಸುತ್ತ ಮಹಾಶೂರನಾದ ಪ್ರಹಸ್ತನ ಮಗನನ್ನು ಕರೆದು, ಹನುಮಂತನನ್ನು ನಿಗ್ರಹಿಸಬೇಕೆಂದು ಆಜ್ಞಾಪಿಸಿ ಕಳುಹಿಸಿದನು (೪೨–೪೩).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ನಲವತ್ತೆರಡನೆಯ ಸರ್ಗ

---

## ಸರ್ಗ ೪೩

### ಹನುಮಂತನು ಚೈತ್ಯಪ್ರಾಸಾದವನ್ನೇರಿ ಕಾವಲುಗಾರರನ್ನು ಸಂಹರಿಸಿ ಚೈತ್ಯವನ್ನು ನಾಶಪಡಿಸುವುದು.

ಆಂಜನೇಯನು ಕಿಂಕರರನ್ನು ಕೊಂದ ತರುವಾಯ “ ಈ ಅಶೋಕವನವನ್ನು ನಾಶಮಾಡಿಬಿಟ್ಟೆನು. ರಾಕ್ಷಸರ ಕುಲದೇವತಾಸ್ಥಾನವಾದ ಈ ಚೈತ್ಯವು ಮಾತ್ರ ಹಾಗೆಯೇ ಉಳಿದಿದೆ. ಇದನ್ನೂ ಉರುಳಿಸಿಬಿಡುತ್ತೇನೆ ” ಎಂದು ಚಿಂತಿಸಿ ಮೇರುಶಿಖರದಂತೆ ಅತ್ಯುನ್ನತವಾದ ಆ ಚೈತ್ಯಪ್ರಾಸಾದದಮೇಲೆ ನೆಗೆದನು (೧–೩). ಮಹಾತೇಜಸ್ವಿಯಾದ ಆಂಜನೇಯನು ಅದನ್ನೇರಿ ಕುಳಿತಾಗ, ಬೇರೊಬ್ಬ ಸೂರ್ಯನೇ ಉದಯಿಸಿ ಬಂದಂತೆಯೂ ಉನ್ನತವಾದ ಪಾರಿಯಾತ್ರ ಪರ್ವತದಂತೆಯೂ ಕಂಗೊಳಿಸಿದನು (೪–೫). ತನ್ನ ಪ್ರಭಾವದಿಂದ ದೊಡ್ಡದೇಹವನ್ನು ತಾಳಿ ಆ ಕಟ್ಟಡವನ್ನು ಮುರಿದುಹಾಕಿದನು.

ಆಸ್ಫೋಟನೆಯಿಂದಾದ ಮಹಾಶಬ್ದವು ಲಂಕೆಯಲ್ಲಿ ಮೊಳಗಿಹೋಯಿತು. ಕರ್ಣ ಕಠೋರವಾದ ಆ ಶಬ್ದವನ್ನು ಕೇಳಿ ಆಕಾಶದಿಂದ ಹಕ್ಕಿಗಳು ಉದುರಿಬಿದ್ದವು. ಕಾವಲುಗಾರರು ಎಚ್ಚರದಪ್ಪಿದರು (೬–೭). ಹನುಮಂತನು "ಅಸ್ತ್ರವಿಶಾರದ ನಾದ ರಾಮನಿಗೆ ಜಯವಾಗಲಿ! ಬಲಾಢ್ಯನಾದ ಲಕ್ಷ್ಮಣನಿಗೆ ಜಯವಾಗಲಿ! ಶ್ರೀರಾಮನಿಂದ ರಕ್ಷಿತನಾದ ಸುಗ್ರೀವಮಹಾರಾಜನಿಗೆ ಜಯವಾಗಲಿ! ನಾನು ಕೋಸಲೇಂದ್ರನಾದ ಶ್ರೀರಾಮನ ದಾಸ. ನನ್ನ ಹೆಸರು ಹನುಮಂತ. ನಾನು ವಾಯುಪುತ್ರ (೮–೯). ಶತ್ರುಸೈನ್ಯವನ್ನು ಧ್ವಂಸಮಾಡತಕ್ಕವನು! ಸಾವಿರ ಮಂದಿ ರಾವಣರು ಬಂದರೂ ಯುದ್ಧದಲ್ಲಿ ನನ್ನನ್ನು ಎದುರಿಸಲಾರರು. ಕಲ್ಲು ಮರಗಳಿಂದಲೇ ಹೊಡೆದಾಡಬಲ್ಲೆನು. ಈ ಲಂಕೆಯನ್ನು ಧ್ವಂಸಮಾಡಿ, ಸೀತಾ ದೇವಿಗೆ ಅಭಿವಂದಿಸಿ, ಕೃತಕೃತ್ಯನಾಗಿ ಈ ರಾಕ್ಷಸರ ಕಣ್ಣೆದುರಿಗೇ ಹಿಂತಿರುಗಿ ಹೋಗುವೆನು!" ಎಂದು ಕೂಗಿ ಹೇಳಿ, ರಾಕ್ಷಸರಿಗೆ ಭಯವುಂಟಾಗುವಂತೆ ಭೀಕರಧ್ವನಿಯಿಂದ ಗರ್ಜಿಸಿದನು (೧೦–೧೨). ಅನಂತರ ಚೈತ್ಯದ ಕಾವಲು ಗಾರರಾದ ನೂರಾರುಮಂದಿ ರಾಕ್ಷಸರು ಪ್ರಾಸ, ಖಡ್ಗ, ಗಂಡುಗೊಡಲಿ, ಬಾಣ ಮುಂತಾದ ವಿವಿಧಾಸ್ತ್ರಗಳನ್ನು ಧರಿಸಿ ಮಾರುತಿಯನ್ನು ಸುತ್ತುಗಟ್ಟಿ ಪ್ರಹರಿಸಿ ದರು (೧೩–೧೪). ಅವನನ್ನು ಸುತ್ತುಗಟ್ಟಿ ತಿರುಗುತ್ತಿದ್ದ ರಾಕ್ಷಸಸಮೂಹವು ಗಂಗಾನದಿಯ ದೊಡ್ಡಸುಳಿಯಂತೆ ಕಾಣುತ್ತಿದ್ದಿತು. ಆಗ ಕ್ರುದ್ಧನಾದ ಮಾರುತಿಯು ಭೀಮಾಕಾರನಾಗಿ, ಚೈತ್ಯಪ್ರಾಸಾದದಲ್ಲಿದ್ದ ಸುವರ್ಣಮಯವಾದ ಕಂಭವನ್ನು ಕಿತ್ತು, ವಜ್ರಾಯುಧದಂತಿದ್ದ ಅದನ್ನು ಗಿರ್ರನೆ ತಿರುಗಿಸಿದನು. ತಿರುಗಿಸಿದ ವೇಗಕ್ಕೆ ಬೆಂಕಿಯು ಹುಟ್ಟಿ ಪ್ರಾಸಾದವು ಉರಿದುಹೋಯಿತು. ಇಂದ್ರನು ವಜ್ರಾಯುಧದಿಂದ ಅಸುರರನ್ನು ಕೊಲ್ಲುವಂತೆ, ಹನುಮಂತನು ಆ ಕಂಭದಿಂದಲೇ ರಾಕ್ಷಸರನ್ನೆಲ್ಲಾ ಕೊಂದುಬಿಟ್ಟನು (೧೫–೧೯). ಚೈತ್ಯವು ಸುಟ್ಟುಹೋಗಲಾಗಿ ಹನುಮಂತನು ಆಕಾಶಮಧ್ಯದಲ್ಲಿ ನಿಂತು "ಎಲೈ ರಾಕ್ಷಸರೆ, ನನ್ನಂತಹ ಸಾವಿರಾರು ಮಂದಿ ವಾನರವೀರರನ್ನು ಸುಗ್ರೀವನು ಕಳಿಸಿ ದ್ದಾನೆ. ನಾವೆಲ್ಲರೂ ಸೀತಾನ್ವೇಷಣಕ್ಕಾಗಿ ಭೂಮಿಯನ್ನು ಸುತ್ತುತ್ತಿದ್ದೇವೆ. ನಮ್ಮಲ್ಲಿ ಕೆಲವರಿಗೆ ಹತ್ತು ಆನೆಗಳ ಬಲವಿದೆ. ಕೆಲವರಿಗೆ ನೂರು ಆನೆಗಳ ಬಲ ವಿದೆ. ಸಾವಿರ ಆನೆಗಳ ಬಲವುಳ್ಳವರೂ ಇದ್ದಾರೆ (೨೦–೨೨). ನಮ್ಮ ವಾನರ ವೀರರಲ್ಲಿ ನದೀಪ್ರವಾಹದಂತೆಯೂ ವಾಯುವಿನಂತೆಯೂ ಬಲಸಂಪನ್ನ

ರಿದ್ದಾರೆ. ಕೆಲವರ ಬಲವನ್ನಂತೂ ಇಷ್ಟೇ ಎಂದು ಹೇಳುವುದಕ್ಕೇ ಶಕ್ಯವಿಲ್ಲ. ದಂತ ನಖಗಳೇ ನಮ್ಮ ಆಯುಧಗಳು. ಇಂತಹ ನೂರು, ಸಾವಿರ, ಲಕ್ಷ, ಕೋಟಿಗಟ್ಟಲೆ ವೀರರನ್ನು ಕರೆದುಕೊಂಡು ಸುಗ್ರೀವಮಹಾರಾಜನು ನಿಮ್ಮನ್ನು ಕೊಲ್ಲುವುದಕ್ಕಾಗಿ ಬರುತ್ತಾನೆ. ಇಕ್ಷ್ವಾಕುನಾಥನಾದ ಶ್ರೀರಾಮನೊಡನೆ ನೀವು ವೈರವನ್ನು ಬೆಳೆಯಿಸಿದ್ದೀರಿ. ಆದ್ದರಿಂದ ಇನ್ನು ಲಂಕಾಪುರಿಯೂ ಉಳಿಯುವುದಿಲ್ಲ, ನೀವೂ ಉಳಿಯುವುದಿಲ್ಲ, ರಾವಣನೂ ಉಳಿಯುವುದಿಲ್ಲ! " ಎಂದು ಉದ್ಘೋಷಿಸಿದನು (೨೩–೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ನಲವತ್ತುಮೂರನೆಯ ಸರ್ಗ

---

## ಸರ್ಗ ೪೪

ಹನುಮಂತನು ಪ್ರಹಸ್ತಪುತ್ರನಾದ ಜಂಬುಮಾಲಿಯನ್ನು ಸಂಹರಿಸುವುದು.

ರಾಕ್ಷಸೇಶ್ವರನ ಆಜ್ಞೆಯನ್ನು ಪಡೆದು ಪ್ರಹಸ್ತಪುತ್ರನಾದ ಜಂಬುಮಾಲಿಯು ಧನುರ್ಧಾರಿಯಾಗಿ ಯುದ್ಧಕ್ಕೆ ಹೊರಟನು. ಅವನು ಕೆಂಪಾದ ವಸ್ತ್ರವನ್ನೂ ಹೂವಿನ ದಂಡೆಯನ್ನೂ ಧರಿಸಿ, ಕಿವಿಗಳಲ್ಲಿ ಕುಂಡಲಗಳನ್ನು ಹಾಕಿಕೊಂಡಿದ್ದನು. ಪ್ರಚಂಡನೂ ವೀರನೂ ಆದ ಜಂಬುಮಾಲಿಯು ಕೋಪದಿಂದ ಕಣ್ಣಾಲಿಗಳನ್ನು ತಿರುಗಿಸುತ್ತಿದ್ದನು. ಹರಿತವಾದ ಬಾಣಗಳನ್ನು ಹಿಡಿದು ಧನುಸ್ಸನ್ನು ಸಿಡಿಲಿನಂತೆ ಟಂಕಾರಮಾಡುತ್ತಿದ್ದನು (೧–೩). ಆ ಟಂಕಾರಧ್ವನಿಯಿಂದ ಸಮಸ್ತದಿಕ್ಕುಗಳೂ ಆಕಾಶವೂ ತುಂಬಿಹೋದವು. ಅವನು ಹೇಸರಗತ್ತೆಯನ್ನು ಹೂಡಿದ ರಥವನ್ನೇರಿ ಬರುವುದನ್ನು ಕಂಡು, ಹನುಮಂತನು ಸಂತೋಷದಿಂದ ಸಿಂಹನಾದಮಾಡಿದನು (೪–೫). ಜಂಬುಮಾಲಿಯು ಮಹಾದ್ವಾರದ ಅಡ್ಡತೊಲೆಯ ಮೇಲೆ ಕುಳಿತಿದ್ದ ಆ ಮಹಾಕಪಿಯನ್ನು ಕಂಡು ತೀಕ್ಷ್ಣಶರಗಳಿಂದ ಹೊಡೆಯಲಾರಂಭಿಸಿದನು. ಅರ್ಧಚಂದ್ರಾಕಾರದ ಶರದಿಂದ ಅವನ ಮುಖಕ್ಕೂ, ಅಂಕುಶಾಕಾರದ ಶರದಿಂದ ತಲೆಗೂ, ಹತ್ತು ಶರಗಳಿಂದ ತೋಳುಗಳಿಗೂ ಹೊಡೆದನು (೬–೭). ಆಗ ರಕ್ತಸುರಿದು ಕೆಂಪಾದ ಹನುಮಂತನ ಮುಖವು

*

ಶರತ್ಕಾಲದಲ್ಲಿ ಸೂರ್ಯರಶ್ಮಿಯಿಂದ ಅರಳಿದ ಕೆಂದಾವರೆಯಂತೆ ಕಂಡಿತು. ಮೊದಲೇ ಕೆಂಪಗಿದ್ದ ಮುಖದಮೇಲೆ ರಕ್ತವು ಸುರಿಯಲು, ಅವನ ಮುಖವು ರಕ್ತಚಂದನವನ್ನು ಬಳಿದ ದೊಡ್ಡ ಕಮಲದಂತೆ ತೋರಿತು (೮–೯). ಅವನು ಕ್ರುದ್ಧನಾಗಿ ಪಕ್ಕದಲ್ಲಿದ್ದ ಒಂದು ದೊಡ್ಡ ಬಂಡೆಯನ್ನು ಕೈಗೆ ಎತ್ತಿಕೊಂಡು ಜಂಬುಮಾಲಿಯಮೇಲೆ ರಭಸದಿಂದ ಬೀಸಿದನು. ರಾಕ್ಷಸನು ಹತ್ತು ಬಾಣಗಳನ್ನು ಬಿಟ್ಟು ಆ ಬಂಡೆಯನ್ನು ಸೀಳಿದನು (೧೦–೧೧). ತನ್ನ ಪ್ರಯತ್ನವು ವ್ಯರ್ಥವಾದುದನ್ನು ಕಂಡು, ಹನುಮಂತನು ಒಂದು ದೊಡ್ಡ ಸಾಲವೃಕ್ಷವನ್ನು ಕಿತ್ತು ಬೀಸಿಹೊಡೆಯಲಾಗಿ, ಜಂಬುಮಾಲಿಯು ನಾಲ್ಕುಬಾಣಗಳಿಂದ ಸಾಲವೃಕ್ಷವನ್ನು ಚೂರುಮಾಡಿದನು. ಮತ್ತೆ ಐದು ಬಾಣಗಳನ್ನು ಹನುಮಂತನ ಭುಜಗಳಿಗೂ ಒಂದನ್ನು ತಲೆಗೂ ಹತ್ತು ಬಾಣಗಳನ್ನು ಎದೆಗೂ ಹೊಡೆದನು (೧೨–೧೪). ಸುತ್ತಲೂ ಬಾಣಗಳು ಚುಚ್ಚಿಕೊಳ್ಳಲು ಆಂಜನೇಯನು ಮಹಾಕೋಪದಿಂದ ಹಿಂದೆ ಉಪಯೋಗಿಸಿದ್ದ ಬಾಗಿಲಿನ ಅಗುಳಿಯನ್ನೇ ತೆಗೆದುಕೊಂಡು ವೇಗದಿಂದ ತಿರುಗಿಸಿ, ಜಂಬುಮಾಲಿಯ ಎದೆಯಮೇಲೆ ಅಪ್ಪಳಿಸಿ ಹೊಡೆದನು (೧೫–೧೬). ಮರುಕ್ಷಣದಲ್ಲಿ ನೋಡಿದರೆ ಜಂಬುಮಾಲಿಯ ಶಿರಸ್ಸೂ ಇಲ್ಲ! ತೋಳುಗಳೂ ಇಲ್ಲ! ಮೊಳಕಾಲುಗಳೂ ಇಲ್ಲ! ಅವನ ಧನುಸ್ಸು, ರಥ, ಕುದುರೆ, ಬಾಣ ಯಾವುದೂ ಕಾಣಿಸಲಿಲ್ಲ! ಜಂಬುಮಾಲಿಯು ಸತ್ತು ಜಜ್ಜಿಹೋಗಿ ನೆಲದಮೇಲೆ ಬಿದ್ದಿದ್ದನು! (೧೭–೧೮). ಕಿಂಕರರಂತೆ ಜಂಬುಮಾಲಿಯೂ ಹತನಾದುದನ್ನು ಕೇಳಿ ರಾವಣನಿಗೆ ಮಹಾಕೋಪ ಉಂಟಾಯಿತು. ಅವನು ಕಣ್ಣುಗಳನ್ನು ತಿರುಗಿಸುತ್ತ ವೀರರಾದ ಏಳುಮಂದಿ ಮಂತ್ರಿಕುಮಾರರನ್ನು ಕರೆದು ಹನುಮಂತನೊಡನೆ ಯುದ್ಧಮಾಡುವುದಕ್ಕಾಗಿ ಕಳಿಸಿದನು (೧೯–೨೦).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ನಲವತ್ತುನಾಲ್ಕನೆಯ ಸರ್ಗ

## ಸರ್ಗ ೪೫

### ಹನುಮಂತನು ಏಳುಮಂದಿ ಮಂತ್ರಿಕುಮಾರರನ್ನು ಸಂಹರಿಸುವುದು.

ರಾವಣನು ಕಳುಹಿಸಿದ ಏಳುಮಂದಿ ಮಂತ್ರಿಪುತ್ರರೂ ಅಗ್ನಿಯಂತೆ ತೇಜಸ್ವಿಗಳಾಗಿದ್ದರು. ಮಹಾಬಲಿಷ್ಠರೂ ಅಸ್ತ್ರವಿದ್ಯೆಯಲ್ಲಿ ನಿಪುಣರೂ ಧನುರ್ಧಾರಿಗಳೂ ಹನುಮಂತನನ್ನು ಜಯಿಸಲು ಉತ್ಸಾಹಶಾಲಿಗಳೂ ಆಗಿದ್ದರು (೧–೨). ಅವರು ಚಿನ್ನದ ತಗಡುಗಳಿಂದ ಭೂಷಿತವಾದ ಧ್ವಜಪತಾಕೆಗಳಿಂದ ವಿರಾಜಿಸುತ್ತಿರುವ, ಮೇಘದಂತೆ ಧ್ವನಿಗೈಯುವ, ಉತ್ತಮಾಶ್ವಗಳಿಂದ ಎಳೆಯಲ್ಪಡುವ ಮಹಾರಥಗಳನ್ನೇರಿ ಹೊರಟರು. ಸುವರ್ಣಾಲಂಕೃತವಾದ ಧನುಸ್ಸನ್ನು ಮಿಡಿಯುತ್ತಿರುವಾಗ ಆ ಮಂತ್ರಿಕುಮಾರರು ವಿದ್ಯುಲ್ಲತೆಗಳಿಂದ ಕೂಡಿದ ಮೇಘಗಳಂತೆ ಕಾಣುತ್ತಿದ್ದರು (೩–೪). ಅವರ ತಾಯಂದಿರೂ ಬಂಧುಬಳಗದವರೂ ವೀರರಾದ ಕಿಂಕರರು ಹತರಾದ ಸುದ್ದಿಯನ್ನು ಕೇಳಿ, ಇವರ ಗತಿಯೂ ಏನಾಗುವುದೋ ಎಂದು ಶೋಕಾರ್ತರಾದರು. ಆ ಕುಮಾರರು ನಾನು ಮುಂದೆ ತಾನು ಮುಂದೆ ಎಂದು ನುಗ್ಗುತ್ತ, ಮಹಾದ್ವಾರದಲ್ಲಿ ಕಾದಿದ್ದ ಹನುಮಂತನ ಬಳಿಗೆ ಬಂದರು (೫–೬). ಅವರು ರಥಧ್ವನಿಗಳೆಂಬ ಗುಡುಗುಗಳೊಡನೆ, ಮೋಡಗಳು ಮಳೆ ಸುರಿಸುವಂತೆ ಹನುಮಂತನ ಮೇಲೆ ಶರಗಳನ್ನು ತೂರಿದರು. ಶರವೃಷ್ಟಿಗಳಿಂದ ಮುಚ್ಚಿಹೋದ ಹನುಮಂತನು, ವೃಷ್ಟಿಧಾರೆಗಳಿಂದ ಮುಚ್ಚಿದ ಪರ್ವತದಂತೆ ಕಂಗೊಳಿಸುತ್ತಿದ್ದನು (೭–೮). ಅವನು ಮಹಾವೇಗದಿಂದ ಆಕಾಶದಲ್ಲಿ ಹಾರುತ್ತ, ರಾಕ್ಷಸರ ಶರಗಳನ್ನೂ ರಥವೇಗವನ್ನೂ ತಪ್ಪಿಸಿಕೊಳ್ಳುತ್ತಿದ್ದನು. ಮೇಘಗಳೊಡನೆ ಸಂಚರಿಸುವ ವಾಯುವಿನಂತೆ, ಆ ವೀರನು ರಾಕ್ಷಸರನ್ನೆದುರಿಸಿ ಲೀಲಾಜಾಲವಾಗಿ ಆಕಾಶದಲ್ಲಿ ಸುತ್ತಾಡುತ್ತಿದ್ದನು (೯–೧೦). ಅನಂತರ ಒಂದು ಸಲ ಗಟ್ಟಿಯಾಗಿ ಗರ್ಜಿಸಿ, ತನ್ನ ಶೌರ್ಯವನ್ನು ಮೆರೆಸಲಾರಂಭಿಸಿದನು. ಕೆಲವರನ್ನು ಕೈಯಿಂದ ಅಪ್ಪಳಿಸಿ ಹೊಡೆದು, ಕೆಲವರನ್ನು ಕಾಲಿನಿಂದ ತುಳಿದು, ಕೆಲವರನ್ನು ಮುಷ್ಟಿಯಿಂದ ಗುದ್ದಿ, ಕೆಲವರನ್ನು ಉಗುರಿನಿಂದ ಸೀಳಿ ಕೊಂದು ಹಾಕಿದನು. ಕೆಲವರನ್ನು ಎದೆಯಿಂದ ನೂಕಿ, ಕೆಲವರನ್ನು ತೊಡೆಗಳಿಂದ ಹಿಚಿಕಿ ಕೊಂದೆಸೆದನು. ಕೆಲವರು ಅವನ ಗರ್ಜನೆಯನ್ನು ಕೇಳಿ ಎದೆಯೊಡೆದು ಸತ್ತು ಬಿದ್ದರು (೧೧–೧೩). ಮಂತ್ರಿಕುಮಾರರೂ ಅನೇಕ ರಾಕ್ಷಸಯೋಧರೂ

ಸತ್ತುಹೋಗಲು, ಉಳಿದ ಸೈನಿಕರು ಕಂಗೆಟ್ಟು ದಿಕ್ಕುದಿಕ್ಕಿಗೆ ಓಡಿಹೋದರು. ಆನೆಗಳು ವಿಕಾರವಾಗಿ ಕೂಗುತ್ತಿದ್ದವು. ಕುದುರೆಗಳು ನೆಲದಮೇಲೆ ಉರುಳಿದವು. ಛತ್ರ ಧ್ವಜಗಳೊಡನೆ ರಣಭೂಮಿಯಲ್ಲಿ ರಥಗಳು ಮುರಿದುಬಿದ್ದು ಎಲ್ಲೆಲ್ಲಿಯೂ ತುಂಬಿದವು (೧೪–೧೫). ರಕ್ತದ ನದಿಗಳು ಹರಿದವು. ವಿಕಾರವಾದ ನಾನಾ ಬಗೆಯ ರೋದನಧ್ವನಿಗಳಿಂದ ಲಂಕೆಯು ಗೋಳಿಟ್ಟಿತು. ಚಂಡಪರಾಕ್ರಮನಾದ ಆಂಜನೇಯನು ಆ ರಾಕ್ಷಸರನ್ನು ಸಂಹರಿಸಿ, ಪುನಃ ಇತರ ರಾಕ್ಷಸರೊಡನೆ ಯುದ್ಧಮಾಡುವ ನಿರೀಕ್ಷಣೆಯಿಂದ ಮಹಾದ್ವಾರದ ಸಮೀಪಕ್ಕೆ ಬಂದು ನಿಂತನು (೧೬–೧೭).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ನಲವತ್ತೈದನೆಯ ಸರ್ಗ

## ಸರ್ಗ ೪೬

ಹನುಮಂತನು ವಿರೂಪಾಕ್ಷನೇ ಮೊದಲಾದ ಐವರು ಸೇನಾಪತಿಗಳನ್ನು ಕೊಲ್ಲುವುದು.

ಹನುಮಂತನು ಮಂತ್ರಿಪುತ್ರರನ್ನೆಲ್ಲಾ ಸಂಹರಿಸಿದನೆಂಬ ವಾರ್ತೆಯನ್ನು ಕೇಳಿ ರಾವಣನಿಗೆ ಚಿಂತೆ ಹುಟ್ಟಿತು. ಆದರೂ ಅದನ್ನು ತೋರಿಸಿಕೊಳ್ಳದೆ ವಿರೂಪಾಕ್ಷ, ಯೂಪಾಕ್ಷ, ದುರ್ಧರ, ಪ್ರಘಸ ಮತ್ತು ಭಾಸಕರ್ಣ—ಎಂಬ ಐವರು ಸೇನಾಪತಿಗಳನ್ನು ಬರಮಾಡಿಕೊಂಡನು. ಅವರು ವೀರರೂ ನೀತಿ ವಿಶಾರದರೂ ವಾಯುವಿನಂತೆ ವೇಗಶಾಲಿಗಳೂ ಆಗಿದ್ದರು (೧–೩). ರಾವಣನು ಅವರನ್ನು ಕುರಿತು, "ಎಲೈ ಸೇನಾಪತಿಗಳೆ, ನೀವೆಲ್ಲರೂ ರಥಗಜತುರಗಾದಿ ಸಾಧನಗಳೊಡನೆ ದೊಡ್ಡ ಸೇನೆಯನ್ನು ತೆಗೆದುಕೊಂಡು ಹೋಗಿ ಆ ಕಪಿಯನ್ನು ದಂಡಿಸಿರಿ. ನೀವು ಆ ಕಪಿಯ ಹತ್ತಿರ ದೇಶಕಾಲಗಳನ್ನರಿತು ಬಹಳ ಎಚ್ಚರಿಕೆಯಿಂದ ಯುದ್ಧಮಾಡಬೇಕು (೪–೫). ಅದರ ಕಾರ್ಯವನ್ನು ನೋಡಿದರೆ ಅದು ಕಪಿಯೇ ಅಲ್ಲವೆಂದು ತೋರುತ್ತದೆ. ಅದು ಬಲಶಾಲಿಯಾದ ಒಂದು ಮಹಾ ಭೂತವಾಗಿರಬೇಕು! ಇಂದ್ರನು ನಮ್ಮನ್ನು ನಿಗ್ರಹಿಸುವುದಕ್ಕಾಗಿ ತಪೋಬಲದಿಂದ ಈ ಭೂತವನ್ನು ಸೃಷ್ಟಿಸಿರಬಹುದು. ಹಿಂದೆ ನಾನು ನಿಮ್ಮೆಲ್ಲರೊಡನೆ ಹೋಗಿ ದೇವ, ಅಸುರ, ಮಹರ್ಷಿಗಳೇ ಮೊದಲಾದವರನ್ನು ಸೋಲಿಸಿದ್ದೇನೆ. ಅವರು ಈಗ ನಮಗೆ ಏನಾದರೂ ಕೇಡನ್ನು ಮಾಡಲು ಉದ್ದೇಶಿಸಿರಬೇಕು

(೬–೮). ಅದರಲ್ಲಿ ಸಂದೇಹವೇ ಇಲ್ಲ. ಆದ್ದರಿಂದ ಅದನ್ನು ಬಲಾತ್ಕಾರವಾಗಿ ಸೆರೆಹಿಡಿಯಿರಿ. ಅದು ಕಪಿಯೆಂದು ಉಪೇಕ್ಷಿಸಬೇಡಿರಿ. ಕಪಿಗಳಲ್ಲಿಯೂ ಮಹಾಪರಾಕ್ರಮಿಗಳಿರುವುದನ್ನು ನಾನು ನೋಡಿದ್ದೇನೆ. ವಾಲಿ, ಸುಗ್ರೀವ, ಜಾಂಬವಂತ, ನೀಲ, ದ್ವಿವಿದ ಮೊದಲಾದವರು ವೀರರೆಂಬುದನ್ನು ಬಲ್ಲೆನು. ಅವರಿಗೆ ಹೀಗೆ ಭಯಂಕರವಾದ ವೇಗವೂ ತೇಜಃಪರಾಕ್ರಮಗಳೂ ಬುದ್ಧಿಶಕ್ತಿ ಬಲೋತ್ಸಾಹಗಳೂ ಇಷ್ಟಬಂದಂತೆ ರೂಪವನ್ನು ಪರಿವರ್ತಿಸುವ ಶಕ್ತಿಯೂ ಇಲ್ಲ. ಇದು ಕಪಿಯ ವೇಷದಲ್ಲಿರುವ ಯಾವುದೋ ದೊಡ್ಡ ಭೂತವೇ ಸರಿ (೯–೧೨). ಆದ್ದರಿಂದ ಮಹಾಪ್ರಯತ್ನದಿಂದಲೇ ಇದನ್ನು ನಿಗ್ರಹಿಸಬೇಕಾಗಿದೆ. ದೇವತೆಗಳೂ, ಅಸುರರೂ, ಮನುಷ್ಯರೂ, ಇಂದ್ರನೂ ಸೇರಿ ಮೂರು ಲೋಕಗಳೇ ಬಂದರೂ ನಿಮ್ಮೆದುರಿಗೆ ನಿಲ್ಲಲಾರರೆಂಬುದೇನೋ ನಿಜ. ಆದರೂ ಯುದ್ಧದಲ್ಲಿ ಜಯವನ್ನು ಬಯಸತಕ್ಕ ನೀತಿಜ್ಞನು ಮೊದಲು ತನ್ನನ್ನು ರಕ್ಷಿಸಿಕೊಳ್ಳಬೇಕು. ಯುದ್ಧದಲ್ಲಿ ಜಯವೆಂಬುದು ಯಾರಿಗೂ ಸ್ಥಿರವಲ್ಲ" ಎಂದು ಹೇಳಿದನು (೧೩–೧೪). ಪ್ರಭುವಿನ ಆಜ್ಞೆಯಂತೆ ಆ ಸೇನಾಪತಿಗಳು ಅಗ್ನಿಯಂತೆ ಬೆಳಗುತ್ತ, ರಥ ಮುಂತಾದ ಸಾಧನಗಳಿಂದ ಸಜ್ಜಾದ ಸೇನೆಯೊಡನೆ ಹೋಗಿ ಹನುಮಂತನನ್ನು ಕಂಡರು (೧೫–೧೭). ಅವನು ಉದಯಿಸುತ್ತಿರುವ ಸೂರ್ಯನಂತೆ ಬೆಳಗುತ್ತ ಮಹಾದ್ವಾರದಮೇಲೆ ಉತ್ಸಾಹದಿಂದ ಕುಳಿತಿದ್ದನು. ವೇಗ, ಬಲ, ಬುದ್ಧಿ, ಉತ್ಸಾಹಗಳಲ್ಲಿ ಮೇಲಾದವನು; ಮಹಾಕಾಯ; ಮಹಾಬಾಹು. ಅವನನ್ನು ನೋಡುತ್ತಲೇ ರಾಕ್ಷಸರು ಸುತ್ತಲೂ ಮುತ್ತಿಕೊಂಡರು (೧೮–೧೯). ಕ್ರೂರವಾದ ಆಯುಧಗಳೊಡನೆ ಮೇಲೆ ಬಿದ್ದರು. ದುರ್ಧರನು ಉಕ್ಕಿನಿಂದ ಮಾಡಿದ ತೀಕ್ಷ್ಣವಾದ ಐದು ಬಾಣಗಳನ್ನು ತೆಗೆದು, ನೈದಿಲೆಯ ದಳಗಳನ್ನು ಮುಡಿಸುವಂತೆ ಹನುಮಂತನ ತಲೆಗೆ ಗುರಿಯಿಟ್ಟು ಹೊಡೆದನು. ಆಗ ಹನುಮಂತನು ಹತ್ತುದಿಕ್ಕುಗಳೂ ಮೊಳಗುವಂತೆ ಗರ್ಜಿಸುತ್ತ ಆಕಾಶಕ್ಕೆ ನೆಗೆದನು (೨೦–೨೨). ದುರ್ಧರನೂ ಮೇಲಕ್ಕೆ ಹಾರಿ ನೂರಾರು ಬಾಣಗಳನ್ನು ಪ್ರಯೋಗಿಸಿದನು. ಶರತ್ಕಾಲದಲ್ಲಿ ಮೋಡವು ಸುರಿಸುವ ಮಳೆಹನಿಗಳನ್ನು ಗಾಳಿಯು ಹಾರಿಸಿಬಿಡುವಂತೆ, ಹನುಮಂತನು ದುರ್ಧರನ ಬಾಣಗಳನ್ನು ತಳ್ಳಿ ಹಾರಿಸಿಬಿಡುತ್ತಿದ್ದನು. ಕಡೆಗೆ ದುರ್ಧರನ ಪೀಡೆಯು ಹೆಚ್ಚಾಗಲು ಆಂಜನೇಯನು ಒಂದು ಸಲ ಗರ್ಜಿಸಿ, ದೇಹವನ್ನು ಬೆಳೆಯಿಸಿಕೊಂಡು ಮೇಲಕ್ಕೆ ನೆಗೆದನು.

ಬರಸಿಡಿಲು ಬೆಟ್ಟಕ್ಕೆ ಎರಗುವಂತೆ ಅಲ್ಲಿಂದ ಥಟ್ಟನೆ ದುರ್ಧರನ ರಥದಮೇಲೆ ಎರಗಿ ಅಪ್ಪಳಿಸಿದನು (೨೩–೨೫). ಅಚ್ಚುಮೂಕಿಗಳೊಡನೆ ರಥವು ಚೂರು ಚೂರಾಯಿತು. ಎಂಟು ಕುದುರೆಗಳೂ ಸತ್ತವು. ದುರ್ಧರನು ಸತ್ತು ಧರೆಯ ಲ್ಲೊರಗಿದನು. ಅದನ್ನು ಕಂಡು ವಿರೂಪಾಕ್ಷ ಯೂಪಾಕ್ಷರು ರೋಷಾವಿಷ್ಟರಾಗಿ ಆಕಾಶಕ್ಕೆ ನೆಗೆದು ಹನುಮಂತನನ್ನು ಆಕ್ರಮಿಸಿದರು (೨೬–೨೮). ಅವರು ಮುದ್ಗರಗಳಿಂದ ಎದೆಯಮೇಲೆ ಹೊಡೆಯಲು, ಹನುಮಂತನು ಗರುಡನಂತೆ ಸರ್‍ರನೆ ಭೂಮಿಗಿಳಿದು ಸಾಲವೃಕ್ಷವೊಂದನ್ನು ಕಿತ್ತುಕೊಂಡು ಆ ಇಬ್ಬರು ಸೇನಾ ಪತಿಗಳನ್ನೂ ಬಡಿದು ಕೊಂದನು (೨೯–೩೦). ಆ ಮೂವರೂ ಹತರಾದ್ದನ್ನು ನೋಡಿ ಪ್ರಘಸನೂ ಶೂಲಧಾರಿಯಾದ ಭಾಸಕರ್ಣನೂ ನುಗ್ಗಿಬಂದರು. ಪ್ರಘಸನು ಪಟ್ಟಸದಿಂದಲೂ ಭಾಸಕರ್ಣನು ಶೂಲದಿಂದಲೂ ಹನುಮಂತನನ್ನು ತಿವಿಯತೊಡಗಿದರು. ಹನುಮಂತನ ಮೈಯೆಲ್ಲಾ ಗಾಯವಾಗಿ ರಕ್ತದಿಂದ ಒದ್ದೆಯಾಯಿತು (೩೧–೩೪). ಅವನು ಕ್ರುದ್ಧನಾಗಿ ಮೃಗ, ಸರ್ಪ, ವೃಕ್ಷ ಗಳಿಂದ ತುಂಬಿದ್ದ ಒಂದು ಪರ್ವತಶಿಖರವನ್ನೇ ಕಿತ್ತುತಂದು ಅವರಿಬ್ಬರನ್ನೂ ಕೊಂದುಹಾಕಿದನು. ಹೀಗೆ ಐವರು ಸೇನಾಪತಿಗಳೂ ಸಾಯಲಾಗಿ ಉಳಿದ ಸೈನ್ಯವನ್ನು ಕೊಲ್ಲುತ್ತ ಬಂದನು (೩೫–೩೬). ಇಂದ್ರನು ಅಸುರರನ್ನು ಸಂಹರಿಸುವಂತೆ, ಅವನು ಕುದುರೆಗಳಿಂದ ಕುದುರೆಗಳನ್ನೂ, ಆನೆಗಳಿಂದ ಆನೆ ಗಳನ್ನೂ, ಸೈನಿಕರಿಂದ ಸೈನಿಕರನ್ನೂ, ರಥಗಳಿಂದ ರಥಗಳನ್ನೂ ಬೀಸಿಹೊಡೆದು ನಾಶಮಾಡಿದನು. ಆ ರಣಭೂಮಿಯು ಸತ್ತುಬಿದ್ದ ಆನೆ ಕುದುರೆ ರಾಕ್ಷಸರು ಗಳಿಂದಲೂ ಮುರಿದುಬಿದ್ದ ರಥಗಳಿಂದಲೂ ಎಡೆಯಿಲ್ಲದಂತೆ ತುಂಬಿಹೋಯಿತು (೩೭–೩೮). ಹನುಮಂತನು ಆ ಸೇನಾನಾಯಕರನ್ನು ಸೈನ್ಯಸಮೇತ ಕೊಂದು ಹಾಕಿ, ಪ್ರಳಯಕಾಲದಲ್ಲಿ ಪ್ರಾಣಿಗಳನ್ನು ಕೊಂದು ಹಬ್ಬಮಾಡುವ ಯಮನಂತೆ ಮಹಾದ್ವಾರದ ಬಳಿಗೆ ಬಂದು ನಿಂತನು (೩೯).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ನಲವತ್ತಾರನೆಯ ಸರ್ಗ

## ಸರ್ಗ ೪೭

ಹನುಮಂತನು ಅಕ್ಷಕುಮಾರನನ್ನು ವಧಿಸುವುದು.

ಈ ಪ್ರಕಾರ ಐವರು ಸೇನಾಪತಿಗಳು ಸೈನ್ಯಸಮೇತರಾಗಿ ಹತರಾದ ಸುದ್ದಿ ರಾವಣನಿಗೆ ಮುಟ್ಟಿತು. ಅವನು ಎದುರಿಗೆ ಕುಳಿತಿದ್ದ ಯುದ್ಧವೀರನಾದ ಅಕ್ಷನೆಂಬ ತನ್ನ ಮಗನನ್ನು ದೃಷ್ಟಿಸಿ ನೋಡಿದನು. ಪ್ರತಾಪಿಯಾದ ಅಕ್ಷಕುಮಾರನು ತಂದೆಯ ಇಂಗಿತವನ್ನರಿತು ಉತ್ತೇಜನಗೊಂಡನು. ಕೂಡಲೇ ಅವನು ಹವಿಸ್ಸನ್ನು ಸ್ವೀಕರಿಸಿದ ಅಗ್ನಿಯಂತೆ, ಸುವರ್ಣ ಧನುಸ್ಸನ್ನು ಹಿಡಿದು ಧಿಗ್ಗನೆ ಎದ್ದು ನಿಂತನು (೧–೨). ಆ ವೀರನು ಬಾಲಸೂರ್ಯನಂತೆ ಪ್ರಜ್ವಲಿಸುವ ಸುವರ್ಣಾಲಂಕೃತವಾದ ರಥವನ್ನೇರಿ ಹನುಮಂತನಿದ್ದ ಕಡೆಗೆ ಹೊರಟನು. ಆ ರಥವು ತಪಸ್ಸುಮಾಡಿ ಸಂಪಾದಿಸಿದ್ದ ದಿವ್ಯರಥ. ಪತಾಕೆಗಳಿಂದಲೂ ರತ್ನಾಲಂಕೃತವಾದ ಧ್ವಜದಿಂದಲೂ ಶೋಭಿಸುತ್ತಿದ್ದಿತು. ಮನೋವೇಗವುಳ್ಳ ಎಂಟು ಉತ್ತಮಾಶ್ವಗಳು ಅದನ್ನು ಎಳೆಯುತ್ತಿದ್ದವು (೩–೪). ಅದನ್ನು ದೇವಾಸುರರಿಗೂ ತಡೆಯಲು ಸಾಧ್ಯವಿರಲಿಲ್ಲ. ಸೂರ್ಯನಂತೆ ಹೊಳೆಯುತ್ತ ಆಕಾಶದಲ್ಲಿ ಸಂಚರಿಸಬಲ್ಲದು. ಆ ರಥವು ಬತ್ತಳಿಕೆಗಳಿಂದಲೂ, ಎಂಟು ದಿಕ್ಕುಗಳಲ್ಲಿ ತೂಗಾಡುತ್ತಿರುವ ಕತ್ತಿಗಳಿಂದಲೂ, ಶಕ್ತಿ ತೋಮರಗಳಿಂದಲೂ ಸಮೇತವಾಗಿತ್ತು. ಸಮಸ್ತ ಯುದ್ಧಪರಿಕರಗಳಿಂದಲೂ ಸಜ್ಜಾಗಿ, ಸೂರ್ಯ ಚಂದ್ರರ ರಶ್ಮಿಗಳಂತೆ ಬೆಳಗುವ ಕಡಿವಾಣಗಳಿಂದ ರಂಜಿತವಾದ ಆ ದಿವ್ಯರಥವನ್ನೇರಿ ಅಕ್ಷಕುಮಾರನು ಯುದ್ಧಕ್ಕೆ ಸಾಗಿದನು (೫–೭). ಅವನು ಕುದುರೆ, ಆನೆ ಮತ್ತು ರಥಗಳ ಶಬ್ದದಿಂದ ಭೂವ್ಯಾಕಾಶಗಳನ್ನು ತುಂಬುತ್ತ ಸೈನ್ಯಸಮೇತನಾಗಿ ಹನುಮಂತನಿದ್ದಲ್ಲಿಗೆ ಬಂದನು. ಅಲ್ಲಿ ಪ್ರಜಾಸಂಹಾರಮಾಡುವುದಕ್ಕಾಗಿ ಹೊರಟ ಪ್ರಳಯಕಾಲದ ಅಗ್ನಿಯಂತೆ ಪ್ರಕಾಶಿಸುತ್ತಿದ್ದ ಆಂಜನೇಯನನ್ನು ಕಂಡು ಬೆರಗಾಗಿ ಶೀವಿಯಿಂದ ನೋಡುತ್ತ ನಿಂತನು (೭–೮). ಆ ರಾವಣಕುಮಾರನು ಹನುಮಂತನ ವೇಗಪರಾಕ್ರಮಗಳನ್ನೂ ತನ್ನ ಬಲವನ್ನೂ ಹೋಲಿಸಿ ನೋಡಿ, ಯುಗಾಂತಕಾಲದ ಸೂರ್ಯನಂತೆ ತೇಜಸ್ಸನ್ನು ತನ್ನಲ್ಲಿ ಅಳವಡಿಸಿಕೊಂಡು ಉಬ್ಬಿದನು. ಅನಂತರ ಯುದ್ಧಮಾಡಲು ಸ್ಥೈರ್ಯದಿಂದ ನಿಂತು, ಹನುಮಂತನನ್ನು ರೇಗಿಸುವುದಕ್ಕಾಗಿ ತೀಕ್ಷ್ಣವಾದ ಮೂರು ಬಾಣ

ಗಳನ್ನು ಪ್ರಯೋಗಿಸಿದನು (೯–೧೦). ಹನುಮಂತನು ಅದನ್ನು ಲೆಕ್ಕಿಸದೆ ಶತ್ರುವನ್ನು ಪರಾಜಯಗೊಳಿಸಬಲ್ಲೆನೆಂಬ ಹೆಮ್ಮೆಯಿಂದಲೇ ಕುಳಿತಿದ್ದನು. ಅಕ್ಷಕುಮಾರನು ಧನುರ್ಬಾಣಗಳನ್ನು ಹಿಡಿದುಕೊಂಡು ಚಕಿತನಾಗಿ ಅವನನ್ನು ನೋಡುತ್ತಿದ್ದನು. ಅನಂತರ ಆ ಪರಾಕ್ರಮಿಯು ಹನುಮಂತನಮೇಲೆ ಭೀಕರ ಯುದ್ಧವನ್ನಾರಂಭಿಸಿದನು. ದೇವಾಸುರರಿಗೂ ಭಯವನ್ನುಂಟುಮಾಡುವ ಘೋರಯುದ್ಧವು ಅವರಿಬ್ಬರ ನಡುವೆ ಆರಂಭವಾಯಿತು (೧೧–೧೨). ಅವರ ಹೋರಾಟವನ್ನು ನೋಡಿ ಭೂಮಿಯು ಮೊರೆಯಿತು. ಸೂರ್ಯನು ಪ್ರಕಾಶಿಸಲೇ ಇಲ್ಲ. ಗಾಳಿಯು ಬೀಸಲಿಲ್ಲ. ಪರ್ವತವು ಅಲ್ಲಾಡಿತು. ಆಕಾಶವು ಮೊಳಗಿತು. ಸಮುದ್ರವು ಅಲ್ಲೋಲಕಲ್ಲೋಲವಾಯಿತು. ಅಸ್ತ್ರವಿದ್ಯಾವಿಶಾರದನಾದ ಅಕ್ಷ ಕುಮಾರನು ವಿಷಸರ್ಪಗಳಂತಿದ್ದ ಮೂರು ಬಾಣಗಳನ್ನು ಹನುಮಂತನ ತಲೆಗೆ ಗುರಿಯಿಟ್ಟು ಹೊಡೆದನು (೧೩–೧೪). ಅವು ತಲೆಯಲ್ಲಿ ನಾಟಿಕೊಳ್ಳಲು, ರಕ್ತವು ಸುರಿದು ಹನುಮಂತನ ಕಣ್ಣುಗಳು ತೊಳಲಿದವು. ಹನುಮಂತನು ಆಗಲೇ ಉದಯಿಸಿದ್ದ ಸೂರ್ಯನಂತೆಯೂ ದೇಹದಲ್ಲಿ ನೆಟ್ಟ ಬಾಣಗಳು ಸೂರ್ಯ ಕಿರಣಗಳಂತೆಯೂ ಶೋಭಿಸಿದವು. ಮಹಾಧನುಸ್ಸನ್ನು ಹಿಡಿದು ರಾವಣನ ಮಗನೇ ಯುದ್ಧಕ್ಕೆ ಬಂದಿರುವುದನ್ನು ಕಂಡು ಹನುಮಂತನಿಗೆ ಹರ್ಷವಾಯಿತು. ತನ್ನ ದೇಹವನ್ನು ಇನ್ನೂ ಬೆಳೆಯಿಸಿದನು (೧೫–೧೬). ಅವನು ಮಂದರ ಪರ್ವತದ ಮೇಲಕ್ಕೆ ಬಂದಿರುವ ಮಧ್ಯಾಹ್ನದ ಸೂರ್ಯನಂತೆ ವಿಜೃಂಭಿಸುತ್ತ, ಅಕ್ಷನನ್ನೂ ಅವನ ಸೈನ್ಯವನ್ನೂ ವಾಹನಗಳನ್ನೂ ಸುಟ್ಟುಬಿಡುವಂತೆ ಕೆಂಗಣ್ಣಿನಿಂದ ನೋಡಿದನು. ಆಗ ಪರ್ವತದಮೇಲೆ ಮೇಘವು ಮಳೆಯನ್ನು ಸುರಿಸುವಂತೆ, ಅಕ್ಷನು ಹನುಮಂತನಮೇಲೆ ಬಾಣಗಳಿಂದ ಮಳೆಗರೆಯಲಾರಂಭಿಸಿದನು (೧೭–೧೮). ಹನುಮಂತನು ಮಹಾಶೂರನಾದ ಅಕ್ಷಕುಮಾರನನ್ನು ನೋಡುತ್ತ ಹರ್ಷದಿಂದ ಗುಡುಗಿನಂತೆ ಗರ್ಜಿಸಿದನು. ಅಕ್ಷನು ಶೌರ್ಯದಿಂದ ಗರ್ವಿತನಾಗಿ ರಕ್ತದಂತೆ ಕೆಂಪಡರಿದ ಕಣ್ಣುಗಳಿಂದ ನೋಡುತ್ತ ಅಪ್ರತಿಮವೀರನಾದ ಹನುಮಂತನಮೇಲೆ ಹುಡುಗತನದಿಂದ ಏರಿಹೋದನು. ಹಾಗೆ ಹೋದುದು ಕಾಡಾನೆಯು ಹುಲ್ಲುಮುಚ್ಚಿದ ದೊಡ್ಡ ಬಾವಿಯಮೇಲೆ ನುಗ್ಗಿದಂತಾಯಿತು (೧೯–೨೦). ಅವನು ಬಾಣಗಳನ್ನು ತೂರುತ್ತಿರಲು, ಮಾರುತಿಯು ಸಿಂಹನಾದಮಾಡಿ ತೋಳುಗಳನ್ನೂ ತೊಡೆಗಳನ್ನೂ ಭಯಂಕರ

ವಾಗಿ ಬೀಸುತ್ತ ಆಕಾಶಕ್ಕೆ ನೆಗೆದನು. ಆಗ ಬಲಾಢ್ಯನಾದ ಅಕ್ಷಕುಮಾರನು ರಥಾರೂಢನಾಗಿಯೇ ಮೇಘವು ಬೆಟ್ಟದಮೇಲೆ ಆಲಿಯಕಲ್ಲುಗಳನ್ನು ಸುರಿಸುವಂತೆ, ಹನುಮಂತನಮೇಲೆ ಬಾಣಗಳನ್ನು ಸುರಿಸುತ್ತ ಬೆನ್ನಟ್ಟಿಹೋದನು (೨೧-೨೨). ಚಂಡವಿಕ್ರಮನಾದ ಆ ವಾನರಶ್ರೇಷ್ಠನು ಮನೋವೇಗದಿಂದ ಬಾಣಗಳ ಸಂದಿನಲ್ಲಿಯೇ ಗಾಳಿಯಂತೆ ತೂರಿ ತಪ್ಪಿಸಿಕೊಳ್ಳುತ್ತ ಆಕಾಶದಲ್ಲಿ ಸುತ್ತಲಾರಂಭಿಸಿದನು. ಅಕ್ಷನು ಧನುರ್ಧಾರಿಯಾಗಿ ಎಡೆಬಿಡದೆ ಮಹಾಶರಗಳನ್ನು ಪ್ರಯೋಗಿಸಿ ಆಕಾಶವನ್ನೇ ಮುಚ್ಚುತ್ತಿರುವುದನ್ನು ಕಂಡು, ಹನುಮಂತನು ಅವನ ಶೌರ್ಯವನ್ನು ಮೆಚ್ಚಿದನು. ಅವನನ್ನು ಸಂಹರಿಸುವ ಉಪಾಯವೇನೆಂದು ಚಿಂತೆಯೂ ಆಯಿತು (೨೩-೨೪). ಅಷ್ಟರಲ್ಲಿ ಅಕ್ಷಕುಮಾರನು ಬಾಣಗಳಿಂದ ಅವನ ಎದೆಯನ್ನು ಗಾಯಗೊಳಿಸಲು, ನೋವನ್ನು ತಡೆಯಲಾರದೆ ಹನುಮಂತನು ಕೂಗಿಕೊಂಡನು. ಆಮೇಲೆ ಯಾವುದು ಕರ್ತವ್ಯವೆಂಬುದನ್ನು ಚೆನ್ನಾಗಿ ಬಲ್ಲ ಆತನು ಮನಸ್ಸಿನಲ್ಲಿ "ಈ ಹುಡುಗನು ಬಾಲಸೂರ್ಯನಂತೆ ಬೆಳಗುತ್ತಿರುವನು. ಆದರೆ ಮಹಾಬಲಶಾಲಿ. ದೊಡ್ಡವರು ಮಾಡುವ ಕೆಲಸವನ್ನು ಮಾಡುತ್ತಿರುವನು. ಸಮಸ್ತ ಯುದ್ಧತಂತ್ರಗಳೂ ಇವನಿಗೆ ಗೊತ್ತಿವೆ. ಇವನನ್ನು ಕೊಲ್ಲಲು ನನಗೆ ಮನಸ್ಸು ಬರುವುದಿಲ್ಲ (೨೫-೨೭). ಈ ಮಹಾತ್ಮನು ಮಹಾವೀರ. ಯುದ್ಧದಲ್ಲಿ ಬಹು ಎಚ್ಚರಿಕೆಯಿಂದ ಇರುವನು. ಶ್ರಮಸಹಿಷ್ಣು; ಇವನ ರಣಕೌಶಲವನ್ನು ಕಂಡು ನಾಗರೂ ಯಕ್ಷರೂ ಮುನಿಗಳೂ ಇವನನ್ನು ಗೌರವಿಸುವುದರಲ್ಲಿ ಸಂದೇಹವಿಲ್ಲ. ಇವನು ವೀರ್ಯೋತ್ಸಾಹಗಳಿಂದ ತುಂಬಿದ್ದಾನೆ. ಎದುರಿಗೆ ನಿಂತು ಧೈರ್ಯದಿಂದ ನನ್ನನ್ನು ನೋಡುತ್ತಿದ್ದಾನೆ. ಇವನ ವೇಗಪರಾಕ್ರಮಗಳನ್ನು ಕಂಡು ದೇವಾಸುರರಿಗೂ ಹೃದಯವು ನಡುಗುವುದು (೨೭-೨೮). ನಾನು ಉಪೇಕ್ಷೆ ಮಾಡಿದರೆ ನನ್ನನ್ನು ಭಗ್ನಗೊಳಿಸದೇ ಬಿಡುವುದಿಲ್ಲ. ಕ್ಷಣಕ್ಷಣಕ್ಕೂ ಇವನ ಪರಾಕ್ರಮ ಹೆಚ್ಚುತ್ತಿದೆ. ಆದ್ದರಿಂದ ಇವನನ್ನು ಕೊಂದುಬಿಡುವುದೇ ಸರಿ. ದೊಡ್ಡದಾಗುತ್ತಿರುವ ಕಿಚ್ಚನ್ನು ಉಪೇಕ್ಷಿಸುವುದು ಸರಿಯಲ್ಲ" ಎಂದು ಆಲೋಚಿಸಿದನು (೨೯). ಹೀಗೆ ಹನುಮಂತನು ಶತ್ರುವಿನ ಬಲವನ್ನೂ ತನ್ನ ಕರ್ತವ್ಯವನ್ನೂ ವಿಮರ್ಶಿಸಿ ಕಡೆಯಲ್ಲಿ ಅಕ್ಷನನ್ನು ಸಂಹರಿಸಬೇಕೆಂದು ನಿರ್ಧರಿಸಿದನು. ಅನಂತರ ಆಕಾಶದಲ್ಲಿಯೇ ಅಕ್ಷನ ಎಂಟು ಉತ್ತಮಾಶ್ವಗಳನ್ನು ಅಂಗೈಯಿಂದ ಅಪ್ಪಳಿಸಿ ಕೊಂದುಹಾಕಿ

ದನು. ಆ ಹೊಡೆತವನ್ನು ತಡೆದುಕೊಳ್ಳಲಾರದೆ ಅಕ್ಷನ ಮಹಾರಥವೂ ಚಕ್ರಗಳೂ ಮೂಕಿಯೂ ಮುರಿದು ಪುಡಿಪುಡಿಯಾಗಿ ಬಿದ್ದವು (೩೦–೩೨). ಅಕ್ಷಕುಮಾರನು ರಥವನ್ನು ಬಿಟ್ಟು ಧುಮುಕಿ, ಧನುಸ್ಸನ್ನೂ ಖಡ್ಗವನ್ನೂ ಹಿಡಿದು, ಋಷಿಯು ತಪೋಮಹಿಮೆಯಿಂದ ದೇವಲೋಕವನ್ನು ಏರುವಂತೆ ಆಕಾಶವನ್ನಡರಿದನು. ಅವನು ಗರುಡ, ವಾಯು ಮತ್ತು ಸಿದ್ಧರು ಸಂಚರಿಸುವ ಆಕಾಶಮಾರ್ಗವನ್ನೇರಿ ಬರುವುದನ್ನು ಕಂಡು, ಹನುಮಂತನು ವಾಯುವೇಗದಿಂದ ಧಾವಿಸಿ, ಗರುಡನು ಮಹಾಸರ್ಪವನ್ನು ಹಿಡಿಯುವಂತೆ ಅಕ್ಷಕುಮಾರನ ಕಾಲುಗಳನ್ನು ಬಿಗಿಯಾಗಿ ಹಿಡಿದು, ಗಿರ್ರನೆ ತಿರುಗಿಸಿ ನೆಲದಮೇಲೆ ಬಡಿದನು (೩೩–೩೫). ಆಗ ಅಕ್ಷಕುಮಾರನ ತೋಳು, ತೊಡೆ, ಸೊಂಟ, ಕಂಠಗಳೆಲ್ಲವೂ ಮುರಿದುಹೋದವು. ಸರ್ವಾಂಗವೂ ರಕ್ತಮಯವಾಯಿತು. ಮೂಳೆಗಳು ಪುಡಿಯಾದವು. ಕಣ್ಣುಗಳು ಕಳಚಿಬಿದ್ದವು. ಸಂದುಗಳು ಸಡಿಲಿದವು. ತೊಟ್ಟಿದ್ದ ಕವಚವು ಸಿಡಿಯಿತು. ಈ ಪ್ರಕಾರ ಆ ರಾಕ್ಷಸನು ಸತ್ತುಹೋದನು (೩೬). ಹೀಗೆ ಹನುಮಂತನು ಅವನನ್ನು ನೆಲದಮೇಲೆ ಬಡಿದು ಕೊಂದು ರಾವಣನಿಗೂ ಭಯವನ್ನುಂಟುಮಾಡಿದನು. ಆಗ ನಕ್ಷತ್ರಪಥದಲ್ಲಿ ಸಂಚರಿಸುವ ಮಹರ್ಷಿಗಳೂ ಭೂತಗಳೂ ಯಕ್ಷರೂ ಪನ್ನಗರೂ ಇಂದ್ರಾದಿದೇವತೆಗಳೂ ಆಶ್ಚರ್ಯದಿಂದ ಆಂಜನೇಯನನ್ನು ನೋಡುತ್ತ ನಿಂತರು. ಆಂಜನೇಯನು ದೇವೇಂದ್ರನ ಮಗನಾದ ಜಯಂತನಂತಿದ್ದ ಅಕ್ಷಕುಮಾರನನ್ನು ಸಂಹರಿಸಿ, ಪ್ರಳಯಕಾಲದಲ್ಲಿ ಹಬ್ಬವಾಡುವ ಯಮನಂತೆ ಪುನಃ ಮಹಾದ್ವಾರದ ಸಮೀಪಕ್ಕೆ ಹೋಗಿ ನಿಂತನು (೩೭–೩೮).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ನಲವತ್ತೇಳನೆಯ ಸರ್ಗ

# ಸರ್ಗ ೪೮

## ಇಂದ್ರಜಿತ್ತು ಹನುಮಂತನನ್ನು ಬ್ರಹ್ಮಾಸ್ತ್ರದಿಂದ ಬಂಧಿಸಿ ರಾವಣನ ಬಳಿಗೆ ತರುವುದು.

ಅನಂತರ ರಾಕ್ಷಸೇಶ್ವರನು ತನ್ನ ಮಗನಾದ ಅಕ್ಷಕುಮಾರನು ಹತನಾದನೆಂಬುದನ್ನು ಕೇಳಿ (ದುಃಖಿತನಾದರೂ) ತಾನೇ ಸಮಾಧಾನಪಡಿಸಿಕೊಂಡು, ಇಂದ್ರಜಿತ್ತನ್ನು ಕುರಿತು "ವತ್ಸ, ನೀನು ಅಸ್ತ್ರವಿದ್ಯೆಯಲ್ಲಿ ಗಟ್ಟಿಗ. ದೇವಾಸುರರನ್ನು ಗೆದ್ದು ಪರಾಕ್ರಮವನ್ನು ಮೆರೆಸಿದ್ದೀಯೆ. ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ ಬ್ರಹ್ಮಾಸ್ತ್ರವನ್ನು ಸಂಪಾದಿಸಿದ್ದೀಯೆ (೧-೨). ನಿನ್ನ ಅಸ್ತ್ರಬಲಕ್ಕೆ ಅಸುರರಾಗಲಿ, ಇಂದ್ರಸಮೇತರಾಗಿ ಬಂದ ದೇವತೆಗಳಾಗಲಿ ಎದುರು ನಿಲ್ಲಲಾರದೆ ಹೋಗಿದ್ದಾರೆ. ಮೂರುಲೋಕಗಳಲ್ಲಿ ಯಾವನೂ ನಿನ್ನೊಡನೆ ಯುದ್ಧಮಾಡಿ ಆಯಾಸಗೊಂಡು ಸೋತುಹೋಗದೆ ಇಲ್ಲ. ಭುಜಬಲವೂ ತಪೋಬಲವೂ ನಿನ್ನನ್ನು ರಕ್ಷಿಸುತ್ತಿವೆ. ನೀನು ಬುದ್ಧಿಶಾಲಿ. ದೇಶಕಾಲಗಳ ವಿಭಾಗವನ್ನು ಬಲ್ಲವನು (೩-೪). ಯುದ್ಧದಲ್ಲಿ ನಿನಗೆ ಅಸಾಧ್ಯವಾದುದಿಲ್ಲ. ನಿನ್ನ ಮಂತ್ರಾಲೋಚನೆಗೆ ನಿಲುಕದ ವಿಷಯವಿಲ್ಲ. ಮೂರುಲೋಕಗಳಲ್ಲಿಯೂ ನಿನ್ನ ಅಸ್ತ್ರಬಲ ತಪೋಬಲಗಳ ಮಹತ್ವವನ್ನು ತಿಳಿಯದೇ ಇರತಕ್ಕವನು ಇಲ್ಲ. ತಪೋಬಲದಲ್ಲಾಗಲಿ, ಅಸ್ತ್ರವಿದ್ಯೆಯಲ್ಲಾಗಲಿ, ಪರಾಕ್ರಮದಲ್ಲಾಗಲಿ ನೀನು ನನಗೆ ಸಮಾನನಾಗಿದ್ದೀಯೆ ಎಂತಹ ಯುದ್ಧಪ್ರಸಂಗದಲ್ಲಿಯೂ ನೀನು ಸಹಾಯಕನಾಗಿರುವುದರಿಂದ ನನಗೆ ಜಯವೆಂಬುದು ನಿಶ್ಚಯ. ಆದ್ದರಿಂದ ನನ್ನ ಮನಸ್ಸಿಗೆ ಆಯಾಸವೇ ಆಗುವುದಿಲ್ಲ (೫-೬). ಇದುವರೆಗೆ ಆ ಕಪಿಯಿಂದ ಕಿಂಕರರೂ ಜಂಬುಮಾಲಿಯೂ, ಏಳುಮಂದಿ ಅಮಾತ್ಯಪುತ್ರರೂ, ಐವರು ಸೇನಾಪತಿಗಳೂ ಹತರಾದರು. ಅಶ್ವಗಜರಥಗಳಿಂದ ಸಹಿತವಾದ ಮಹಾಸೈನ್ಯವು ನಾಶವಾಯಿತು. ನಿನ್ನ ಪ್ರಿಯಸಹೋದರನಾದ ಅಕ್ಷನೂ ಹತನಾದನು. ಹೇ ಶತ್ರುಸೂದನ, ಪರಾಕ್ರಮದ ವಿಷಯದಲ್ಲಿ ನನಗೆ ನಿನ್ನಲ್ಲಿರುವಷ್ಟು ಅವರಲ್ಲಿ ನಂಬಿಕೆ ಇರಲಿಲ್ಲ (೭-೮). ಇಷ್ಟು ಅನರ್ಥಗಳನ್ನು ತಂದೊಡ್ಡಿದ ಆ ಕಪಿಯ ದೇಹಬಲವನ್ನೂ ಪ್ರಭಾವ ಪರಾಕ್ರಮಗಳನ್ನೂ ವಿಮರ್ಶೆಮಾಡಿ, ನಿನ್ನ ಸಾಮರ್ಥ್ಯಕ್ಕೆ ತಕ್ಕ ಕಾರ್ಯವನ್ನು ಮಾಡು. ಶತ್ರುಸೂದನನಾದ ನೀನು ನಮ್ಮ ಸೈನ್ಯವು ನಾಶವಾಗದಂತೆ ನೋಡಿಕೊಳ್ಳುತ್ತ,

ಶತ್ರುವನ್ನು ಅಡಗಿಸುವುದಕ್ಕೆ ಪ್ರಯತ್ನಮಾಡು (೯–೧೦). ಎಲೈ ವೀರನೆ, ಆ ಕಪಿಯನ್ನು ನಮ್ಮ ಸೇನೆಗಳು ಜಯಿಸಲಾರವು.* ಅವು ಗುಂಪುಗುಂಪಾಗಿ ಸೋತು ಓಡಿಹೋಗುತ್ತವೆ. ಅತಿತೀಕ್ಷ್ಣವಾದ ವಜ್ರಾಯುಧವು ಕೂಡ ಏನೂ ಮಾಡಲಾರದು. ಈ ಕಪಿಯ ವೇಗವು ವಾಯುವಿಗೂ ಇಲ್ಲ. ಅಗ್ನಿ ಸಮಾನನಾದ ಈತನನ್ನು ಆಯುಧಗಳಿಂದ ಕೊಲ್ಲಲೂ ಶಕ್ಯವಿಲ್ಲ (೧೧). ಈ ವಿಷಯವನ್ನು ನೀನು ಚೆನ್ನಾಗಿ ವಿಚಾರಮಾಡಿ ಕಾರ್ಯಸಿದ್ಧಿಯಾಗುವುದಕ್ಕೆ ತಕ್ಕ ಮುನ್ನೆಚ್ಚರಿಕೆಯನ್ನು ವಹಿಸು. ಧನುಸ್ಸಿಗೆ ಹೂಡುವ ದಿವ್ಯಮಂತ್ರಾಸ್ತ್ರದ ಬಲವನ್ನು ಸ್ಮರಣೆಯಲ್ಲಿಟ್ಟುಕೊಂಡಿರು. ನಮ್ಮ ಕಾರ್ಯವು ಕೆಡದಂತೆ ಉದ್ಯೋಗಮಾಡು (೧೨). ವತ್ಸ, ಇಂತಹ ವಿಪತ್ಕಾರಿಯಾದ ಯುದ್ಧಕ್ಕೆ ನಿನ್ನನ್ನು ಕಳುಹಿಸುವುದು ಯುಕ್ತವಲ್ಲ. ಆದರೆ ರಾಜನೀತಿಯನ್ನೂ† ಕ್ಷತ್ರಿಯ ಧರ್ಮವನ್ನೂ ವಿಚಾರಿಸಿದಾಗ ಇದು ಸರಿಯೆಂದೇ ತೋರುವುದು (೧೩). ಸಂಗ್ರಾಮದಲ್ಲಿ ನಾನಾಬಗೆಯ ಶಸ್ತ್ರಾಸ್ತ್ರಗಳಿಂದ ಹೋರಾಡುವ ಕೌಶಲವನ್ನು ಅವಶ್ಯವಾಗಿ ಪಡೆಯಬೇಕು. ವಿಜಯವೇ ನಮ್ಮ ಧ್ಯೇಯವಾಗಿರಬೇಕು" ಎಂದು ಹೇಳಿದನು (೧೪). ಆಗ ದೇವತೆಗಳಂತೆ ಪ್ರಭಾವಶಾಲಿಯಾದ ಮೇಘನಾದನು (ಇಂದ್ರಜಿತ್) ಯುದ್ಧಮಾಡಲು ನಿಶ್ಚಯಿಸಿ ತಂದೆಗೆ ಪ್ರದಕ್ಷಿಣಪೂರ್ವಕ ನಮಸ್ಕಾರ ಮಾಡಿದನು. ಇಷ್ಟಮಿತ್ರರು ಹೊಗಳುತ್ತಿರಲು ಮಹೋತ್ಸಾಹದಿಂದ ಯುದ್ಧಕ್ಕೆ ಹೊರಟನು (೧೫–೧೬). ತಾವರೆಯ ದಳಗಳಂತೆ ನೇತ್ರಗಳುಳ್ಳ ರಾವಣಕುಮಾರನು ಪರ್ವಕಾಲದ ಸಮುದ್ರದಂತೆ ಉತ್ಸಾಹದಿಂದ ಉಕ್ಕುತ್ತ ಯುದ್ಧಾಭಿಮುಖನಾದನು. ' ಅಸ್ತ್ರವಿದ್ಯಾವಿಶಾರದನಾದ ಆತನು ಗರುಡವಾಯುಗಳಂತೆ ಮಹಾವೇಗಶಾಲಿಗಳಾಗಿ ಬಿಳಿಯ ಕೋರೆದಾಡೆಗಳಿಂದ ಕೂಡಿದ ನಾಲ್ಕು ಸಿಂಹಗಳನ್ನು ಕಟ್ಟಿದ್ದ ಮಹಾರಥವನ್ನೇರಿ ಹನುಮಂತನಿದ್ದಲ್ಲಿಗೆ ಹೊರಟನು (೧೭–೧೯). ಇತ್ತ ಹನುಮಂತನು ಮೇಘನಾದನ ರಥಘೋಷವನ್ನೂ ಧನುಸ್ಸಿನ ಟಂಕಾರವನ್ನೂ ಕೇಳಿ ಯುದ್ಧ ಒದಗಿತೆಂದು ಸಂತೋಷದಿಂದ ಹಿಗ್ಗುತ್ತಿದ್ದನು. ರಣಪಂಡಿತನಾದ ಇಂದ್ರಜಿತ್ತು

---

* ಅನುಬಂಧವನ್ನು ನೋಡಿ.

† ರಾಜನು ಮೊದಲು ತಾನೇ ಯುದ್ಧಕ್ಕೆ ಹೋಗದೆ ಸಹಾಯಕರನ್ನು ಕಳುಹಿಸಬೇಕೆಂಬುದು ರಾಜನೀತಿ. ಕ್ಷತ್ರಿಯ ಧರ್ಮದ ವಿಷಯ ಮುಂದಿನ ಶ್ಲೋಕದಲ್ಲಿ ಬಂದಿದೆ.

ಮಹಾಧನುಸ್ಸನ್ನೂ ಹರಿತವಾದ ಅಸ್ತ್ರಗಳನ್ನೂ ಹಿಡಿದು ಹನುಮಂತನಿಗೆ ಎದುರಾಗಿ ಬರುತ್ತಿದ್ದನು (೨೦–೨೧). ಆಗ ದಿಕ್ಕುಗಳೆಲ್ಲವೂ ಮಲಿನವಾದವು. ಕ್ರೂರಮೃಗಗಳು ಅರಚಿಕೊಂಡವು. ನಾಗರೂ, ಯಕ್ಷರೂ, ಮಹರ್ಷಿಗಳೂ, ಸಿದ್ಧರೂ ಗುಂಪುಗುಂಪಾಗಿ ಬಂದು ನೆರೆದರು. ಪಕ್ಷಿಗಳು ಆಕಾಶದಲ್ಲಿ ಆನಂದದಿಂದ ಕೂಗುತ್ತಿದ್ದವು (೨೨–೨೩). ಹನುಮಂತನು ಯುದ್ಧಕ್ಕಾಗಿ ಇಂದ್ರಜಿತ್ತು ಬರುತ್ತಿರುವುದನ್ನು ಕಂಡು ಗಟ್ಟಿಯಾಗಿ ಗರ್ಜಿಸಿ ದೇಹವನ್ನು ಬೆಳೆಯಿಸಿಕೊಂಡನು ಇಂದ್ರಜಿತ್ತು ಸಿಡಿಲು ಹೊಡೆದಂತೆ ಧನುಸ್ಸನ್ನು ಮಿಡಿಯುತ್ತ ಬಂದನು (೨೪–೨೫). ಅನಂತರ ಮಹಾಬಲಿಷ್ಠರೂ ವೇಗಶಾಲಿಗಳೂ ಆದ ಅವರಿಬ್ಬರೂ ದೇವೇಂದ್ರ–ದಾನವೇಂದ್ರರಂತೆ ಸಂಗ್ರಾಮವನ್ನಾರಂಭಿಸಿದರು. ಹನುಮಂತನು ಆಕಾಶದಲ್ಲಿ ಚಿತ್ರಗತಿಯಿಂದ ಸಂಚರಿಸುತ್ತ ಮಹಾವೀರನಾದ ಇಂದ್ರಜಿತ್ತಿನ ಶರವೇಗವನ್ನು ತಪ್ಪಿಸಿಕೊಳ್ಳುತ್ತಿದ್ದನು (೨೬–೨೭). ಇಂದ್ರಜಿತ್ತು ಕೂರಲಗುಗಳಿಂದಲೂ, ಗರಿಗಳಿಂದಲೂ, ಸುವರ್ಣಾಲಂಕಾರಗಳಿಂದಲೂ ಯುಕ್ತವಾಗಿ ವಜ್ರಾಯುಧದಂತೆ ತೀಕ್ಷ್ಣವಾಗಿದ್ದ ಬಾಣಗಳನ್ನು ಪ್ರಯೋಗಿಸುತ್ತಿದ್ದನು. ಹನುಮಂತನು ಅವನ ರಥಘೋಷ, ಮೃದಂಗಾದಿ ವಾದ್ಯಧ್ವನಿ, ಧನುಷ್ಟಂಕಾರಗಳನ್ನು ಕೇಳುತ್ತ ತಿರುಗಿ ಆಕಾಶಕ್ಕೆ ನೆಗೆದನು (೨೮–೨೯). ಇಂದ್ರಜಿತ್ತು ಗುರಿ ಇಟ್ಟು ಹೊಡೆಯುತ್ತಿದ್ದರೂ, ಹನುಮಂತನು ಬಾಣಗಳ ಮಧ್ಯದಲ್ಲಿ ತೂರಿ ಹಾರುತ್ತ ಗುರಿಯು ತಪ್ಪಿಹೋಗುವಂತೆ ಮಾಡುತ್ತಿದ್ದನು. ಕೆಲವು ಬಾಣಗಳಿಗೆ ಎದುರಾಗಿ ನಿಂತು, ಅವು ತನ್ನ ಬಳಿಗೆ ಬರುವಷ್ಟರಲ್ಲಿ ಕೈಬೀಸಿ ಹಾರಿಬಿಡುತ್ತಿದ್ದನು (೩೦–೩೧). ಹೀಗೆ ಯುದ್ಧವಿಶಾರದರಾದ ಕಪಿ ರಾಕ್ಷಸರಿಬ್ಬರೂ ಸಮಸ್ತರಿಗೂ ಆಶ್ಚರ್ಯವಾಗುವಂತೆ ಯುದ್ಧಮಾಡುತ್ತಿದ್ದರು. ಅವರಿಬ್ಬರೂ ಮಹಾವೇಗಶಾಲಿಗಳು. ಇಂದ್ರಜಿತ್ತಿಗೆ ಹನುಮಂತನನ್ನು ನಿಗ್ರಹಿಸಲು ಅವಕಾಶವೇ ಸಿಗಲಿಲ್ಲ. ಹನುಮಂತನಿಗೂ ಇಂದ್ರಜಿತ್ತನ್ನು ನಿಗ್ರಹಿಸಲು ಅವಕಾಶ ದೊರೆಯಲಿಲ್ಲ (೩೨–೩೩). ಆಗ ಇಂದ್ರಜಿತ್ತಿಗೆ ತಾನು ಏಕಾಗ್ರಚಿತ್ತನಾಗಿ ಅಮೋಘವಾದ ಅಸ್ತ್ರಗಳನ್ನು ಪ್ರಯೋಗಿಸುತ್ತಿದ್ದರೂ ಗುರಿತಪ್ಪಿಹೋಗುವುದನ್ನು ಕಂಡು ಮಹಾಚಿಂತೆಯುಂಟಾಯಿತು: "ಈ ಮಹಾಕಪಿಯನ್ನು ಕೊಲ್ಲುವುದಕ್ಕೆ ಶಕ್ಯವಿಲ್ಲ. ಇವನನ್ನು ಹೇಗಾದರೂ ಸೆರೆಹಿಡಿಯಬೇಕು" ಎಂದು ವಿಚಾರಮಾಡಿದನು (೩೪–೩೫). ಕೊನೆಗೆ ಅಸ್ತ್ರವಿದ್ಯಾ

ವಿಶಾರದನಾದ ಆ ವೀರನು ಹನುಮಂತನಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸ ಬೇಕೆಂದು ನಿರ್ಧರಿಸಿ, ಅದನ್ನು ಧನುಸ್ಸಿನಲ್ಲಿ ಹೂಡಿದನು. ಬೇರೆ ಅಸ್ತ್ರಗಳಿಗೆ ಇವನು ಜಗ್ಗುವವನಲ್ಲವೆಂದು ನಿಶ್ಚಯಿಸಿ ಇಂದ್ರಜಿತ್ತು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ವಾಯುಪುತ್ರನನ್ನು ಬಂಧಿಸಿದನು (೩೬–೩೭). ಹನುಮಂತನು ಆ ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದು ನಿಶ್ಚೇಷ್ಟನಾಗಿ ನೆಲದಮೇಲೆ ಬಿದ್ದನು. ಆಗ ಅಸ್ತ್ರವು ಬ್ರಹ್ಮದೇವತಾಕವಾದ ಮಂತ್ರಗಳಿಂದ ಮಂತ್ರಿಸಲ್ಪಟ್ಟಿದೆಯೆಂದೂ ಬ್ರಹ್ಮದೇವನ ಮಹಿಮೆಯಿಂದ ಬ್ರಹ್ಮಾಸ್ತ್ರದಲ್ಲಿ ತಾನು ಕಟ್ಟುಬಿದ್ದಿರುವೆನೆಂದೂ ಅವನು ತಿಳಿದುಕೊಂಡನು. ಬ್ರಹ್ಮನು ತನಗೆ ಅನುಗ್ರಹಿಸಿದ ವರವೂ ಸ್ಮರಣೆಗೆ ಬಂದಿತು (೩೮–೪೦). "ಬ್ರಹ್ಮಾಸ್ತ್ರದ ಬಂಧನದಿಂದ ನಾನು ತಪ್ಪಿಸಿಕೊಳ್ಳ ಲಾರೆನೆಂದು ಭಾವಿಸಿ, ಇಂದ್ರಜಿತ್ತು ಈ ಅಸ್ತ್ರವನ್ನು ಪ್ರಯೋಗಿಸಿದ್ದಾನೆ. ಲೋಕಗುರುವಾದ ಬ್ರಹ್ಮನ ಆಜ್ಞೆಯನ್ನು ಅನುಸರಿಸಿ ನಡೆಯುವುದು ಯೋಗ್ಯ ವಾದದ್ದು (೪೧). ಬ್ರಹ್ಮದೇವನೂ, ದೇವೇಂದ್ರನೂ, ವಾಯುದೇವನೂ ನನಗೆ ವರವನ್ನು ಅನುಗ್ರಹಿಸಿ ರಕ್ಷಿಸುತ್ತಿರುವುದರಿಂದ ನಾನು ಈ ಅಸ್ತ್ರಕ್ಕೆ ಕಟ್ಟು ಬಿದ್ದರೂ ನನಗೆ ಭಯವಿಲ್ಲ. ಈ ರಾಕ್ಷಸರು ನನ್ನನ್ನು ಹಿಡಿದುಕೊಂಡುಹೋದರೂ ದೊಡ್ಡ ಪ್ರಯೋಜನವೇ ಇದೆ. ರಾಕ್ಷಸರಾಜನಾದ ರಾವಣನೊಡನೆ ನಾನು ಸಂಭಾಷಣೆಯನ್ನು ನಡೆಸಬಹುದು. ಆದ್ದರಿಂದ ನನ್ನನ್ನು ಬಂಧಿಸಿ ಒಯ್ಯಲಿ" ಎಂದು ಹನುಮಂತನು ನಿಶ್ಚಯಿಸಿಕೊಂಡನು (೪೨–೪೪). ಶತ್ರುವಿಧ್ವಂಸಕ ನಾದ ಹನುಮಂತನು ಯಾವಾಗಲೂ ವಿಮರ್ಶಿಸಿ ಕೆಲಸಮಾಡತಕ್ಕವನು. ಅವನು ಹೀಗೆ ನಿಶ್ಚಯಿಸಿ ಕೈಕಾಲುಗಳನ್ನು ಅಲ್ಲಾಡಿಸದೆ ನಿಶ್ಚೇಷ್ಟನಾಗಿದ್ದನು. ಆಗ ರಾಕ್ಷಸರು ಅವನನ್ನು ಮೂದಲಿಸುತ್ತ ಸೆಣಬು ಮತ್ತು ಇತರ ನಾರುಗಳಿಂದ ಬಿಗಿದುಕಟ್ಟಿದರು. ಹನುಮಂತನು (ತನಗೆ ಪೀಡೆಯಾದಂತೆ ನಟಿಸುತ್ತ) ಕೂಗಿ ಕೊಳ್ಳುತ್ತಿದ್ದನು (೪೫–೪೬). ಈ ನೆವದಲ್ಲಿ ರಾವಣನು ತನ್ನನ್ನು ನೋಡಬಹು ದೆಂದು ಭಾವಿಸಿ, ಶತ್ರುಗಳು ಕಟ್ಟಿದರೂ ಮೂದಲಿಸಿದರೂ ಹನುಮಂತನು ಅದಕ್ಕೆ ಸಮ್ಮತಿಸಿ ಸುಮ್ಮನಿದ್ದನು. ಅವರು ನಾರಿನಿಂದ ಹನುಮಂತನನ್ನು ಬಿಗಿ ದೊಡನೆ ಬ್ರಹ್ಮಾಸ್ತ್ರದ ಕಟ್ಟು ಸಡಿಲಿಹೋಯಿತು. ಏಕೆಂದರೆ, ಬ್ರಹ್ಮಾಸ್ತ್ರವು ಬೇರೆ ವಿಧವಾದ ಕಟ್ಟನ್ನು ಎಂದಿಗೂ ಸಹಿಸದು (೪೭–೪೮). ರಾಕ್ಷಸರು ಹೀಗೆ ನಾರಿನಿಂದ ಕಟ್ಟಿದ್ದನ್ನು ತಿಳಿದೊಡನೆ ಇಂದ್ರಜಿತ್ತು "ಅಯ್ಯೋ, ಬ್ರಹ್ಮಾಸ್ತ್ರವು

ಸಡಿಲಿಹೋಯಿತು. ಇವನು ಹಗ್ಗದಿಂದ ಬಿಗಿಯಲ್ಪಟ್ಟಮೇಲೆ ಬ್ರಹ್ಮಾಸ್ತ್ರಕ್ಕೆ ಮಣಿಯುವುದಿಲ್ಲ. ನನ್ನ ಮಹಾಪ್ರಯತ್ನವೂ ವ್ಯರ್ಥವಾಯಿತು. ಮಂತ್ರ ಪದ್ಧತಿಯನ್ನು ರಾಕ್ಷಸರು ತಿಳಿದುಕೊಳ್ಳದೆ ಹೋದರು. ಬ್ರಹ್ಮಾಸ್ತ್ರವು ವಿಫಲ ವಾದಮೇಲೆ ಇನ್ನು ಯಾವ ಅಸ್ತ್ರವೂ ಕೆಲಸಮಾಡುವುದಿಲ್ಲ. ಈಗ ನಾವೆಲ್ಲರೂ ಮಹಾವಿಪತ್ತಿನಲ್ಲಿ ಸಿಕ್ಕಿಬಿದ್ದೆವು" ಎಂದು ಚಿಂತಾಕ್ರಾಂತನಾದನು (೪೯–೫೦). ಆದರೆ ತಾನು ಬ್ರಹ್ಮಾಸ್ತ್ರದಿಂದ ಬಿಡುಗಡೆಹೊಂದಿದೆನೆಂಬುದನ್ನು ಹನುಮಂತನು ತೋರಿಸಿಕೊಳ್ಳಲಿಲ್ಲ. ಕ್ರೂರಿಗಳಾದ ರಾಕ್ಷಸರು ಹಗ್ಗಗಳಿಂದ ಬಿಗಿದು ದೊಣ್ಣೆ ಗಳಿಂದಲೂ ಮುಷ್ಟಿಗಳಿಂದಲೂ ಅವನನ್ನು ಹೊಡೆಯುತ್ತ ರಾವಣನ ಸಮೀಪಕ್ಕೆ ಎಳೆದುಕೊಂಡುಹೋದರು (೫೧–೫೨). ಅವನು ಬ್ರಹ್ಮಾಸ್ತ್ರದಿಂದ ವಿಮುಕ್ತ ನಾಗಿ ಹಗ್ಗಗಳಿಂದ ಮಾತ್ರ ಬಿಗಿಯಲ್ಪಟ್ಟಿರುವನೆಂದು ಅರಿತಿದ್ದ ಇಂದ್ರಜಿತ್ತು ಹನುಮಂತನನ್ನು ಪರಿವಾರಸಮೇತನಾಗಿ ಸಭೆಯಲ್ಲಿ ಕುಳಿತಿದ್ದ ರಾವಣನಿಗೆ ತೋರಿಸಿದನು. ಇತರ ರಾಕ್ಷಸರೂ ಕೂಡ ಸೆರೆಹಿಡಿದ ಮದ್ದಾನೆಯಂತಿದ್ದ ವಾನರ ಶ್ರೇಷ್ಠನನ್ನು ರಾವಣನಿಗೆ ತೋರಿಸುತ್ತಿದ್ದರು (೫೩–೫೪). ಸಭೆಯಲ್ಲಿ ನೆರೆದಿದ್ದ ರಾಕ್ಷಸರು "ಯಾರಿವನು ? ಯಾರ ಮಗ ? ಎಲ್ಲಿಂದ ಬಂದಿದ್ದಾನೆ ? ಇಲ್ಲಿ ಏನು ಕೆಲಸ ? ಇವನ ಆಶ್ರಯದಾತನು ಯಾರು ?" ಎಂದು ತಮ್ಮತಮ್ಮಲ್ಲಿ ಮಾತಾಡಿ ಕೊಳ್ಳುತ್ತಿದ್ದರು. ಕೆಲವರು ಕ್ರುದ್ಧರಾಗಿ "ಈ ಕಪಿಯನ್ನು ಕೊಂದುಬಿಡಬೇಕು, ಸುಟ್ಟುಬಿಡಬೇಕು, ತಿಂದುಬಿಡಬೇಕು" ಎಂದು ಹೇಳುತ್ತಿದ್ದರು (೫೫–೫೬). ಇಷ್ಟರಲ್ಲಿ ಆಂಜನೇಯನು ಮುಂದೆ ಬಂದು ರಾವಣನ ಪಾದದ ಬಳಿ ಕುಳಿತಿದ್ದ ಮಂತ್ರಿವೃದ್ಧರನ್ನೂ ಮಹಾರತ್ನಗಳಿಂದ ಭೂಷಿತವಾದ ಅರಮನೆಯನ್ನೂ ನೋಡಿದನು. ವಿಕಾರಿಗಳಾದ ರಾಕ್ಷಸರು ಎಳೆದು ತರುತ್ತಿದ್ದ ವಾನರಶ್ರೇಷ್ಠನನ್ನು ರಾವಣನು ಕಂಡನು. ಈ ವಾನರಶ್ರೇಷ್ಠನೂ ತೇಜೋಬಲಗಳಿಂದ ಯುಕ್ತನಾಗಿ ಸೂರ್ಯನಂತೆ ಬೆಳಗುತ್ತಿದ್ದ ರಾಕ್ಷಸೇಶ್ವರನನ್ನು ಕಂಡನು (೫೭–೫೯). ಆಗ ರಾವಣನು ಹನುಮಂತನನ್ನು ದೃಷ್ಟಿಸಿ ನೋಡಿ ಕೋಪದಿಂದ ಕೆಂಪಡರಿದ ಕಣ್ಣುಗಳನ್ನು ತಿರುಗಿಸುತ್ತ, ಅವನ ಸಂಗತಿಯನ್ನು ವಿಚಾರಿಸಬೇಕೆಂದು ಕುಲ ಶೀಲವೃದ್ಧರಾದ ಮಂತ್ರಿಗಳಿಗೆ ಆಜ್ಞಾಪಿಸಿದನು. ಅವರು ಹನುಮಂತನನ್ನು ಕುರಿತು "ನೀನು ಬಂದ ಕೆಲಸವೇನು ? ಯಾರು ನಿನ್ನನ್ನು ಕಳುಹಿಸಿದರು ?" ಎಂದು ಪ್ರಶ್ನೆಮಾಡಿದರು. "ನಾನು ದೂತನಾಗಿ ಬಂದಿದ್ದೇನೆ. ಕಪೀಶ್ವರನಾದ

ಸುಗ್ರೀವನು ನನ್ನನ್ನು ಕಳುಹಿಸಿದ್ದಾನೆ" ಎಂದು ಹನುಮಂತನು ತಿಳಿಸಿದನು (೬೦-೬೧).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ನಲವತ್ತೆಂಟನೆಯ ಸರ್ಗ

---

## ಸರ್ಗ ೪೯

ಹನುಮಂತನು ರಾವಣನ ವೈಭವವನ್ನು ಕಂಡು ಆಶ್ಚರ್ಯಪಡುವುದು.

ಪರಾಕ್ರಮಿಯಾದ ಆಂಜನೇಯನು ತನ್ನನ್ನು ಸೆರೆಹಿಡಿದಿದ್ದರಿಂದ ವಿಸ್ಮಿತನಾಗಿ ಕೆಂಪಡರಿದ ಕಣ್ಣುಗಳಿಂದ ರಾವಣನನ್ನು ನೋಡುತ್ತ ನಿಂತನು. ರಾವಣನಾದರೋ ಮುತ್ತಿನ ಕುಚ್ಚುಗಳಿಂದ ಅಲಂಕೃತವಾದ ಸುವರ್ಣಮಯ ಕಿರೀಟವನ್ನು ಧರಿಸಿದ್ದನು (೧-೨). ವಜ್ರ ಮುಂತಾದ ಮಹಾಮಣಿಗಳಿಂದ ಖಚಿತವಾಗಿಯೂ ಮನಸ್ಸಿನಿಂದಲೇ ನಿರ್ಮಿತವಾಗಿವೆಯೋ ಎಂಬಷ್ಟು ಸುಂದರವಾಗಿಯೂ ಚಿತ್ರವಿಚಿತ್ರವಾಗಿಯೂ ಇದ್ದ ಸುವರ್ಣಾಭರಣಗಳನ್ನು ಹಾಕಿಕೊಂಡಿದ್ದನು. ಉತ್ತಮವಾದ ರೇಶ್ಮೆಯ ದುಕೂಲವನ್ನುಟ್ಟು ಮೈಗೆ ರಕ್ತಚಂದನವನ್ನೂ ಕಸ್ತೂರಿ ಮುಂತಾದ ಲೇಪನಗಳನ್ನೂ ಪೂಸಿಕೊಂಡಿದ್ದನು (೩-೪). ಮಹಾತೇಜಸ್ವಿಯಾದ ರಾವಣನಿಗೆ ಅಂದವಾದ ಹತ್ತು ತಲೆಗಳಿದ್ದವು. ಕೆಂಪಾದ ಕಣ್ಣುಗಳು. ತೀಕ್ಷ್ಣವಾದ ದೊಡ್ಡದೊಡ್ಡ ಹಲ್ಲುಗಳು. ಜೋಲುವ ಭಾರಿ ತುಟಿಗಳು. ರಾವಣನು ಮಂದರಪರ್ವತದಂತೆಯೂ ಅವನ ತಲೆಗಳು ನಾನಾದುಷ್ಟಮೃಗಗಳಿಂದ ಕೂಡಿದ ಪರ್ವತಶಿಖರಗಳಂತೆಯೂ ಕಾಣಿಸುತ್ತಿದ್ದವು (೫-೬). ಕಪ್ಪು ಕಾಡಿಗೆಯ ರಾಶಿಯಂತಿದ್ದ ರಾವಣನು ಪೂರ್ಣಚಂದ್ರನಂತಹ ಮಧ್ಯಮಣಿಯಿಂದ ಯುಕ್ತವಾದ ಮುತ್ತಿನ ಹಾರವನ್ನು ಧರಿಸಿದ್ದನು. ಆದ್ದರಿಂದ ಅವನು ಕೊಕ್ಕರೆಗಳ ಸಾಲಿನಿಂದ ರಂಜಿಸುವ ಮೇಘದಂತೆ ಕಾಣುತ್ತಿದ್ದನು. ಶ್ರೀಗಂಧದಿಂದ ಲಿಪ್ತವಾಗಿ ಭುಜಕೀರ್ತಿಗಳಿಂದ ಭೂಷಿತವಾದ ಅವನ ಇಪ್ಪತ್ತು ಬಾಹುಗಳು ಐದುಹೆಡೆಯ ಸರ್ಪಗಳಂತೆ ವಿರಾಜಿಸುತ್ತಿದ್ದವು (೭-೮). ರಾವಣನು ಸ್ಫಟಿಕಮಯವಾಗಿಯೂ ನಾನಾಚಿತ್ರಗಳಿಂದಲೂ ರತ್ನಗಳಿಂದಲೂ ಭೂಷಿತವಾಗಿಯೂ ಉತ್ತಮವಾದ ರತ್ನಗಂಬಳಿಯನ್ನು ಹಾಸಿಯೂ ಇದ್ದ ಸಿಂಹಾಸನದ

ಮೇಲೆ ಮಂಡಿಸಿದ್ದನು. ಸುತ್ತಲೂ ಅಲಂಕೃತೆಯರಾದ ಸುಂದರಸ್ತ್ರೀಯರು ಚಾಮರವನ್ನು ಹಿಡಿದು ಬೀಸುತ್ತಿದ್ದರು (೯–೧೦). ಮಂತ್ರಾಲೋಚನೆಯಲ್ಲಿ ನಿಪುಣರೂ ಬಲಾಢ್ಯರೂ ಆದ ದುರ್ಧರ, ಪ್ರಹಸ್ತ, ಮಹಾಪಾರ್ಶ್ವ, ನಿಕುಂಭ ಎಂಬ ನಾಲ್ವರು ಮಂತ್ರಿಗಳು ಸುತ್ತಲೂ ಕುಳಿತಿದ್ದರು. ಅವರು ನಾಲ್ಕು ಸಮುದ್ರಗಳಂತೆಯೂ ಮಧ್ಯದಲ್ಲಿದ್ದ ರಾವಣನು ಅವುಗಳಿಂದ ರಕ್ಷಿತವಾದ ಭೂಮಂಡಲದಂತೆಯೂ ತೋರುತ್ತಿದ್ದನು (೧೧–೧೨). ರಾಜನೀತಿಯನ್ನು ಬಲ್ಲ ಚಾಣಾಕ್ಷರಾದ ಇನ್ನೂ ಅನೇಕ ಸಚಿವರಿಂದ ಸೇವಿತನಾಗಿ, ದೇವತೆಗಳೊಡನಿರುವ ದೇವೇಂದ್ರನಂತೆ ಅವನು ಶೋಭಿಸುತ್ತಿದ್ದನು. ಆ ರಾವಣನು ಮೇರುಪರ್ವತದ ಮೇಲೆ ಕುಳಿತ ಕಾಲಮೇಘದಂತೆ ಸಿಂಹಾಸನದಲ್ಲಿ ಕುಳಿತಿರುವುದನ್ನು ಹನುಮಂತನು ನೋಡಿದನು (೧೩–೧೪). ರಾಕ್ಷಸರು ಸುತ್ತಲೂ ತನ್ನನ್ನು ಪೀಡಿಸುತ್ತಿದ್ದರೂ ಹನುಮಂತನು ಆಶ್ಚರ್ಯದಿಂದ ರಾಕ್ಷಸೇಶ್ವರನನ್ನೇ ಗಮನಿಸಿ ನೋಡುತ್ತ ನಿಂತನು. ಅವನ ಅದ್ಭುತವಾದ ತೇಜಸ್ಸಿಗೆ ಮಾರುಹೋಗಿ, ಹನುಮಂತನು "ಅಬ್ಬಾ! ಈತನ ರೂಪವೇನು! ಧೈರ್ಯವೇನು! ತೇಜಸ್ಸೇನು! ಅಬ್ಬಾ! ಈ ರಾಕ್ಷಸೇಶ್ವರನು ಸಮಸ್ತ ರಾಜಲಕ್ಷಣಗಳಿಂದಲೂ ಕೂಡಿದ್ದಾನೆ (೧೫–೧೭). ಇವನಲ್ಲಿ ಬಲವಾದ ಅಧರ್ಮ ಒಂದು ಇಲ್ಲದಿದ್ದ ಪಕ್ಷದಲ್ಲಿ ಇವನು ರಾಕ್ಷಸರಿಗೆ ಮಾತ್ರವಲ್ಲ, ದೇವತೆಗಳಿಗೂ ದೇವೇಂದ್ರನಿಗೂ ಅಧಿಪತಿಯಾಗಬಲ್ಲನು. ಈತನು ಲೋಕನಿಂದಿತವಾದ ಕ್ರೂರಕಾರ್ಯಗಳನ್ನು ನಿರ್ದಯವಾಗಿ ನಡೆಸುತ್ತಿರುವುದರಿಂದ, ದೇವದಾನವಾದಿ ಸಮಸ್ತ ಜನರೂ ಭೀತಿಗೊಂಡಿದ್ದಾರೆ. ಈತನು ಕ್ರುದ್ಧನಾದರೆ ಜಗತ್ತನ್ನೇ ಸಮುದ್ರದಲ್ಲಿ ಮುಳುಗಿಸಬಲ್ಲನು" ಎಂಬುದಾಗಿ ರಾವಣನ ಪ್ರಭಾವವನ್ನು ಕಂಡು ಮನಸ್ಸಿನಲ್ಲಿ ನಾನಾ ವಿಧವಾಗಿ ಎಣಿಸುತ್ತಿದ್ದನು (೧೮–೨೦).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ನಲವತ್ತೊಂಬತ್ತನೆಯ ಸರ್ಗ

*

## ಸರ್ಗ ೫೦

ಪ್ರಹಸ್ತನ ಪ್ರಶ್ನೆಗಳಿಗೆ ಹನುಮಂತನು ಉತ್ತರ ಹೇಳುವುದು.

ಸಮಸ್ತಲೋಕವನ್ನೂ ಗೋಳಾಡಿಸುತ್ತಿದ್ದ ಮಹಾಬಾಹುವಾದ ರಾವಣನು ತನ್ನೆದುರಿಗೆ ಬಂದು ನಿಂತ ಹನುಮಂತನನ್ನು ನೋಡಿದೊಡನೆ ಕೋಪಾವಿಷ್ಟನಾದನು. ಅವನ ತೇಜಸ್ಸನ್ನು ನೋಡಿ ರಾವಣನಿಗೆ ಮನಸ್ಸಿನಲ್ಲಿ "ಹಿಂದೆ ಕೈಲಾಸದಲ್ಲಿ ನನಗೆ ಶಾಪವನ್ನು ಕೊಟ್ಟಿದ್ದ ಭಗವಾನ್ ನಂದಿಕೇಶ್ವರನೇ ಇವನಾಗಿರಬಹುದೆ? ಅಥವಾ ಬಾಣಾಸುರನು ಈ ವಾನರಾಕೃತಿಯಿಂದ ಬಂದಿರಬಹುದೆ?" ಎಂದು ಶಂಕೆಯುಂಟಾಯಿತು * (೧–೩). ಅವನು ಮುಖ್ಯಮಂತ್ರಿಯಾದ ಪ್ರಹಸ್ತನನ್ನು ಕಾಲೋಚಿತವೂ ಅರ್ಥಗರ್ಭಿತವೂ ಆದ ಮಾತಿನಿಂದ "ಪ್ರಹಸ್ತ, ಈ ದುರಾತ್ಮನು ಯಾರೆಂದು ಕೇಳು. ಇವನು ಎಲ್ಲಿಂದ ಬಂದಿದ್ದಾನೆ? ಅಶೋಕವನವನ್ನು ನಾಶಮಾಡುವುದಕ್ಕೂ ರಾಕ್ಷಸಿಯರನ್ನು ಹೆದರಿಸುವುದಕ್ಕೂ ಕಾರಣವೇನು? ನನ್ನ ನಗರಕ್ಕೆ ಏಕೆ ಬಂದಿದ್ದಾನೆ? ನಮ್ಮೊಡನೆ ಯುದ್ಧಮಾಡಿದ್ದೇಕೆ?—ಎಂದು ಈ ದುಷ್ಟನನ್ನು ವಿಚಾರಿಸು" ಎಂದನು (೪–೬). ಆಗ ಪ್ರಹಸ್ತನು "ಎಲೈ ಕಪಿಯೆ, ಸಮಾಧಾನದಿಂದಿರು. ಒಳ್ಳೆಯದಾಗುವುದು. ಅಂಜಬೇಡ! ಇಂದ್ರನೇನಾದರೂ ನಿನ್ನನ್ನು ಇಲ್ಲಿಗೆ ಕಳಿಸಿದ್ದಾನೆಯೆ? ಸತ್ಯವನ್ನು ಹೇಳು; ಹೆದರಬೇಡ. ನಿನ್ನನ್ನು ಬಿಟ್ಟುಬಿಡುತ್ತೇವೆ (೭–೮). ಕುಬೇರನಿಗಾಗಲಿ, ಯಮನಿಗಾಗಲಿ, ವರುಣನಿಗಾಗಲಿ ಕಿಂಕರನಾಗಿ ನಮ್ಮ ನಗರಕ್ಕೆ ಬಂದಿರುವೆಯೊ? ಅಥವಾ ನಮ್ಮನ್ನು ಜಯಿಸುವುದಕ್ಕಾಗಿ ವಿಷ್ಣುವೇನಾದರೂ ಕಳಿಸಿದ್ದಾನೊ? ರೂಪದಲ್ಲಿ ಮಾತ್ರ ನೀನು ವಾನರನಾಗಿದ್ದರೂ ನಿನ್ನ ತೇಜಸ್ಸು ಯಾವ ವಾನರನಿಗೂ ಇಲ್ಲ (೯–೧೦). ಎಲೈ ಕಪಿಯೆ, ನೀನು ಸತ್ಯವನ್ನು ಹೇಳಿದರೆ ನಿನ್ನನ್ನು ಬಿಟ್ಟುಬಿಡುತ್ತೇವೆ. ಸುಳ್ಳು ಹೇಳಿದರೆ ಮಾತ್ರ ನಿನ್ನ ಪ್ರಾಣ ಉಳಿಯುವುದಿಲ್ಲ. ಅಥವಾ (ನೀನು ಯಾರ ಕಿಂಕರನೂ ಅಲ್ಲದಿದ್ದರೆ)

---

* ರಾವಣನು ಕೈಲಾಸದಲ್ಲಿ ನಂದಿಕೇಶ್ವರನನ್ನು ನೋಡಿ ಕಪಿಯ ಮುಖದವನೆಂದು ಹಾಸ್ಯಮಾಡಿದ್ದನು. ಆಗ ನಂದಿಯು 'ನಿನಗೆ ಕಪಿಯ ಮುಖದವರಿಂದಲೇ ನಾಶ ಒದಗಲಿ' ಎಂದು ರಾವಣನನ್ನು ಶಪಿಸಿದ್ದನು. ಬಾಣಾಸುರನು ಶಿವಭಕ್ತನಾದ್ದರಿಂದ ನಂದಿಯು ಅವನನ್ನು ಕಳಿಸಿರಬಹುದೆಂದು ರಾವಣನಿಗೆ ಸಂದೇಹವಾಯಿತು.

ರಾವಣೇಶ್ವರನ ಪಟ್ಟಣಕ್ಕೆ ನೀನು ಏಕೆ ಬಂದೆ?" ಎಂದು ಕೇಳಿದನು. ಆಗ ಹನುಮಂತನು (ಪ್ರಹಸ್ತನನ್ನು ಲೆಕ್ಕಿಸದೆ) ರಾವಣನ ಕಡೆಗೆ ತಿರುಗಿ "ನಾನು ಇಂದ್ರನಿಗಾಗಲಿ, ಯಮನಿಗಾಗಲಿ, ವರುಣನಿಗಾಗಲಿ ಕಿಂಕರನಲ್ಲ. ಕುಬೇರ ನೊಡನೆಯೂ ನನಗೆ ಸ್ನೇಹವಿಲ್ಲ. ವಿಷ್ಣುವೂ ನನ್ನನ್ನು ಕಳಿಸಿಲ್ಲ (೧೧–೧೩). ನಾನು ವಾನರಜಾತಿಯವನೇ ಹೌದು. ರಾಕ್ಷಸರಾಜನಾದ ನಿನ್ನ ದರ್ಶನವು ದುರ್ಲಭವೆಂದು ತಿಳಿದು, ಈ ನೆವದಿಂದಲಾದರೂ ನಿನ್ನ ದರ್ಶನವಾದೀತೆಂದು ಅಶೋಕವನವನ್ನು ನಾಶಮಾಡಿದೆನು. ಆಗ ಬಲಶಾಲಿಗಳಾದ ರಾಕ್ಷಸರು ನನ್ನ ಮೇಲೆ ಯುದ್ಧಕ್ಕೆ ಬಂದರು (೧೪–೧೫). ಆತ್ಮರಕ್ಷಣೆಗಾಗಿ ನಾನು ಯುದ್ಧ ಮಾಡಬೇಕಾಯಿತು. ಯಾವ ಅಸ್ತ್ರಗಳಿಂದಲೂ ಪಾಶಗಳಿಂದಲೂ ನನ್ನನ್ನು ಕಟ್ಟುವುದಕ್ಕೆ ದೇವಾಸುರರಿಗೂ ಶಕ್ಯವಿಲ್ಲ. ನಾನು ಬ್ರಹ್ಮದೇವನಿಂದ ಈ ವರ ವನ್ನು ಪಡೆದಿದ್ದೇನೆ ರಾಕ್ಷಸರಾಜನಾದ ನಿನ್ನನ್ನು ನೋಡುವ ಅಪೇಕ್ಷೆಯಿಂದ ಬ್ರಹ್ಮಾಸ್ತ್ರಕ್ಕೆ ಮಣಿದು ಬದ್ಧನಾಗಿದ್ದೇನೆ (೧೬–೧೭). ರಾಕ್ಷಸರು ಹಗ್ಗಗಳಿಂದ ನನ್ನನ್ನು ಕಟ್ಟಿದಾಗಲೇ ಬ್ರಹ್ಮಾಸ್ತ್ರವು ಬಿಟ್ಟುಹೋಯಿತು. ಬಂದಾನೊಂದು ರಾಜಕಾರ್ಯಕ್ಕಾಗಿ ನಿನ್ನ ಬಳಿಗೆ ಬಂದಿದ್ದೇನೆ. ನಾನು ಮಹಾತೇಜಸ್ವಿಯಾದ ಶ್ರೀರಾಮನ ದೂತನೆಂದು ತಿಳಿ. ರಾಜ, ನಿನಗೆ ಪಥ್ಯವಾದ ಕೆಲವು ಮಾತು ಗಳನ್ನು ಹೇಳುವೆನು, ಕೇಳು" ಎಂದನು (೧೮–೧೯).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಐವತ್ತನೆಯ ಸರ್ಗ

---

## ಸರ್ಗ ೫೧

ಶ್ರೀರಾಮನ ವನವಾಸವೇ ಮೊದಲಾಗಿ ತಾನು ಸೀತಾದರ್ಶನ ಮಾಡಿದ ವೃತ್ತಾಂತ ವನ್ನು ಹೇಳಿ, ಸೀತೆಯನ್ನು ರಾಮನಿಗೆ ಒಪ್ಪಿಸಬೇಕೆಂದು ಹನುಮಂತನು ರಾವಣನಿಗೆ ಉಪದೇಶಿಸುವುದು.

ಧೀರನಾದ ಆಂಜನೇಯನು ರಾವಣನನ್ನು ದಿಟ್ಟಿಸಿ ನೋಡಿ, ಎಚ್ಚರಿಕೆಯಿಂದ ಅರ್ಥವತ್ತಾದ ಮಾತನ್ನು ಹೇಳಲಾರಂಭಿಸಿದನು :—"ಎಲೈ ರಾಕ್ಷಸೇಶ್ವರ,

ನಾನು ಸುಗ್ರೀವನ ಸಂದೇಶವನ್ನು ನಿನಗೆ ಮುಟ್ಟಿಸಲು ಬಂದಿದ್ದೇನೆ. ಆ ಕಪೀಶ್ವರನು ನಿನ್ನ ಕ್ಷೇಮವನ್ನು ವಿಚಾರಿಸಿದ್ದಾನೆ (೧–೨). ನಿನಗೆ ಸೋದರನಂತೆ ಹಿತವನ್ನು ಕೋರುವ ಮಹಾತ್ಮನಾದ ಸುಗ್ರೀವನು ಇಹಪರಗಳೆರಡಕ್ಕೂ ಶ್ರೇಯಸ್ಕರವಾಗಿ ಧರ್ಮಾರ್ಥಯುಕ್ತವಾದ ಮಾತನ್ನು ಹೇಳಿ ಕಳಿಸಿದ್ದಾನೆ: ರಥಗಜಾಶ್ವಗಳ ಸಮೃದ್ಧಿಯುಳ್ಳ ದಶರಥನೆಂಬ ಮಹಾರಾಜನಿದ್ದನು. ಅವನು ಪ್ರಜೆಗಳಿಗೆ ತಂದೆಯಂತಿದ್ದನು. ದೇವೇಂದ್ರನಂತೆ ತೇಜಸ್ವಿ (೩–೪). ಆತನಿಗೆ ಮಹಾಭುಜನೂ ಸಮರ್ಥನೂ ಆದ ರಾಮನೆಂಬ ಹಿರಿಯ ಮಗನಿದ್ದಾನೆ. ಅವನು ತಂದೆಯ ಆಜ್ಞೆಯನ್ನು ಮನ್ನಿಸಿ ದಂಡಕಾವನಕ್ಕೆ ಬಂದನು. ಅವನೊಡನೆ ಪತ್ನಿಯಾದ ಸೀತೆಯೂ ತಮ್ಮನಾದ ಲಕ್ಷ್ಮಣನೂ ಬಂದರು. ರಾಮನೆಂದರೆ ಕೇವಲ ಧರ್ಮಮಾರ್ಗದಲ್ಲಿ ನಡೆಯತಕ್ಕವನು (೫–೬). ಅವನ ಪತ್ನಿಯಾದ ಸೀತೆಯು ವಿದೇಹರಾಜನಾದ ಜನಕನ ಮಗಳು. ಮಹಾಪತಿವ್ರತೆ. ಅವಳು ಅರಣ್ಯದಲ್ಲಿ ಕಳೆದುಹೋದಳು. ರಾಮನು ಸೀತೆಯನ್ನು ಹುಡುಕುತ್ತ ಋಷ್ಯಮೂಕಪರ್ವತಕ್ಕೆ ಬಂದು ಸುಗ್ರೀವನೊಡನೆ ಸೇರಿದನು (೭–೮). ಸುಗ್ರೀವನು ಸೀತೆಯನ್ನು ಹುಡುಕಿಸುವುದಾಗಿ ರಾಮನಿಗೆ ಮಾತು ಕೊಟ್ಟನು. ರಾಮನು ಕಪಿರಾಜ್ಯಕ್ಕೆ ಒಡೆಯನನ್ನಾಗಿ ಮಾಡುತ್ತೇನೆಂದು ಸುಗ್ರೀವನಿಗೆ ಮಾತುಕೊಟ್ಟನು. ಅನಂತರ ರಾಮನು ಯುದ್ಧದಲ್ಲಿ ವಾಲಿಯನ್ನು ಕೊಂದು ಸುಗ್ರೀವನನ್ನು ವಾನರಭಲ್ಲೂಕಗಳಿಗೆ ಅಧಿಪತಿಯನ್ನಾಗಿ ಮಾಡಿದನು (೯–೧೦). ರಾವಣ, ವಾನರಶ್ರೇಷ್ಠನಾದ ವಾಲಿಯು ಎಂತಹ ಪರಾಕ್ರಮಿಯೆಂಬುದು ನಿನಗೆ ಗೊತ್ತಿದೆ! ಅಂತಹ ವಾಲಿಯನ್ನು ರಾಮನು ಒಂದೇ ಬಾಣದಿಂದ ಸಂಹರಿಸಿದ್ದಾನೆ. ಆಮೇಲೆ ಸತ್ಯಸಂಧನಾದ ಸುಗ್ರೀವನು ಸೀತಾನ್ವೇಷಣಕ್ಕಾಗಿ ಎಲ್ಲಾ ಕಪಿಗಳನ್ನೂ ನಾನಾದಿಕ್ಕುಗಳಿಗೆ ಕಳುಹಿಸಿದನು (೧೧–೧೨). ಕೋಟಿಗಟ್ಟಲೆ ಕಪಿಗಳು ಸಮಸ್ತ ದಿಕ್ಕುಗಳಿಗೂ ಹೋಗಿ ಭೂಮ್ಯಾಕಾಶಗಳಲ್ಲಿ ಸೀತೆಯನ್ನು ಹುಡುಕುತ್ತಿದ್ದಾರೆ. ಅವರಲ್ಲಿ ಕೆಲವು ಕಪಿವೀರರು ಗರುಡನಂತೆಯೂ, ವಾಯುವಿನಂತೆಯೂ ಅಂತರಿಕ್ಷದಲ್ಲಿ ತಡೆಯಿಲ್ಲದೆ ಸಂಚರಿಸಬಲ್ಲರು (೧೩–೧೪). ನಾನು ವಾಯುದೇವನ ಔರಸಪುತ್ರ. ಹನುಮಂತನೆಂದು ನನ್ನ ಹೆಸರು. ನಾನು ಸೀತೆಯನ್ನು ನೋಡುವುದಕ್ಕಾಗಿ ನೂರುಯೋಜನ ವಿಸ್ತಾರವಾದ ಸಮುದ್ರವನ್ನು ಲಂಘಿಸಿ ಇಲ್ಲಿಗೆ ಬಂದಿದ್ದೇನೆ. ಇಲ್ಲಿ ಹುಡುಕುತ್ತಿರುವಾಗ

ನಿನ್ನ ಗೃಹದಲ್ಲಿ* ಜನಕಪುತ್ರಿಯನ್ನು ಕಂಡೆನು (೧೫–೧೬). ಎಲೈ ಮಹಾ ಪ್ರಾಜ್ಞನೆ, ನೀನು ಧರ್ಮಾರ್ಥಕಾಮಗಳ ಸ್ವರೂಪವನ್ನು ಬಲ್ಲವನು. ಮಹಾ ತಪಸ್ಸನ್ನು ನಡೆಸಿದವನು. ನೀನು ಪರಸ್ತ್ರೀಯರನ್ನು ತಂದು ಸೆರೆಯಿಡುವುದು ಯುಕ್ತವಲ್ಲ. ನಿನ್ನಂತಹ ಬುದ್ಧಿಶಾಲಿಗಳು ಧರ್ಮವಿರುದ್ಧವೂ ವಿಪತ್ಕಾರಿಯೂ ಸಮೂಲವಾಗಿ ಆತ್ಮವಿನಾಶಕಾರಿಯೂ ಆದ ಕಾರ್ಯಗಳಲ್ಲಿ ತೊಡಗುವುದಿಲ್ಲ (೧೭–೧೮). ರಾಮನ ಕ್ರೋಧಕ್ಕೆ ಅನುಗುಣವಾಗಿ ಲಕ್ಷ್ಮಣನು ಬಾಣಗಳನ್ನು ಬಿಡುವುದಕ್ಕೆ ಆರಂಭಿಸಿದರೆ, ಅವುಗಳನ್ನು ಎದುರಿಸತಕ್ಕವನು ದೇವಾಸುರರಲ್ಲಿ ಯಾವನಿದ್ದಾನೆ? ರಾಮನಿಗೆ ಅಪ್ರಿಯವಾದ್ದನ್ನು ಮಾಡಿದಮೇಲೆ ಸುಖವಾಗಿ ಇರಬಲ್ಲವನು ಮೂರುಲೋಕಗಳಲ್ಲಿ ಒಬ್ಬನೂ ಇಲ್ಲ (೧೯–೨೦). ಆದ್ದರಿಂದ ಈ ಮಾತು ಕಾಲತ್ರಯದಲ್ಲಿಯೂ ನಿನಗೆ ಹಿತಕಾರಿ. ಧರ್ಮಕ್ಕೆ ಅನುಗುಣ ವಾದದ್ದು. ಒಳ್ಳೆಯ ಪ್ರಯೋಜನವನ್ನು ಕೊಡತಕ್ಕದ್ದು. ನನ್ನ ಮಾತನ್ನು ಮನ್ನಿಸಿ ಶ್ರೀರಾಮನಿಗೆ ಜಾನಕಿಯನ್ನು ಒಪ್ಪಿಸಿಬಿಡು. ನಾನು ಸೀತಾದೇವಿ ಯನ್ನು ನೋಡಿದ್ದೇನೆ. ಇಲ್ಲಿ ದುರ್ಲಭವಾದ ಸೀತಾದರ್ಶನವು ಆಗಿಹೋಯಿತು. ಇನ್ನು ಮುಂದಿನ ಕೆಲಸವನ್ನು ಶ್ರೀರಾಮನು ನೋಡಿಕೊಳ್ಳುವನು (೨೧–೨೨). ಸೀತೆಯು ಶೋಕದಿಂದ ಕೊರಗುತ್ತಿರುವುದನ್ನು ಕಂಡಿದ್ದೇನೆ. ಆ ದೇವಿಯು ಐದು ಹೆಡೆಯ ಸರ್ಪಿಣಿ ಎಂಬುದು ನಿನಗೆ ಗೊತ್ತಿಲ್ಲ! ಘೋರವಿಷಮಿಶ್ರವಾದ ಅನ್ನದಂತೆ, ಈಕೆಯನ್ನು ದಕ್ಕಿಸಿಕೊಳ್ಳಲು ದೇವಾಸುರರಿಗೂ ಸಾಧ್ಯವಿಲ್ಲ (೨೩–೨೪). ರಾವಣ, ನೀನು ಕಷ್ಟಪಟ್ಟು ತಪಸ್ಸುಮಾಡಿ ಧರ್ಮವನ್ನೂ ದೀರ್ಘಾಯುಸ್ಸನ್ನೂ ಸಂಪಾದಿಸಿಕೊಂಡು ಬಂದಿದ್ದೀಯೆ. ಈಗ ಪ್ರಬಲವಾದ ಅಧರ್ಮದಿಂದ ಅದನ್ನೆಲ್ಲಾ ಹಾಳುಮಾಡಿಕೊಳ್ಳುವುದು ನ್ಯಾಯವಲ್ಲ. ತಪೋ ಬಲದಿಂದ ನೀನು ದೇವಾಸುರರಿಗೆ ಅವಧ್ಯನೆಂದು ಭಾವಿಸಿಕೊಂಡಿದ್ದೀಯೆ. ಆದರೆ ನಿನ್ನ ವಧೆಗೆ ಈಗ ಒಂದು ದೊಡ್ಡ ಕಾರಣವು ಏರ್ಪಟ್ಟಿದೆ (೨೫–೨೬). ಸುಗ್ರೀವನು ದೇವಾಸುರರಾಕ್ಷಸರಲ್ಲಿ ಒಬ್ಬನೂ ಅಲ್ಲ. ಅವನು ಒಬ್ಬ ಶ್ರೇಷ್ಠ ನಾದ ವಾನರ. ಶ್ರೀರಾಮನು ಮನುಷ್ಯ. ಆದ್ದರಿಂದ, ರಾಕ್ಷಸೇಶ್ವರ, ನೀನು

* ಸೀತೆ ಇದ್ದ ಸ್ಥಳ – ರಾವಣನ ಗೃಹ, ಅಂತಃಪುರ – ಎಂದು ಅಲ್ಲಲ್ಲಿ ಹೇಳಿದೆ. ಅದಕ್ಕೆ – ರಾವಣನಿಗೆ ಸೇರಿದ ಪ್ರದೇಶ,–ನಗರ, ಅಂತಃಪುರಕ್ಕೆ ಸಂಬಂಧಿಸಿದ ಉದ್ಯಾನ ಎಂದು ತಾತ್ಪರ್ಯ.

ಪ್ರಾಣವನ್ನು ಹೇಗೆ ಉಳಿಸಿಕೊಳ್ಳುತ್ತೀಯೆ? ಧರ್ಮದ ಫಲದಲ್ಲಿ ಅಧರ್ಮದ ಫಲವು ಅಡಗಿಹೋಗುವುದಿಲ್ಲ. ಅಧರ್ಮದ ಫಲವನ್ನು ಪ್ರತ್ಯೇಕವಾಗಿ ಅನುಭವಿಸಬೇಕಾಗುತ್ತದೆ. ಧರ್ಮವು ಅಧರ್ಮದ ಫಲವನ್ನು ನಾಶಗೊಳಿಸುವುದಿಲ್ಲ. ಇದುವರೆಗೆ ನೀನು ಧರ್ಮದ ಫಲವನ್ನು ಅನುಭವಿಸಿದ್ದೀಯೆ. ಇದರಲ್ಲಿ ಸಂದೇಹವಿಲ್ಲ(೨೭–೨೯). ಇನ್ನುಮೇಲೆ, ನೀನು ಮಾಡಿರುವ ಅಧರ್ಮಕ್ಕೆ ತಕ್ಕ ಫಲವನ್ನು ಶೀಘ್ರವಾಗಿ ಅನುಭವಿಸುತ್ತೀಯೆ. ಜನಸ್ಥಾನದಲ್ಲಿ ನಡೆದ ರಾಕ್ಷಸರ ವಧೆಯ ಬಗೆಯನ್ನೂ ವಾಲಿಯ ವಧೆಯಾದ ರೀತಿಯನ್ನೂ ಈಗ ರಾಮಸುಗ್ರೀವರಿಗೆ ಆಗಿರುವ ಸ್ನೇಹಾತಿಶಯವನ್ನೂ ಪರ್ಯಾಲೋಚಿಸಿ, ನಿನಗೆ ಯಾವುದು ಹಿತಕಾರಿಯೆಂದು ನಿಶ್ಚಯಿಸು. ಈಗ ನಾನೊಬ್ಬನೇ ಲಂಕಾನಗರವನ್ನು ಧ್ವಂಸ ಮಾಡಬಲ್ಲೆನು (೩೦–೩೧). ಆದರೆ ಇದು ರಾಮನಿಗೆ ಸಮ್ಮತವಲ್ಲ. ಸೀತಾದೇವಿಯನ್ನು ಗೋಳಾಡಿಸಿದ ಶತ್ರುಗಳೆಲ್ಲರನ್ನೂ ತಾನೇ ಕೊಂದುಹಾಕುತ್ತೇನೆಂದು ರಾಮನು ವಾನರಭಲ್ಲೂಕ ಸೇನೆಯೆದುರಿಗೆ ಪ್ರತಿಜ್ಞೆಮಾಡಿದ್ದಾನೆ. ಶ್ರೀರಾಮನಿಗೆ ಅಪಕಾರವಮಾಡಿದವನು ಸಾಕ್ಷಾತ್ ದೇವೇಂದ್ರನಾದರೂ ಸೌಖ್ಯದಿಂದ ಇರಲಾರನು (೩೨–೩೩). ಇನ್ನು ನಿನ್ನಂತಹವನ ವಿಷಯವನ್ನು ಹೇಳಬೇಕೆ? ಯಾರನ್ನು ನೀನು ಸೀತೆಯೆಂದೂ ನಿನ್ನ ಕೈಗೆ ಸಿಕ್ಕಿರುವಳೆಂದೂ ಭಾವಿಸಿದ್ದೀಯೋ, ಅವಳು ಲಂಕೆಯನ್ನು ವಿಧ್ವಂಸಮಾಡತಕ್ಕ ಕಾಳರಾತ್ರಿ ಎಂದು ತಿಳಿ. ರಾವಣ, ಸೀತಾರೂಪದಲ್ಲಿರುವ ಈ ಯಮಪಾಶವನ್ನು ಕೊರಳಿಗೆ ಸುತ್ತಿಕೊಳ್ಳಬೇಡ(೩೪–೩೫). ನಿನಗೆ ಹಿತವಾದದ್ದು ಯಾವುದೆಂದು ಚಿಂತಿಸು. ಸೀತೆಯ ತೇಜಸ್ಸಿನಿಂದ ಈ ಪಟ್ಟಣವು ಈಗಲೇ ಅರ್ಧ ಸುಟ್ಟುಹೋಗಿದೆ. ಇನ್ನು ರಾಮನ ಕೋಪವೂ ಸೇರಿದರೆ ಉಪ್ಪರಿಗೆ, ರಥಬೀದಿಗಳೊಡನೆ ಉರಿದುಹೋದೀತು! ನಿನ್ನ ಮಿತ್ರರು, ಮಂತ್ರಿಗಳು, ಬಂಧುಗಳು, ತಮ್ಮಂದಿರು, ಮಕ್ಕಳು, ನಿನ್ನ ಹೆಂಡತಿಯರು, ಭೋಗಭಾಗ್ಯಗಳು, ಈ ಲಂಕಾನಗರ–ಇವೆಲ್ಲವೂ ನಾಶವಾಗುವಂತೆ ಮಾಡಬೇಡ. ರಾಕ್ಷಸೇಶ್ವರ, ಸತ್ಯವಾಗಿಯೂ ನಾನು ಹೇಳುವುದನ್ನು ಕೇಳು (೩೬–೩೮). ನಾನು ರಾಮದಾಸ, ದೂತ ಮತ್ತು ವಾನರಜಾತಿಯವನು. ಶ್ರೀರಾಮನು ಪಂಚಮಹಾಭೂತಗಳೊಡನೆ ಚರಾಚರಾತ್ಮಕವಾದ ನಿಖಿಲ ವಿಶ್ವವನ್ನೇ ನಾಶಮಾಡಿ, ಮತ್ತೆ ಮೊದಲಿನಂತೆ ಸೃಷ್ಟಿಮಾಡಬಲ್ಲನು. ದೇವಾಸುರಮಾನವರಲ್ಲಿ, ಯಕ್ಷರಾಕ್ಷಸರಲ್ಲಿ, ವಿದ್ಯಾಧರ ಗಂಧರ್ವ ಸರ್ಪಗಳಲ್ಲಿ,

ಸಿದ್ಧಕಿನ್ನರರಲ್ಲಿ, ಪಕ್ಷಿಗಳಲ್ಲಿ—ಅಷ್ಟೇಕೆ? ಸಮಸ್ತಪ್ರಾಣಿಗಳಲ್ಲಿಯೂ ಸರ್ವದಾ ಸರ್ವಕಾಲದಲ್ಲಿ ರಾಮನನ್ನು ಎದುರಿಸಿ ಯುದ್ಧಮಾಡತಕ್ಕವನು ಒಬ್ಬನೂ ಇಲ್ಲ. ಅವನು ಪರಾಕ್ರಮದಲ್ಲಿ ಮಹಾವಿಷ್ಣುವಿಗೆ ಸಮಾನ (೩೯–೪೨). ರಾವಣ, ಸರ್ವಲೋಕೇಶ್ವರನೂ ರಾಜಸಿಂಹನೂ ಆದ ಶ್ರೀರಾಮನಿಗೆ ಅಪರಾಧಮಾಡಿದ ಮೇಲೆ, ನೀನು ಬದುಕಿರುವುದು ಅಸಾಧ್ಯ. ದೇವದಾನವಾದಿ ಸಮಸ್ತ ಪ್ರಾಣಿಗಳೂ ತ್ರಿಲೋಕಾಧಿಪತಿಯಾದ ರಾಮನನ್ನು ಯುದ್ಧದಲ್ಲಿ ಎದುರಿಸಲು ಅಸಮರ್ಥರು (೪೩–೪೪). ರಾಮನು ಯಾರನ್ನಾದರೂ ಕೊಲ್ಲಬೇಕೆಂದು ನಿಶ್ಚಯಿಸಿದರೆ, ಅವನನ್ನು ಉಳಿಸಿಕೊಳ್ಳಲು ಅನಾದಿಯೂ ನಾಲ್ಕುಮುಖಗಳನ್ನು ಧರಿಸಿದವನೂ ಆದ ಬ್ರಹ್ಮನಿಗಾಗಲಿ, ತ್ರಿಣೇತ್ರನೂ ತ್ರಿಪುರಧ್ವಂಸಿಯೂ ಆದ ಈಶ್ವರನಿಗಾಗಲಿ, ಮಹತ್ತರವಾದ ಐಶ್ವರ್ಯವನ್ನು ಪಡೆದು ದೇವೇಶ್ವರನೆನಿಸಿದ ಇಂದ್ರನಿಗಾಗಲಿ ಶಕ್ಯವಿಲ್ಲ" ಎಂದು ಹೇಳಿದನು (೪೫). ಹೀಗೆ ಹನುಮಂತನು ಧೀರವಾಣಿಯಿಂದ ಹಿತೋಪದೇಶವನ್ನು ಮಾಡಿದನು. ರಾವಣನು ತನಗೆ ಅಪ್ರಿಯವಾದ ಆ ಮಾತನ್ನು ಕೇಳಿ ಕೋಪದಿಂದ ಕಣ್ಣುಗಳನ್ನು ತಿರುಗಿಸುತ್ತ, ಹನುಮಂತನನ್ನು ವಧಿಸಬೇಕೆಂದು ಆಜ್ಞಾಪಿಸಿದನು (೪೬).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಐವತ್ತೊಂದನೆಯ ಸರ್ಗ

---

## ಸರ್ಗ ೫೨

ದೂತನಾಗಿ ಬಂದ ಹನುಮಂತನನ್ನು ವಧಿಸುವುದು ರಾಜಧರ್ಮಕ್ಕೆ ವಿರುದ್ಧವೆಂದು ವಿಭೀಷಣನು ರಾವಣನಿಗೆ ನೀತಿಯನ್ನು ಬೋಧಿಸುವುದು.

ಮಹಾತ್ಮನಾದ ಹನುಮಂತನು ಹೇಳಿದ ಮಾತನ್ನು ಕೇಳಿ ರಾವಣನು ಕ್ರುದ್ಧನಾಗಿ, ಅವನನ್ನು ಕೊಲ್ಲಬೇಕೆಂದು ರಾಕ್ಷಸರಿಗೆ ಆಜ್ಞೆಮಾಡಿದನು. ದೂತನಾಗಿ ಬಂದಿದ್ದೇನೆಂದು ತಿಳಿಸಿದ ಹನುಮಂತನನ್ನು ಕೊಲ್ಲುವುದು ವಿಭೀಷಣನಿಗೆ ಸಮ್ಮತವಾಗಲಿಲ್ಲ (೧–೨). ಕಾರ್ಯಾಕಾರ್ಯಗಳನ್ನು ಬಲ್ಲ ಆ ವಿಭೀಷಣನು ರಾವಣನಿಗೆ ಕೋಪಬಂದಿದೆಯೆಂದೂ ಆದ್ದರಿಂದ ದೂತವಧೆಗೆ

ಅಪ್ಪಣೆ ಮಾಡಿದ್ದಾನೆಂದೂ ತಿಳಿದು ಮುಂದೇನುಮಾಡಬೇಕೆಂದು ಆಲೋಚಿಸಿದನು. ತಾನೇ ಒಂದು ನಿಶ್ಚಯಕ್ಕೆ ಬಂದು, ಅಣ್ಣನಾದ ರಾವಣನನ್ನು ಕುರಿತು ಗೌರವಪೂರ್ವಕವಾಗಿ ಸಾಂತ್ವವಚನಗಳಿಂದ ಹಿತವಾಕ್ಯಗಳನ್ನು ಹೇಳತೊಡಗಿದನು (೩–೪): "ಮಹಾರಾಜ, ನನ್ನನ್ನು ಕ್ಷಮಿಸಬೇಕು. ಕೋಪಮಾಡಿಕೊಳ್ಳಬಾರದು. ಪ್ರಸನ್ನನಾಗಿ ನನ್ನ ಮಾತನ್ನು ಲಾಲಿಸಬೇಕು. ವಿವೇಕಿಗಳೂ ಸಜ್ಜನರೂ ಆದ ಭೂಪತಿಗಳು ದೂತನಾಗಿ ಬಂದವನನ್ನು ವಧಿಸುವುದಿಲ್ಲ. ಈ ಕಪಿಯನ್ನು ಕೊಲ್ಲಿಸುವುದು ರಾಜಧರ್ಮಕ್ಕೆ ವಿರುದ್ಧವಾದದ್ದು; ಲೋಕನಿಂದಿತ. ನಿನ್ನಂತಹ ವೀರನಿಗೆ ಯೋಗ್ಯವೂ ಅಲ್ಲ (೫–೬). ನೀನು ಧರ್ಮಜ್ಞನೂ ಕೃತಜ್ಞನೂ ರಾಜನೀತಿವಿಶಾರದನೂ ಆಗಿದ್ದೀಯೆ. ಸಮಸ್ತ ಪ್ರಾಣಿವರ್ಗದಲ್ಲಿ ನೀನೇ ವಿವೇಕಿಯೂ ಪರಮಾರ್ಥವನ್ನು ಒಪ್ಪಿದವನೂ ಆಗಿರುವೆ. ನಿನ್ನಂತಹ ವಿದ್ವಾಂಸರೇ ಕೋಪಕ್ಕೆ ವಶರಾಗುವುದಾದರೆ, ಶಾಸ್ತ್ರದಲ್ಲಿ ಪಾಂಡಿತ್ಯವನ್ನು ಗಳಿಸುವುದು ವೃಥಾ ಶ್ರಮವೆಂದು ಹೇಳಬೇಕಾಗುತ್ತದೆ (೭–೮). ಹೇ ರಾಕ್ಷಸೇಶ್ವರ–ಶತ್ರುಸಂಹಾರಕ, ಆದ್ದರಿಂದ ಯುಕ್ತಾಯುಕ್ತಗಳನ್ನು ವಿಚಾರಿಸಿ ಈ ದೂತನಿಗೆ ದಂಡನೆಯನ್ನು ವಿಧಿಸು" ಎಂದನು (೯). ವಿಭೀಷಣನ ನುಡಿಯನ್ನು ಕೇಳಿ ರಾವಣನಿಗೆ ಕೋಪವು ಇಳಿಯಲಿಲ್ಲ. ಅವನು ಕೋಪದಿಂದ "ವಿಭೀಷಣ, ಪಾಪಿಗಳನ್ನು ಕೊಂದರೆ ಪಾಪವಿಲ್ಲ. ಆದ್ದರಿಂದ ಪಾಪಿಯಾದ ಈ ಕಪಿಯನ್ನು ಕೊಲ್ಲಿಸುತ್ತೇನೆ" ಎಂದನು (೧೦–೧೧). ಸಿಟ್ಟಿನಿಂದ ಹೇಳಿದ ಈ ಅಧರ್ಮದ ಮಾತನ್ನು ಕೇಳಿ ಬುದ್ಧಿಶಾಲಿಯಾದ ವಿಭೀಷಣನು "ಲಂಕೇಶ್ವರ, ಪ್ರಸನ್ನನಾಗು. ಧರ್ಮಾರ್ಥಸಹಿತವಾದ ನನ್ನ ಮಾತನ್ನು ಕೇಳು. ದೂತರನ್ನು ಯಾವ ಸಮಯದಲ್ಲಾಗಲಿ ಎಲ್ಲಿಯೂ ಕೊಲ್ಲಬಾರದೆಂದು ಹಿರಿಯರು ಹೇಳುತ್ತಾರೆ (೧೨–೧೩). ಈತನು ಮಹಾಶತ್ರುವೆಂಬುದೇನೋ ನಿಜ. ನಮಗೆ ಅಪರಿಮಿತವಾದ ಕೆಡುಕನ್ನು ಮಾಡಿದ್ದಾನೆ. ಆದರೂ ದೂತರನ್ನು ಕೊಲ್ಲಬಾರದೆಂದು ದೊಡ್ಡವರು ಹೇಳಿದ್ದಾರೆ. ದೂತರನ್ನು ದಂಡಿಸುವುದಕ್ಕೆ ಬೇರೆ ಎಷ್ಟೋ ವಿಧಾನಗಳುಂಟು. ಅವಯವಗಳನ್ನು ಕತ್ತರಿಸಿ ವಿರೂಪಗೊಳಿಸುವುದು, ಚಾಟಿಯಿಂದ ಹೊಡೆಸುವುದು, ತಲೆಯನ್ನು ಬೋಳಿಸುವುದು ಮತ್ತು ಬರೆಹಾಕಿಸುವುದು—ಇವೆಲ್ಲ ದೂತರಿಗೆ ವಿಧಿಸಬಹುದಾದ ಶಿಕ್ಷೆಗಳು. ದೂತರ ವಧೆಮಾಡಿಸುವುದನ್ನು ನಾವು ಕೇಳಿಲ್ಲ (೧೪–೧೫).

ಧರ್ಮಾರ್ಥಗಳಲ್ಲಿ ಪಳಗಿ ಅತ್ಯಂತ ವಿವೇಕಶಾಲಿಯಾದ ನಿನ್ನಂತಹವನು ಹೀಗೆ ಕೋಪಾಧೀನನಾಗಬಹುದೆ? ಧೀರರು ಕೋಪವನ್ನು ತಡೆದುಕೊಳ್ಳಬೇಕು. ಎಲೈ ವೀರನೆ, ಧರ್ಮಶಾಸ್ತ್ರದಲ್ಲಾಗಲಿ ಲೋಕವ್ಯವಹಾರದಲ್ಲಾಗಲಿ ಶಾಸ್ತ್ರಾರ್ಥ ವನ್ನು ನಿರ್ಣಯಿಸುವುದರಲ್ಲಾಗಲಿ ನಿನಗೆ ಸಮಾನರು ಯಾರೂ ಇಲ್ಲ. ಸಮಸ್ತ ದೇವಾಸುರರಲ್ಲಿಯೂ ನೀನು ಶ್ರೇಷ್ಠ (೧೬–೧೭). ಯುದ್ಧದಲ್ಲಿ ದೇವಾಸುರರನ್ನೂ ಮನುಷ್ಯರಾಜರನ್ನೂ ನೀನು ಎಷ್ಟೋ ಸಲ ಜಯಿಸಿದ್ದೀಯೆ. ಅಜೇಯನೂ ವೀರಾಧಿವೀರನೂ ಆದ ನಿನ್ನ ಮನಸ್ಸಿಗೆ ಅಪ್ರಿಯವಾದದ್ದನ್ನು ಕೆಲವು ವೇಳೆ ಮೂಢರು ಮಾಡುತ್ತಾರೆ. ಅವರೆಲ್ಲರನ್ನೂ ನೀನೇ ಹಿಂದೆ ಪ್ರಾಣಸಹಿತ ಉಳಿಸಿದವನು (೧೮–೧೯). ಮತ್ತು ಈ ಕಪಿಯನ್ನು ಕೊಂದರೆ ಪ್ರಯೋಜನವೂ ಇಲ್ಲ. ಇವನನ್ನು ಕಳಿಸಿದ ಶತ್ರುಗಳನ್ನು ದಂಡಿಸು. ಈತನು ಒಳ್ಳೆಯವನಾಗಲಿ ಕೆಟ್ಟವನಾಗಲಿ, ಬೇರೆಯವರ ಮಾತಿನಂತೆ ಇಲ್ಲಿಗೆ ಬಂದು ಹೇಳಿಕಳಿಸಿದ ಮಾತನ್ನು ಹೇಳಿದ್ದಾನೆ. ಈತನು ಸ್ವತಂತ್ರನಲ್ಲ. ಆದ್ದರಿಂದ ಈ ದೂತನನ್ನು ವಧಿಸುವುದು ಸರಿಯಲ್ಲ (೨೦–೨೧). ಅಲ್ಲದೆ ಇವನನ್ನು ಕೊಂದರೆ ಸಮುದ್ರವನ್ನು ದಾಟಿ ಬರಬಲ್ಲ ಇನ್ನೊಬ್ಬ ಆಕಾಶಗಾಮಿಯನ್ನು ನಾನು ಕಾಣೆ.* ಆದ್ದರಿಂದ ಈ ಕಪಿಯನ್ನು ಕೊಲ್ಲಿಸಬೇಡ. (ಇವನನ್ನು ಎತ್ತಿಗಟ್ಟಿರುವ) ಇಂದ್ರಾದಿ ದೇವತೆಗಳನ್ನು ದಂಡಿಸುವ ಯತ್ನಮಾಡು (೨೨–೨೩). ಈ ಕಪಿಯು ಹತನಾದರೆ ಉದ್ಧತರಾದ ರಾಮಲಕ್ಷ್ಮಣರನ್ನು ಇಲ್ಲಿಗೆ ಯಾರು ಕರೆದುಕೊಂಡು ಬರುತ್ತಾರೆ? ಯುದ್ಧಪ್ರಿಯನಾದ ನಿನಗೆ ಯುದ್ಧಕ್ಕೆ ಅವಕಾಶವೇ ದೊರೆಯುವುದಿಲ್ಲ. ಅಜೇಯನಾದ ನೀನು ರಾಕ್ಷಸರ ಮನಸ್ಸಿಗೆ ಉಲ್ಲಾಸವನ್ನುಂಟುಮಾಡುತ್ತಿದ್ದೀಯೆ. ಉತ್ಸಾಹ ಪರಾಕ್ರಮಗಳಿಂದ ಉಬ್ಬುತ್ತಿರುವ ರಾಕ್ಷಸರಿಗೆ ಯುದ್ಧಮಾಡುವ ಸದವಕಾಶವನ್ನು ತಪ್ಪಿಸುವುದು ಸರಿಯಲ್ಲ (೨೪–೨೫). ನಿನ್ನ ವಶದಲ್ಲಿ ಹಿತಕಾರಿಗಳೂ ಶೂರರೂ ಉತ್ತಮ ವಂಶದಲ್ಲಿ ಜನಿಸಿದವರೂ ಧೀರರೂ ಆದ ಕೋಟಿಗಟ್ಟಲೆ ಯೋಧರಿದ್ದಾರೆ. ಅವರಲ್ಲಿ ಕೆಲವು ಯೋಧರು ನಿನ್ನ ಆಜ್ಞೆಯನ್ನು ಪಡೆದು ಹೋಗಿ ಮೂಢರಾದ ರಾಮಲಕ್ಷ್ಮಣರನ್ನು ನಿಗ್ರಹಿಸಲಿ. ನಿನ್ನ ಪ್ರಭಾವವೆಷ್ಟೆಂಬುದನ್ನು ತೋರಿಸಿ ಬರಲಿ" ಎಂದು

* ಆಗ ರಾಮಸುಗ್ರೀವಾದಿ ಶತ್ರುಗಳು ಲಂಕೆಗೆ ಬರುವುದಿಲ್ಲವಾದ್ದರಿಂದ ಅವರನ್ನು ದಂಡಿಸುವುದಕ್ಕೆ ಅವಕಾಶ ಇಲ್ಲದೆ ಹೋಗುತ್ತದೆ ಎಂದು ತಾತ್ಪರ್ಯ.

ಹೇಳಿದನು (೩೬–೨೭). ಆಗ ರಾಕ್ಷಸೇಶ್ವರನಾದ ರಾವಣನು ತನ್ನ ತಮ್ಮನಾದ ವಿಭೀಷಣನು ಮನಸ್ಸಿಗೆ ನಾಟುವಂತೆ ಹೇಳಿದ ಮಾತನ್ನು ಪರ್ಯಾಲೋಚಿಸಿ, ಕೊನೆಗೆ ಅವನ ಮಾತನ್ನೇ ಅಂಗೀಕರಿಸಿದರು (೨೮). ಅವನು ವಿಭೀಷಣನ ಹೇಳಿಕೆಯನ್ನು ಗೌರವಿಸಿ ತನ್ನ ಕೋಪವನ್ನು ಒತ್ತಿ ಹಿಡಿದು, ತಿರುಗಿ ವಿಭೀಷಣ ನೊಡನೆ ಮಾತನಾಡಿದನು (೨೯).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಐವತ್ತೆರಡನೆಯ ಸರ್ಗ

---

## ಸರ್ಗ ೫೩

ರಾವಣನ ಆಜ್ಞೆಯಿಂದ ರಾಕ್ಷಸರು ಹನುಮಂತನ ಬಾಲಕ್ಕೆ ಬೆಂಕಿಯನ್ನು ಹತ್ತಿಸುವುದು. ಇದನ್ನು ತಿಳಿದು ಸೀತೆಯು ಅಗ್ನಿದೇವನನ್ನು ಪ್ರಾರ್ಥಿಸಲು, ಅಗ್ನಿಯು ಹನುಮಂತನ ಬಾಲವನ್ನು ಸುಡದೆ ಶೀತಲನಾಗಿರುವುದು.

ರಾವಣನು ತಮ್ಮನಾಡಿದ್ದ ದೇಶಕಾಲೋಚಿತವಾದ ಮಾತನ್ನು ಕೇಳಿ "ವಿಭೀಷಣ, ದೂತವಧೆಯು ನಿಂದ್ಯವಾದದ್ದೆಂದು ನೀನು ಹೇಳಿದ್ದು ಯುಕ್ತವೇ ಸರಿ. ಈತನಿಗೆ ವಧೆಯನ್ನು ಬಿಟ್ಟು ಬೇರೆಯ ಶಿಕ್ಷೆಯನ್ನು ವಿಧಿಸಬೇಕು (೧–೨). ಕಪಿಗಳು ತಮ್ಮ ಬಾಲವನ್ನೇ ಭೂಷಣವೆಂದು ತಿಳಿದು ಬಹಳ ಪ್ರೀತಿಸುತ್ತವೆ. ಆದ್ದರಿಂದ ಇವನ ಬಾಲಕ್ಕೆ ಬೆಂಕಿಯನ್ನು ಹತ್ತಿಸಿ ಸುಟ್ಟುಬಿಡೋಣ. ಬಾಲ ವನ್ನು ಸುಡಿಸಿಕೊಂಡು ಹೋಗಲಿ. ಅಂಗಹೀನನಾಗಿ ದೈನ್ಯದಿಂದ ಹೋಗಿ ನಿಂತ ಈ ಕಪಿಯನ್ನು ಬಂಧುಮಿತ್ರರೆಲ್ಲರೂ ನೋಡಲಿ!" ಎಂದನು (೩–೪). ಅನಂತರ ರಾಕ್ಷಸರನ್ನು ಕುರಿತು "ಎಲೈ ಸೇವಕರೆ, ಈತನ ಬಾಲಕ್ಕೆ ಬೆಂಕಿಯನ್ನು ಹತ್ತಿಸಿ ಬೀದಿ ಬೀದಿಗಳಲ್ಲಿಯೂ ಚೌಕಗಳಲ್ಲಿಯೂ ಮೆರವಣಿಗೆ ಮಾಡಿಸಿರಿ" ಎಂದು ಆಜ್ಞಾಪಿಸಿದನು. ಆಗ ರಾಕ್ಷಸರು ಹನುಮಂತನ ಬಾಲಕ್ಕೆ ಹತ್ತಿಯ ಹರಕುಬಟ್ಟೆಗಳನ್ನು ತಂದು ಸುತ್ತಲಾರಂಭಿಸಿದರು (೫–೬). ಕಾಡಿನಲ್ಲಿ ಒಣ ಸೌದೆಗಳಿಗೆ ತಗುಲಿದ ಬೆಂಕಿಯಂತೆ ಹನುಮಂತನು ಕ್ಷಣಮಾತ್ರದಲ್ಲಿ ಉಬ್ಬಿ ಬೆಳೆಯುತ್ತಿದ್ದನು. ಬಟ್ಟೆಯನ್ನು ಸುತ್ತಿದ್ದ ಹನುಮಂತನ ಬಾಲಕ್ಕೆ ರಾಕ್ಷಸರು ಎಣ್ಣೆಯನ್ನು ಸುರಿದು ಬೆಂಕಿಯನ್ನು ಹತ್ತಿಸಿದರು. ಆಗ ಹನುಮಂತನು ರೋಷ

ದಿಂದ ಬಾಲಸೂರ್ಯನಂತೆ ಮುಖವನ್ನು ಕೆಂಪಗೆ ಮಾಡಿಕೊಂಡು ಬಾಲವನ್ನು ಗಿರ್ರನೆ ತಿರುಗಿಸಿ ಸುತ್ತಲೂ ಇದ್ದ ರಾಕ್ಷಸರನ್ನು ಉರುಳಿಸಿದನು (೭–೮). ಹನುಮಂತನ ಮೆರವಣಿಗೆಯ ಸುದ್ದಿಯನ್ನು ಕೇಳಿ ಹೆಂಗಸರು, ಮಕ್ಕಳು, ಮುದುಕರು ಮೊದಲಾಗಿ ಲಂಕಾನಿವಾಸಿಗಳು ಸಂತೋಷದಿಂದ ಬಂದು ಸೇರಿದರು. ಆ ಕ್ರೂರ ರಾಕ್ಷಸರು ಮತ್ತೆ ಹನುಮಂತನನ್ನು ಬಲವಾಗಿ ಕಟ್ಟಿ ಬಿಗಿದರು. ಆಗ ಕಪಿವೀರನು ತನ್ನ ಮನಸ್ಸಿನಲ್ಲಿ "ನನ್ನನ್ನು ಕಟ್ಟಿಹಾಕಿದ್ದರೂ ಈ ರಾಕ್ಷಸರು ನನಗೆ ಎಣೆಯಲ್ಲ (೯–೧೧). ಹಗ್ಗಗಳನ್ನು ಹರಿದುಹಾಕಿ ಮೇಲೆ ನೆಗೆದು ಇವರನ್ನೆಲ್ಲಾ ಕೊಂದುಹಾಕಬಲ್ಲೆನು ಸ್ವಾಮಿಕಾರ್ಯಕ್ಕಾಗಿ ಬಂದಿರುವ ನನ್ನನ್ನು ಈ ದುರಾತ್ಮರು ತಮ್ಮ ಒಡೆಯನ ಅಪ್ಪಣೆಯಂತೆ ಕಟ್ಟಿದರೆ ಕಟ್ಟಲಿ. ಇಷ್ಟರಿಂದ ನನಗೆ ತಕ್ಕ ಪ್ರತೀಕಾರವನ್ನು ಮಾಡಿದಂತಾಗಲಿಲ್ಲ. ಇದರಿಂದ ಏನಾದೀತು? ಈ ಸಮಸ್ತ ರಾಕ್ಷಸರನ್ನೂ ಎದುರಿಸಿ ಯುದ್ಧಮಾಡುವುದಕ್ಕೆ ನಾನೊಬ್ಬನೇ ಸಾಕು (೧೨–೧೩). ಆದರೆ ರಾಮನೇ (ರಾಕ್ಷಸರನ್ನು ಸಂಹರಿಸಿ) ತೃಪ್ತಿಪಡಲೆಂದು ಈ ಅವಮಾನವನ್ನು ಸಹಿಸಿಕೊಳ್ಳುತ್ತೇನೆ. ಅಲ್ಲದೆ ನಾನು ಲಂಕೆಯನ್ನೂ ಸುತ್ತಿದಂತಾಗುತ್ತದೆ. ನಿನ್ನೆ ರಾತ್ರಿಯಾದ್ದರಿಂದ ದುರ್ಗದ ರಕ್ಷಣಾ ವ್ಯವಸ್ಥೆಯನ್ನು ಸರಿಯಾಗಿ ನೋಡುವುದಕ್ಕಾಗಲಿಲ್ಲ. ಹಗಲುಹೊತ್ತಿನಲ್ಲಿ ಲಂಕೆಯನ್ನು ಚೆನ್ನಾಗಿ ನೋಡಲೇಬೇಕು (೧೪–೧೫). ಇವರು ಹಗ್ಗಗಳಿಂದ ಬಿಗಿದು ಕಟ್ಟಿಯಾದರೂ ಬಾಲಕ್ಕೆ ಬೆಂಕಿಯನ್ನು ಇಟ್ಟಾದರೂ ನನ್ನನ್ನು ಪೀಡಿಸಲಿ. ಅದರಿಂದ ನನ್ನ ಮನಸ್ಸಿಗೆ ಆಯಾಸವೇನೂ ಇಲ್ಲ" ಎಂದು ನಿಶ್ಚಯಿಸಿ ಸುಮ್ಮನಿದ್ದನು (೧೬). ಅನಂತರ ರಾಕ್ಷಸರು ಇಂಗಿತವನ್ನು ಮರೆಮಾಚಿಕೊಂಡಿದ್ದ ಆ ಮಹಾಕಪಿಯನ್ನು ಹಿಡಿದುಕೊಂಡು ಆನಂದದಿಂದ ಶಂಖಗಳನ್ನು ಊದುತ್ತ, ಭೇರಿಗಳನ್ನು ಬಾರಿಸುತ್ತ, ತಮ್ಮ ಪರಾಕ್ರಮವನ್ನು ಹೊಗಳಿಕೊಳ್ಳುತ್ತ ಪಟ್ಟಣದಲ್ಲಿ ಎಳೆದುಕೊಂಡುಹೋದರು (೧೭–೧೮). ರಾಕ್ಷಸರು ಹೀಗೆ ಹಿಂಬಾಲಿಸಿ ಬರುತ್ತಿರಲು ಹನುಮಂತನು ಅನಾಯಾಸವಾಗಿ ಪಟ್ಟಣದಲ್ಲಿ ಸುತ್ತಾಡಿದನು. ಅವನು ಲಂಕೆಯಲ್ಲಿದ್ದ ವಿಚಿತ್ರ ವಿಮಾನಗಳು, ರಹಸ್ಯಪ್ರದೇಶಗಳು, ಅಂಗಳಗಳು, ರಾಜಬೀದಿಗಳು, ಮನೆಗಳ ಸಾಲುಗಳು, ಚೌಕಗಳು, ಗಲ್ಲಿಗಳು, ಎರಡು ಮನೆಗಳಿಗೂ ಮಧ್ಯದಲ್ಲಿರುವ ನಿವೇಶನಗಳು, ಉನ್ನತವಾದ ಸೌಧಗಳು—ಮೊದಲಾದವುಗಳನ್ನು ಗಮನಿಸಿ ನೋಡುತ್ತ ಬಂದನು (೧೯–೨೨). ರಾಕ್ಷಸರು ಅಂಗಳ,

ಚೌಕಗಳಲ್ಲಿ ಹನುಮಂತನನ್ನು ತೋರಿಸುತ್ತ 'ಇಗೋ! ಇವನೇ ಗೂಢಚಾರ!' ಎಂದು ಸಾರುತ್ತಿದ್ದರು. ಬೆಂಕಿಹತ್ತಿದ ಬಾಲದೊಡನೆ ಮೆರವಣಿಗೆಯಲ್ಲಿ ಬರುತ್ತಿದ್ದ ಹನುಮಂತನನ್ನು ನೋಡುವ ಕುತೂಹಲದಿಂದ ಹೆಂಗಸರು, ಮಕ್ಕಳು, ಮುದುಕರು ಬಂದು ನೆರೆಯುತ್ತಿದ್ದರು (೨೩–೨೪). ಹೀಗೆ ಹನುಮಂತನ ಬಾಲವು ಉರಿಯುತ್ತಿರಲಾಗಿ ವಿಕಾರವಾದ ಕಣ್ಣಿನ ಕೆಲವು ರಾಕ್ಷಸಿಯರು ಸೀತೆಯ ಬಳಿಗೆ ಬಂದು "ಎಲೆ ಸೀತೆ! ಒಂದು ಕೆಂಪು ಮೂತಿಯ ಕೋತಿಯು ಬಂದು ನಿನ್ನ ಹತ್ತಿರ ಮಾತನಾಡಿತಲ್ಲ, ಅದರ ಬಾಲಕ್ಕೆ ಬೆಂಕಿಯನ್ನು ಹತ್ತಿಸಿ ಮೆರವಣಿಗೆ ಮಾಡುತ್ತಿದ್ದಾರೆ!" ಎಂದು ಹೇಳಿದರು (೨೫–೨೬). ಕರ್ಣಕಠೋರವಾದ ಆ ಮಾತನ್ನು ಕೇಳಿ ಸೀತಾದೇವಿಗೆ ತನ್ನನ್ನು ರಾವಣನು ಅಪಹರಿಸಿದಾಗ ಆದಷ್ಟು ದುಃಖವಾಯಿತು. ಅವಳು ಹನುಮಂತನಿಗೆ ಮಂಗಳವಾಗಲೆಂದು ಪರಿಶುದ್ಧಮನಸ್ಸಿನಿಂದ ಯಜ್ಞಪುರುಷನನ್ನು ಕುರಿತು "ಹೇ ಅಗ್ನಿದೇವ, ನಾನು ಪತಿಸೇವೆಯನ್ನು ಮಾಡಿದವಳಾಗಿದ್ದರೆ, ತಪಸ್ಸನ್ನು ಆಚರಿಸಿದ್ದರೆ, ನನ್ನಲ್ಲಿ ಪಾತಿವ್ರತ್ಯವಿರುವುದಾದರೆ—ನೀನು ಹನುಮಂತನ ವಿಷಯದಲ್ಲಿ ಶೀತಲನಾಗು (೨೭–೨೮). ಶ್ರೀರಾಮನಿಗೆ ನನ್ನಲ್ಲಿ ಕರುಣೆ ಇದ್ದರೆ, ನನ್ನ ಭಾಗ್ಯವು ಇನ್ನೂ ಸ್ವಲ್ಪ ಉಳಿದಿದ್ದರೆ ಹನುಮಂತನ ವಿಷಯದಲ್ಲಿ ಶೀತಲನಾಗಬೇಕು. ನನ್ನ ನಡತೆಯು ಪರಿಶುದ್ಧವಾಗಿದೆಯೆಂದೂ ನಾನು ಶ್ರೀರಾಮನ ದರ್ಶನಕ್ಕಾಗಿ ಹಾತೊರೆಯುತ್ತಿರುವೆನೆಂದೂ ಧರ್ಮಾತ್ಮನಾದ ರಾಮನು ತಿಳಿದುಕೊಂಡಿರುವುದೇ ಆದರೆ, ಹನುಮಂತನ ವಿಷಯದಲ್ಲಿ ಶೀತಲನಾಗು (೨೯–೩೦). ಸತ್ಯಸಂಧನಾದ ಸುಗ್ರೀವನು ಈ ದುಃಖಸಮುದ್ರದಿಂದ ನನ್ನನ್ನು ದಾಟಿಸುವುದು ಸತ್ಯವಾಗಿದ್ದರೆ, ನೀನು ಹನುಮಂತನ ವಿಷಯದಲ್ಲಿ ಶೀತಲನಾಗು" ಎಂದು ಪ್ರಾರ್ಥಿಸಿದಳು (೩೧). ಅಷ್ಟರಲ್ಲಿ (ಆಂಜನೇಯನ ಬಾಲಕ್ಕೆ ಹಚ್ಚಿಸಿದ) ಅಗ್ನಿಯು ದೇವಿಗೆ ಶುಭವನ್ನು ಸೂಚಿಸುವಂತೆ ಪ್ರದಕ್ಷಿಣಾಕಾರವಾಗಿ ಜ್ವಲಿಸುತ್ತಿರಲು, ಆಂಜನೇಯನ ಜನಕನಾದ ವಾಯುದೇವನು ಹಿಮಮಾರುತದಷ್ಟು ಶೀತಲವಾಗಿ ಬೀಸಲಾರಂಭಿಸಿದನು (೩೨–೩೩). ಆಗ ಹನುಮಂತನು "ಅಗ್ನಿಯು ಇಷ್ಟು ಜ್ವಲಿಸುತ್ತಿದ್ದರೂ ನನ್ನನ್ನು ಸುಡುವುದೇ ಇಲ್ಲವೇಕೆ? ಮಹಾಜ್ವಾಲೆ ಕಾಣಿಸುತ್ತಿದ್ದರೂ ನನಗೆ ಯಾತನೆಯೇ ಆಗುವುದಿಲ್ಲ! (೩೪–೩೫). ಬಾಲದಮೇಲೆ ಮಂಜುಗಡ್ಡೆಯನ್ನಿಟ್ಟಂತೆ ಆಗಿದೆ! ಸಮುದ್ರವನ್ನು ದಾಟಿ

ಬರುವಾಗ ಪರ್ವತವೇ ಸಮುದ್ರದಿಂದ ಮೇಲಕ್ಕೆ ಬಂದ ಆಶ್ಚರ್ಯವನ್ನು ನೋಡಿದೆನು. ಅದು ಶ್ರೀರಾಮನ ಪ್ರಭಾವವೇ ಸರಿ. ಶ್ರೀರಾಮನ ಕಾರ್ಯಕ್ಕಾಗಿ ಸಮುದ್ರಮೈನಾಕಗಳೇ ಅಷ್ಟು ಸಂಭ್ರಮವನ್ನು ತೋರುತ್ತಿರುವಾಗ ಅಗ್ನಿಯೂ ಏಕೆ ತಣ್ಣಗಾಗಬಾರದು! ಹೌದು, ಸೀತಾದೇವಿಗೆ ನನ್ನ ಮೇಲಿರುವ ವಾತ್ಸಲ್ಯ, ಶ್ರೀರಾಮನ ಮಹಿಮೆ, ನನ್ನ ತಂದೆಯಲ್ಲಿ ಅಗ್ನಿಗೆ ಇರುವ ಸ್ನೇಹ– ಈ ಮೂರು ಕಾರಣಗಳಿಂದ ಅಗ್ನಿಯು ನನ್ನನ್ನು ಸುಡುತ್ತಿಲ್ಲ" ಎಂದು ಆಲೋಚಿಸಿ ಮುಂದೆ ಏನು ಮಾಡಬೇಕೆಂದು ನಿರ್ಧರಿಸಿಕೊಂಡನು (೩೬–೩೯). ಕೂಡಲೇ ಆ ವಾನರಶ್ರೇಷ್ಠನು ಮೇಲಕ್ಕೆ ಹಾರಿ ಸಿಂಹನಾದಮಾಡಿದನು. ಅಲ್ಲಿಂದ ರಾಕ್ಷಸರ ಸಂಚಾರವಿಲ್ಲದ ನಗರದ್ವಾರದ ಮೇಲೆ ಬಂದಿಳಿದನು. ಪರ್ವತಾಕಾರವಾಗಿದ್ದ ತನ್ನ ದೇಹವನ್ನು ಬಹಳ ಸಣ್ಣದಾಗಿ ಮಾಡಿಕೊಳ್ಳಲು, ಅವನನ್ನು ಕಟ್ಟಿದ್ದ ಹಗ್ಗದ ಕಟ್ಟುಗಳೆಲ್ಲವೂ ನಡಿಲಿಬಿದ್ದವು (೪೦–೪೧). ಅನಂತರ ತನ್ನ ದೇಹವನ್ನು ಪುನಃ ಪರ್ವತಾಕಾರವಾಗಿ ಬೆಳೆಯಿಸಿಕೊಂಡು ಸುತ್ತಲೂ ದೃಷ್ಟಿಸಿ ನೋಡುತ್ತಿರುವಾಗ, ಮಹಾದ್ವಾರಕ್ಕೆ ಹಾಕಿದ್ದ ಕಬ್ಬಿಣದ ದೊಡ್ಡ ಅಗುಳಿಯು ಕಾಣಿಸಿತು. ಮಾರುತಿಯು ಅದನ್ನು ಕೈಗೆತ್ತಿಕೊಂಡು ಕಾವಲಿದ್ದ ಸಮಸ್ತರಾಕ್ಷಸರನ್ನೂ ಬಡಿದು ಕೊಂದನು (೪೨–೪೩). ಯುದ್ಧದಲ್ಲಿ ಮಹಾಪ್ರಚಂಡನಾದ ಮಾರುತಾತ್ಮಜನು ಮತ್ತೆ ಲಂಕಾನಗರದ ಕಡೆಗೆ ನೋಡುತ್ತ, ಬಾಲದಲ್ಲಿ ಅಗ್ನಿಯು ಧಗಧಗನೆ ಪ್ರಜ್ವಲಿಸುತ್ತಿರಲು, ಸಹಸ್ರಕಿರಣಗಳಿಂದ ಪರಿವೃತನಾದ ಸೂರ್ಯನಂತೆ ಒಪ್ಪುತ್ತಿದ್ದನು (೪೪).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಐವತ್ತುಮೂರನೆಯ ಸರ್ಗ

# ಸರ್ಗ ೫೪

ಹನುಮಂತನು ಲಂಕೆಯಲ್ಲಿ ವಿಭೀಷಣನ ಮನೆಯೊಂದನ್ನು ಬಿಟ್ಟು ಉಳಿದ ರಾಕ್ಷಸರ ಮನೆಗಳನ್ನು ಸುಡುವುದು.

ಹೀಗೆ ಹನುಮಂತನು ತನ್ನ ಇಷ್ಟಾರ್ಥವನ್ನು ನೆರವೇರಿಸಿಕೊಂಡು ಉತ್ಸಾಹದಿಂದ ಉಬ್ಬಿ ಲಂಕೆಯನ್ನು ನೋಡುತ್ತ, ಮುಂದೆ ನಡೆಸಬೇಕಾದ ಕಾರ್ಯವೇನೆಂದು ಆಲೋಚಿಸಿದನು: "ಈಗ ನಾನು ಇಲ್ಲಿ ಮಾಡಬೇಕಾಗಿರುವ ಕಾರ್ಯವೇನು? ಈ ರಾಕ್ಷಸರನ್ನು ಇನ್ನೂ ಗೋಳಾಡಿಸುವುದು ಹೇಗೆ? (೧–೨). ಅಶೋಕವನವನ್ನು ಧ್ವಂಸಮಾಡಿದ್ದಾಯಿತು ಪ್ರಬಲರಾದ ರಾಕ್ಷಸರನ್ನು ಸಂಹರಿಸಿದ್ದಾಯಿತು. ಸೇನೆಯ ಒಂದು ಭಾಗ ನಾಶವಾಯಿತು. ಈ ದುರ್ಗವನ್ನು ನಾಶಮಾಡಬೇಕಾದದ್ದು ಉಳಿದಿದೆ. ಇದನ್ನು ನಾಶಮಾಡಿಬಿಟ್ಟರೆ ನನ್ನ ಪರಿಶ್ರಮವು ಸಫಲವಾಗುವುದು. ಅದಕ್ಕಾಗಿ ನಾನು ಮಾಡಬೇಕಾದ ಪ್ರಯತ್ನವೂ ಸ್ವಲ್ಪವೇ (೩–೪). ನನ್ನ ಬಾಲದಲ್ಲಿ ಉರಿಯುತ್ತಿರುವ ಯಜ್ಞಪುರುಷನಿಗೆ ಈ ಮಹಾಭವನಗಳನ್ನು ಆಹುತಿಯಾಗಿ ಅರ್ಪಿಸಿ ಸಂತರ್ಪಣೆ ಮಾಡಿಸುವುದೇ ಯುಕ್ತ!" ಹೀಗೆ ಆಲೋಚಿಸಿ ಆ ಮಹಾಕಪಿಯು ಉರಿಯುತ್ತಿರುವ ಬಾಲದೊಂದಿಗೆ, ಮಿಂಚಿನಿಂದ ಕೂಡಿದ ಮೇಘದಂತೆ ಲಂಕಾನಗರದ ಭವನಗಳಮೇಲೆ ಹಾರಿಬಿಟ್ಟನು (೫–೬). ಅವನು ಸ್ವಲ್ಪವೂ ಭಯವಿಲ್ಲದೆ ಮನೆಯಿಂದ ಮನೆಗೆ ನೆಗೆಯುತ್ತ ಹೂದೋಟಗಳನ್ನೂ ಸೌಧಗಳನ್ನೂ ನೋಡುತ್ತ ಸಂಚರಿಸತೊಡಗಿದನು. ಆ ಬಲಾಢ್ಯನು ವಾಯುವೇಗದಿಂದ ಪ್ರಹಸ್ತನ ಮನೆಗೆ ಹಾರಿ ಅದಕ್ಕೆ ಬೆಂಕಿ ಹತ್ತಿಸಿದನು (೭–೮). ಆಮೇಲೆ ಮಹಾಪಾರ್ಶ್ವನ ಭವನಕ್ಕೆ ಕಾಲಾಗ್ನಿಜ್ವಾಲೆಯಿಂತಿದ್ದ ಬೆಂಕಿಯನ್ನು ತೋರಿಸಿದನು. ಆ ಮಹಾಕಪಿಯು ಅಲ್ಲಿಂದ ವಜ್ರದಂಷ್ಟ್ರ, ಶುಕ, ನಾರಣ, ಇಂದ್ರಜಿತ್ತು, ಜಂಬುಮಾಲಿ, ಸುಮಾಲಿ, ರಶ್ಮಿಕೇತು, ಸೂರ್ಯಶತ್ರು, ಹ್ರಸ್ವಕರ್ಣ, ದಂಷ್ಟ್ರ, ರೋಮಶರೆಂಬ ರಾಕ್ಷಸರ ಗೃಹಗಳನ್ನು ಸುಡುತ್ತಬಂದನು (೯–೧೨). ಅಲ್ಲಿಂದ ಯುದ್ಧೋನ್ಮತ್ತ, ಮತ್ತ, ಧ್ವಜಗ್ರೀವ, ವಿದ್ಯುಜ್ಜಿಹ್ವ, ಘೋರ, ಹಸ್ತಿಮುಖ, ಕರಾಲ, ವಿಶಾಲ, ಶೋಣಿತಾಕ್ಷ, ಕುಂಭಕರ್ಣ, ಮಕರಾಕ್ಷರೆಂಬ ರಾಕ್ಷಸರ ಭವನಗಳಿಗೆ ಬೆಂಕಿಯಿಟ್ಟನು(೧೩–೧೪). ಅನಂತರ ಯಜ್ಞಶತ್ರು, ಬ್ರಹ್ಮಶತ್ರು,

ನರಾಂತಕ, ಕುಂಭರ ಗೃಹಗಳಿಗೆ ಬೆಂಕಿಯನ್ನು ಹತ್ತಿಸಿ ದುರಾತ್ಮನಾದ ನಿಕುಂಭನ ಗೃಹವನ್ನು ಸುಟ್ಟನು. ಹೀಗೆ ಹನುಮಂತನು ಲಂಕೆಯಲ್ಲಿ ವಿಭೀಷಣನ ಮನೆಯೊಂದನ್ನು ಬಿಟ್ಟು ಉಳಿದವರ ಮನೆಗಳನ್ನೆಲ್ಲಾ ಕ್ರಮವಾಗಿ ಸುಡುತ್ತ ಬಂದನು (೧೫–೧೬). ಆ ಮಹಾಕಪಿಯು ಧನಿಕರ ಮಹಾಭವನಗಳಿಗೆ ಬೆಂಕಿಯಿಟ್ಟು ಮನೆಗಳಲ್ಲಿದ್ದ ವೈಭವದ ಸಾಮಗ್ರಿಗಳನ್ನೆಲ್ಲಾ ಸುಟ್ಟು ಬೂದಿಮಾಡಿದನು. ಅನಂತರ ರಾವಣನ ಅರಮನೆಯ ಕಡೆಗೆ ತೆರಳಿದನು (೧೭–೧೮). ಅಲ್ಲಿ ನಾನಾ ರತ್ನಗಳಿಂದ ಭೂಷಿತವಾಗಿಯೂ ಮೇರುಮಂದರ ಪರ್ವತಗಳಂತೆ ಉನ್ನತವಾಗಿಯೂ ಸಮಸ್ತ ಮಂಗಳದ್ರವ್ಯಗಳಿಂದ ಒಪ್ಪುತ್ತಲೂ ಇದ್ದ ಅರಮನೆಗೆ ಬಾಲದಲ್ಲಿ ಉರಿಯುತ್ತಿದ್ದ ಅಗ್ನಿಯನ್ನು ಹತ್ತಿಸಿ, ಪ್ರಳಯಕಾಲದ ಮೇಘದಂತೆ ಗರ್ಜಿಸಿದನು (೧೯–೨೦). ಗಾಳಿಯು ಚೆನ್ನಾಗಿ ಬೀಸತೊಡಗಿದ್ದರಿಂದ ಬೆಂಕಿಯು ಬಹುಬೇಗನೆ ಕಾಲಾಗ್ನಿಯಂತೆ ಉರಿಯುಲಾರಂಭಿಸಿತು. ಗಾಳಿಯು ಅರಮನೆಯ ನಾನಾ ಭಾಗಗಳಿಗೆ ಬೆಂಕಿಯನ್ನು ಹಬ್ಬಿಸಿತು. ಗಾಳಿಯಿಂದ ಬೆಂಕಿಯ ವೇಗ ಹೆಚ್ಚಿತು (೨೧–೨೨). ಚಿನ್ನ, ಮುತ್ತು, ರತ್ನಗಳಿಂದ ಶೋಭಿಸುತ್ತಿದ್ದ ಮಹಾಭವನಗಳು ಗೋಪುರಸಹಿತವಾಗಿ ಸುಟ್ಟು ನೆಲದಮೇಲೆ ಉರುಳುತ್ತಿರಲು, ಪುಣ್ಯವು ತೀರಿದಮೇಲೆ ಆಕಾಶದಿಂದ ಸಿದ್ಧಪುರುಷರ ಭವನಗಳು ಬೀಳುತ್ತಿವೆಯೋ ಎಂಬಂತೆ ಕಾಣಿಸುತ್ತಿತ್ತು (೨೩–೨೪). ತಮ್ಮ ಮನೆಗಳನ್ನು ಉಳಿಸಿಕೊಳ್ಳಲಾರದೆ ನಿರಾಶೆಯಿಂದ ರಾಕ್ಷಸರು ಇಲ್ಲಿಂದಲ್ಲಿಗೆ ಓಡುತ್ತಾ ಕಿರಿಚಿಕೊಳ್ಳುತ್ತಿದ್ದರು. ಕೆಲವು ರಾಕ್ಷಸಸ್ತ್ರೀಯರು ತಮ್ಮ ಮಕ್ಕಳನ್ನೆತ್ತಿಕೊಂಡು "ಅಯ್ಯೋ! ಅಗ್ನಿಯೇ ಕಪಿಯ ವೇಷದಿಂದ ಬಂದುಬಿಟ್ಟಿದೆ!" ಎಂದು ಕೂಗಿಕೊಳ್ಳುತ್ತಿರುವಾಗಲೇ ಬೆಂಕಿಯಲ್ಲಿ ಬಿದ್ದುಹೋದರು (೨೫–೨೬). ಮೈಗೆಲ್ಲಾ ಬೆಂಕಿಹತ್ತಿ ತಲೆಗೂದಲು ಕೆದರಿಹೋಗಿದ್ದ ಕೆಲವು ರಾಕ್ಷಸಿಯರು, ಮೇಘಮಂಡಲದಿಂದ ಸಿಡಿಯುವ ಮಿಂಚುಗಳಂತೆ ಉಪ್ಪರಿಗೆಗಳಿಂದ ಉರುಳಿಬೀಳುತ್ತಿದ್ದರು. ವಜ್ರ, ಹವಳ, ವೈಡೂರ್ಯ, ಮುತ್ತು, ಬೆಳ್ಳಿ ಮುಂತಾದುವುಗಳು ನಾನಾ ಲೋಹಗಳೊಂದಿಗೆ ಕರಗಿ ನೀರಾಗಿ ಮನೆಗಳಿಂದ ಹರಿದುಹೋಗುತ್ತಿರುವುದು ಹನುಮಂತನಿಗೆ ಕಾಣಿಸಿತು (೨೭–೨೮). ಕಟ್ಟಿಗೆ ಮತ್ತು ಹುಲ್ಲುಗಳನ್ನು ಎಷ್ಟು ಸುಟ್ಟರೂ ಅಗ್ನಿಗೆ ತೃಪ್ತಿ ಇಲ್ಲ. ಹಾಗೆ ರಾಕ್ಷಸರನ್ನು ಎಷ್ಟು ಕೊಂದರೂ ಹನುಮಂತನಿಗೆ ತೃಪ್ತಿ ಇಲ್ಲ! ಎಷ್ಟು ಬೆಂಕಿ

ಹೆಚ್ಚಿದರೂ ತೃಪ್ತಿ ಇಲ್ಲ! ಹಾಗೆಯೇ ಅಗ್ನಿಯಾಗಲಿ ಹನುಮಂತನಾಗಲಿ ಎಷ್ಟು ಮಂದಿ ರಾಕ್ಷಸರನ್ನು ಕೊಂದರೂ ಭೂದೇವಿಗೆ ತೃಪ್ತಿ ಇಲ್ಲ! * (೨೯–೩೦). ಅಗ್ನಿಜ್ವಾಲೆಗಳು ಕೆಲವು ಕಡೆ ಅರಳಿದ ಮುತ್ತುಗದ ಮರಗಳಂತೆಯೂ, ಕೆಲವು ಕಡೆ ಅರಳಿದ ಬೂರುಗದ ಮರಗಳಂತೆಯೂ, ಕೆಲವು ಕಡೆ ಕುಂಕುಮದ ರಾಶಿಯಂತೆಯೂ ತೋರುತ್ತಿದ್ದವು. ಹೀಗೆ, ಪರಮೇಶ್ವರನು ತ್ರಿಪುರವನ್ನು ದಹಿಸಿದಂತೆ, ಮಹಾತ್ಮನಾದ ಹನುಮಂತನು ಲಂಕಾಪುರವನ್ನು ಸುಟ್ಟುಹಾಕಿದನು (೩೧–೩೨). ಹನುಮಂತನು ಮಹಾವೇಗದಿಂದ ಹತ್ತಿಸಿದ ಅಗ್ನಿಯು ಜ್ವಾಲೆಗಳನ್ನು ಹರಡುತ್ತ ಲಂಕೆಗೆ ಆಧಾರವಾಗಿದ್ದ ತ್ರಿಕೂಟಪರ್ವತದ ಶಿಖರವನ್ನು ಆಕ್ರಮಿಸಿ ಉರಿಯಲಾರಂಭಿಸಿತು. ವಾಯುವಿನ ಸಹಾಯದಿಂದ ಪ್ರಳಯಕಾಲದ ಅಗ್ನಿಯಂತೆ ಆಕಾಶದವರೆಗೂ ವ್ಯಾಪಿಸಿ ಹೊಗೆಯಿಲ್ಲದೆ ಉರಿಯನ್ನು ಚಲ್ಲುತ್ತಿತ್ತು. ಅಗ್ನಿಗೆ ರಾಕ್ಷಸರ ಶರೀರಗಳೇ ತುಪ್ಪದ ಆಹುತಿಯಾಯಿತು (೩೩–೩೪). ಕೋಟಿ ಸೂರ್ಯರು ಉದಯಿಸಿದರೋ ಎಂಬಂತೆ ಬೆಳಕನ್ನು ಕಾರುತ್ತ, ಸಿಡಿಲಿನಂತಹ ಚಟಚಟತ್ಕಾರ ಶಬ್ದಗಳಿಂದ ಬ್ರಹ್ಮಾಂಡವನ್ನು ಭೇದಿಸುತ್ತ, ಸಮಸ್ತಲಂಕೆಯನ್ನೇ ವ್ಯಾಪಿಸಿ ಅಗ್ನಿಯು ಪ್ರಜ್ವಲಿಸಿತು. ಕ್ರೂರವಾದ ಪ್ರಭೆಯನ್ನು ಸೂಸುತ್ತಿದ್ದ ಅಗ್ನಿಯು ಕೆಲವೆಡೆಯಲ್ಲಿ ಮುತ್ತುಗದ ಹೂವಿನಂತ ಜ್ವಾಲೆಯನ್ನು ಪ್ರಸರಿಸಿತು. ಕೆಲವೆಡೆಯಲ್ಲಿ ಬೆಂಕಿಯಡಗಿದಮೇಲೆ, ಕನ್ನೈದಿಲೆಯ ಹೂಗಳಂತೆ ಕಪ್ಪಾಗಿದ್ದ ಹೊಗೆಯ ರಾಶಿಗಳು ಮೇಘಖಂಡಗಳಂತೆ ಪ್ರಕಾಶಿಸುತ್ತಿದ್ದವು (೩೫–೩೬). "ಅಬ್ಬಾ! ಈ ಕಪಿಯು ಯಾರಾಗಿರಬಹುದು? ವಜ್ರಧಾರಿಯಾದ ದೇವೇಂದ್ರನೊ! ಸಾಕ್ಷಾತ್ ಯಮನೊ! ವರುಣನೊ! ವಾಯುವೊ! ರುದ್ರನೊ! ಅಗ್ನಿಯೊ! ಅಥವಾ ಸೂರ್ಯ, ಕುಬೇರ, ಚಂದ್ರರಲ್ಲಿ ಒಬ್ಬನೊ! ಇವನು ಕಪಿಯಲ್ಲ. ಕಾಲಪುರುಷನೇ ಇವನು. ಅಥವಾ ರಾಕ್ಷಸರನ್ನೆಲ್ಲಾ ಸಂಹಾರ ಮಾಡಬೇಕೆಂದು ಸಂಕಲ್ಪಿಸಿದ ಚತುರ್ಮುಖ ಬ್ರಹ್ಮನ ಕೋಪವೇ ಕಪಿಯ ರೂಪದಿಂದ ಬಂದಿರಬಹುದೆ? (೩೭–೩೮). ಇಲ್ಲದಿದ್ದರೆ ಅನಂತವೂ ಅವ್ಯಕ್ತವೂ ಅಚಿಂತ್ಯವೂ ಅದ್ವಿತೀಯವೂ ಆದ ಮಹಾವಿಷ್ಣುವಿನ ತೇಜಸ್ಸು ರಾಕ್ಷಸರನ್ನು ಕೊಲ್ಲುವುದಕ್ಕಾಗಿ ತನ್ನ ಮಾಯಾಶಕ್ತಿಯಿಂದ ಕಪಿ

* ಲಂಕಾಭೂಮಿಯು ರಾಕ್ಷಸರ ಹೆಣಗಳಿಂದ ತುಂಬಿಹೋಯಿತು ಎಂದು ಅಭಿಪ್ರಾಯ.

ರೂಪವನ್ನು ಧರಿಸಿ ಬಂದಿರಬಹುದೆ?" ಎಂಬುದಾಗಿ ಸಮಸ್ತ ಲಂಕಾಪುರಿಯೂ ಸುಟ್ಟುಹೋಗುತ್ತಿರುವುದನ್ನು ಕಂಡು ಪ್ರಮುಖರಾದ ರಾಕ್ಷಸರು ಮಾತನಾಡಿ ಕೊಳ್ಳುತ್ತಿದ್ದರು (೩೯–೪೦). ನಗರದಲ್ಲಿದ್ದ ರಾಕ್ಷಸರೂ ಅಶ್ವರಥಗಳೂ ಆನೆಗಳೂ ಮೃಗಪಕ್ಷಿಗಳೂ ವೃಕ್ಷಗಳೂ ದಹಿಸಿಹೋಗುತ್ತಿರಲು, ಎಲ್ಲೆಲ್ಲಿಯೂ ರೋದನ ಧ್ವನಿಯಿಂದ ಲಂಕೆಯು ತುಂಬಿಹೋಯಿತು. "ಅಯ್ಯೋ! ಅಪ್ಪಾ! ಅಯ್ಯೋ ಮಗನೆ! ಹಾ ಪ್ರಾಣಕಾಂತ! ಹಾ ಮಿತ್ರ! ಅಯ್ಯೋ ನಮ್ಮ ಜೀವನವೆ! ನಮ್ಮ ಭಾಗ್ಯವೆ! ನಮ್ಮ ಪುಣ್ಯವೆ!" ಮುಂತಾದ ರಾಕ್ಷಸರ ಆಕ್ರಂದನಧ್ವನಿಗಳು ಭಯಂಕರವಾಗಿ ತುಂಬಿಹೋದವು (೪೧–೪೩). ಹನುಮಂತನ ಕೋಪಕ್ಕೆ ತುತ್ತಾಗಿ ಅಗ್ನಿಜ್ವಾಲೆಗಳಿಂದ ವ್ಯಾಪ್ತವಾದ ಲಂಕೆಯಲ್ಲಿ ರಾಕ್ಷಸವೀರರನೇಕರು ಸತ್ತುಹೋದರು. ಸೈನಿಕರು ದಿಗ್ಭ್ರಾಂತರಾದರು ಯಾವುದೋ ಶಾಪಕ್ಕೆ ಈಡಾಗಿ ಹಾಳಾಗಿಹೋಯಿತೋ ಎಂಬಂತೆ ಲಂಕೆಯು ಕಾಣಿಸುತ್ತಿದ್ದಿತು. ಎಲ್ಲೆಲ್ಲಿಯೂ ಭಯದಿಂದ ಕಂಗೆಟ್ಟ ರಾಕ್ಷಸರು ದುಃಖಿಸುತ್ತಿದ್ದರು. ಅಗ್ನಿಜ್ವಾಲೆಯು ಆವರಿಸಿತ್ತು. ಪ್ರಳಯಕಾಲದಲ್ಲಿ ಪರಮೇಶ್ವರನ ಕೋಪಕ್ಕೆ ಈಡಾದ ಜಗತ್ತಿನಂತಿದ್ದ ಲಂಕೆಯನ್ನು ಹನುಮಂತನು ನೋಡುತ್ತಿದ್ದನು (೪೩–೪೪). ಹೀಗೆ ಹನುಮಂತನು ವೃಕ್ಷಗಳಿಂದ ತುಂಬಿದ್ದ ಅಶೋಕವನವನ್ನು ಹಾಳುಮಾಡಿ, ಯುದ್ಧದಲ್ಲಿ ರಾಕ್ಷಸವೀರರನ್ನು ಸಂಹರಿಸಿ, ಉತ್ತಮ ಭವನಗಳಿಂದ ಶೋಭಿಸುತ್ತಿದ್ದ ಲಂಕಾಪಟ್ಟಣವನ್ನು ಸುಟ್ಟುಹಾಕಿದನು. ಅನಂತರ ಆ ಕಪಿರಾಜಸಿಂಹನು ತ್ರಿಕೂಟಪರ್ವತದ ಶಿಖರವನ್ನೇರಿ ಕುಳಿತುಕೊಂಡನು. ಆಗ ಬಾಲದಲ್ಲಿ ಇನ್ನೂ ಬೆಂಕಿಯು ಉರಿಯುತ್ತಿರಲು, ಅವನು ಕಿರಣಮಾಲಿಯಾದ ಸೂರ್ಯನಂತೆ ಶೋಭಿಸುತ್ತಿದ್ದನು (೪೫–೪೬). ಈ ಪ್ರಕಾರದಲ್ಲಿ ಅಶೋಕವನವನ್ನು ನಾಶ ಮಾಡಿ, ಬಹುಮಂದಿ ರಾಕ್ಷಸರನ್ನು ಕೊಂದು, ಅವರ ಮನೆಗಳಿಗೆ ಬೆಂಕಿಯನ್ನು ಹತ್ತಿಸಿದಮೇಲೆ ಅವನಿಗೆ ಶ್ರೀರಾಮನ ಸ್ಮರಣೆಯುಂಟಾಯಿತು. ಆಗ ನಿಖಿಲ ದೇವತೆಗಳೂ ಹನುಮಂತನನ್ನು ವಾನರವೀರರಲ್ಲಿ ಶ್ರೇಷ್ಠನೆಂದೂ ಮಹಾಬಲಿಷ್ಠನೆಂದೂ ವಾಯುವಿನಂತೆ ವೇಗಶಾಲಿಯೆಂದೂ ಬುದ್ಧಿಶಾಲಿಯೆಂದೂ ನಾನಾವಿಧವಾಗಿ ಹೊಗಳುತ್ತಿದ್ದರು (೪೭–೪೮). ಹೀಗೆ ಆ ಮಹಾಕಪಿಯು ಅಶೋಕವನವನ್ನು ಮುರಿದು, ರಾಕ್ಷಸರನ್ನು ವಧಿಸಿ, ಲಂಕೆಯನ್ನು ದಹಿಸಿ ತಾನೇ ತಾನಾಗಿ ಮೆರೆದನು. ಲಂಕೆಯು ಭಸ್ಮವಾದುದನ್ನು ಕಂಡು ದೇವ ಗಂಧರ್ವ ಸಿದ್ಧರಿಗೂ

*

ಮಹರ್ಷಿಗಳಿಗೂ ಪರಮಾಶ್ಚರ್ಯವಾಯಿತು (೪೯–೫೦). ವಾನರೋತ್ತಮ ನಾದ ಹನುಮಂತನನ್ನು ಕಾಲಾಗ್ನಿಯೆಂದು ಭಾವಿಸಿ, ಸಮಸ್ತ ಪ್ರಾಣಿಗಳೂ ಭಯದಿಂದ ನಡುಗುತ್ತಿದ್ದವು. ಮುನಿಗಳೂ ದೇವಗಂಧರ್ವಾದಿಗಳೂ ಆನಂದ ತುಂದಿಲರಾದರು (೫೧–೫೨).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಐವತ್ತುನಾಲ್ಕನೆಯ ಸರ್ಗ

---

## ಸರ್ಗ ೫೫

ಲಂಕೆಯನ್ನು ಸುಡುವಾಗ ಸೀತೆ ಏನಾದಳೋ ಎಂದು ಹನುಮಂತನು ಭೀತನಾಗುವುದು. ಆಮೇಲೆ ಚಾರಣರ ವಾಕ್ಯದಿಂದ ಸೀತೆಯ ಕುಶಲವನ್ನು ತಿಳಿದು ಪ್ರಯಾಣಸನ್ನದ್ಧನಾಗುವುದು.

ಆಂಜನೇಯನು ಲಂಕೆಯ ಸಮಸ್ತ ಭಾಗಗಳಿಗೂ ಬೆಂಕಿಯಿಟ್ಟಮೇಲೆ, ಬಾಲವನ್ನು ಸಮುದ್ರದಲ್ಲಿ ಅದ್ದಿ ಅದರ ಬೆಂಕಿಯನ್ನು ಆರಿಸಿದನು. ಅವನು ಹಾಗೆಯೇ ನಿಂತು ಲಂಕೆಯು ಉರಿದುಹೋಗುವುದನ್ನೂ ರಾಕ್ಷಸರು ಭೀತರಾಗಿ ಓಡುವುದನ್ನೂ ನೋಡುತ್ತಿರುವಾಗ ಒಂದು ಚಿಂತೆ ಹುಟ್ಟಿತು (೧–೨). ಮನಸ್ಸಿನಲ್ಲಿ ಕಳವಳವಾಯಿತು. ತನ್ನನ್ನೇ ನಿಂದಿಸಿಕೊಂಡನು. “ಅಯ್ಯೋ! ಲಂಕೆಯನ್ನು ಸುಡಬೇಕೆಂದು ಹೊರಟು ಏನುಮಾಡಿಬಿಟ್ಟೆ! ನೀರನ್ನು ಎರಚಿ ಬೆಂಕಿಯನ್ನು ಆರಿಸುವಂತೆ, ಕೋಪವನ್ನು ವಿಚಾರಶಕ್ತಿಯಿಂದ ಅದುಮಿಹಿಡಿಯ ಬೇಕು. ಹಾಗೆ ಮಾಡತಕ್ಕವರೇ ಪುರುಷಶ್ರೇಷ್ಠರು. ಅವರೇ ಧನ್ಯರು (೩–೪). ಕೋಪಬಂದಾಗ ಪಾಪಕೃತ್ಯವನ್ನು ಮಾಡದವನು ಯಾರು? ಕೋಪಬಂದವನು ಹಿರಿಯರನ್ನೂ ಕೊಲ್ಲುತ್ತಾನೆ. ಸಜ್ಜನರನ್ನೂ ಕೆಟ್ಟಮಾತುಗಳಿಂದ ಬಯ್ಯು ತ್ತಾನೆ. ಕೋಪಬಂದವನಿಗೆ, ಇದನ್ನು ಹೇಳಬೇಕು ಇದನ್ನು ಹೇಳಬಾರದು– ಎಂಬ ಅರಿವೇ ಇರುವುದಿಲ್ಲ. ಅವನು ಮಾಡದಿರುವ ಕೆಲಸವಿಲ್ಲ. ಆಡದಿರುವ ಮಾತಿಲ್ಲ (೫–೬). ಸರ್ಪವು ಜೀರ್ಣವಾದ ಪೊರೆಯನ್ನು ಬಿಸುಡುವಂತೆ, ಯಾವನು ತಾಳ್ಮೆಯಿಂದ ಕೋಪವನ್ನು ಅಡಗಿಸಿಕೊಳ್ಳುವನೋ ಅವನೇ ಮನುಷ್ಯ. ಲಂಕೆಯಲ್ಲಿ ಸೀತೆ ಇರುವುದನ್ನೇ ಯೋಚಿಸದೆ ಬೆಂಕಿಯನ್ನು ಹತ್ತಿಸಿ

ಬಿಟ್ಟೆನಲ್ಲ! ನಾನು ಸ್ವಾಮಿದ್ರೋಹಿ; ದುಷ್ಟ; ನೀತಿಗೆಟ್ಟವನು; ಪಾಪಿಷ್ಠ. ಅಯ್ಯೋ! ನನಗೆ ಧಿಕ್ಕಾರ! (೭-೮). ಲಂಕಾನಗರವೇ ಸುಟ್ಟುಹೋದಮೇಲೆ ಪೂಜ್ಯಳಾದ ಜಾನಕಿಯು ಉಳಿದಿರುತ್ತಾಳೆಯೆ? ಅವಿವೇಕದಿಂದ ನಾನು ಸ್ವಾಮಿ ಕಾರ್ಯವನ್ನು ಹಾಳುಮಾಡಿದೆನು. ಯಾವ ಸೀತಾರಕ್ಷಣೆಗಾಗಿ ನಾನು ಪ್ರಯತ್ನ ಮಾಡಿದೆನೋ ಆ ಕೆಲಸವನ್ನೇ ಕೆಡಿಸಿದೆನು. ಲಂಕೆಯನ್ನು ಸುಡುವಾಗ ಸೀತೆ ಯನ್ನು ರಕ್ಷಿಸದೆ ಮರೆತೆನು (೯-೧೦). ನನ್ನ ಕರ್ತವ್ಯವನ್ನು ಸುಲಭವಾಗಿಯೇ ಮಾಡಿ ಸಾಧಿಸಿದ್ದೇನೆ. ಸಂದೇಹವಿಲ್ಲ. ಆದರೆ ಕೋಪದಿಂದ ಮುಂದುಗಾಣದೆ ಮುಖ್ಯವಾದ ಕಾರ್ಯವನ್ನು ಕೆಡಿಸಿ ಬುಡವನ್ನೇ ಕಡಿದುಬಿಟ್ಟೆನಲ್ಲ. ನಿಶ್ಚಯ ವಾಗಿಯೂ ಜಾನಕಿಯು ಬದುಕಿರಲಾರಳು. ಸುಟ್ಟು ಬೂದಿಯಾಗದ ಜಾಗವೇ ಲಂಕೆಯಲ್ಲಿ ಉಳಿದಿಲ್ಲ (೧೧-೧೨). ಬಂದ ಕೆಲಸಕ್ಕೆ ನನ್ನ ಅವಿವೇಕದಿಂದ ಹಾನಿಯಾಗಿದ್ದೇ ನಿಜವಾದರೆ, ಇಲ್ಲಿಯೇ ನಾನು ಪ್ರಾಣವನ್ನು ಬಿಡುವುದೊಳ್ಳೆ ಯದು. ಈಗ ಬೆಂಕಿಯಲ್ಲಿ ಬೀಳಲೆ? ಬಡಬಾಗ್ನಿಯ ಬಾಯನ್ನು ಹೊಗಲೆ? ಅಥವಾ ಸಮುದ್ರದಲ್ಲಿರುವ ಜಲಜಂತುಗಳಿಗೆ ನನ್ನ ದೇಹವನ್ನು ಒಪ್ಪಿಸಿಬಿಡಲೆ? (೧೩-೧೪). ಹೀಗೆ ಕಾರ್ಯವನ್ನೆಲ್ಲಾ ಕೆಡಿಸಿಬಿಟ್ಟು, ಈ ಪ್ರಾಣವನ್ನುಳಿಸಿ ಕೊಂಡು ಸುಗ್ರೀವನನ್ನು ನೋಡುವುದಾದರೂ ಹೇಗೆ? ರಾಮಲಕ್ಷ್ಮಣರನ್ನು ನೋಡುವುದಾದರೂ ಹೇಗೆ? ಚಪಲಸ್ವಭಾವದ ಮಂಗತನವೆಂದರೇನೆಂಬು ದನ್ನು ಮೂರು ಲೋಕಕ್ಕೂ ಗೊತ್ತಾಗುವಂತೆ ಕೋಪವಶನಾಗಿ ತೋರಿಸಿ ಬಿಟ್ಟೆನು! (೧೫-೧೬). ಹಿಡಿತವಿಲ್ಲದೆ ಸ್ವೇಚ್ಛೆಯಾಗಿ ಕೆಲಸಮಾಡುವ ಈ ರಜೋಗುಣಕ್ಕೆ ಧಿಕ್ಕಾರ! ನಾನು ಸೀತೆಯನ್ನು ರಕ್ಷಿಸಿಕೊಳ್ಳಲು ಸಮರ್ಥ ನಾಗಿದ್ದೆನು. ಆದರೂ ಕೋಪದಿಂದ ಮುಂದುಗಾಣದೆ ರಕ್ಷಿಸಿಕೊಳ್ಳದೆ ಹೋದೆನು. ಸೀತೆಯು ಮೃತಳಾದಮೇಲೆ ರಾಮಲಕ್ಷ್ಮಣರಿಬ್ಬರೂ ಪ್ರಾಣವನ್ನು ಬಿಡುವರು. ಆಗ ಸುಗ್ರೀವನೂ ಬಂಧುಸಮೇತನಾಗಿ ಪ್ರಾಣವನ್ನು ಬಿಡುವನು (೧೭-೧೮). ಇದನ್ನು ಕೇಳಿದಮೇಲೆ ಭ್ರಾತೃವತ್ಸಲನೂ ಧರ್ಮಾತ್ಮನೂ ಆದ ಭರತನೂ ಶತ್ರುಘ್ನನೂ ಪ್ರಾಣಸಹಿತರಾಗಿ ಉಳಿಯಬಲ್ಲರೆ? ಧರ್ಮಮಾರ್ಗದಲ್ಲಿ ನಡೆ ಯುವ ಇಕ್ಷ್ವಾಕುವಂಶವೇ ನಿರ್ನಾಮವಾದಮೇಲೆ ಸಕಲ ಪ್ರಜೆಗಳೂ ದುಃಖ ದಿಂದ ನರಳಬೇಕಾಗುತ್ತದೆ ಎಂಬುದು ನಿಶ್ಚಯ (೧೯-೨೦). ನಾನು ಎಂತಹ ಭಾಗ್ಯಹೀನ! ರೋಷವೆಂಬ ದೋಷಕ್ಕೆ ಒಳಗಾಗಿ ಧರ್ಮಾರ್ಥಗಳನ್ನು ಕೆಡಿಸಿ

ಕೊಂಡು ಲೋಕಕ್ಕೆ ಕಂಟಕನಾಗಿಬಿಟ್ಟೆನು." ಹೀಗೆ ಹನುಮಂತನು ಚಿಂತಿಸು ತ್ತಿರುವಾಗ, ಹಿಂದೆ ತನಗೆ ಸಂಭವಿಸಿದ್ದ ಶುಭಶಕುನಗಳು ಮತ್ತೆ ತೋರಿಬಂದವು (೨೧–೨೨). ಆದ್ದರಿಂದ ತಿರುಗಿ ತನ್ನಲ್ಲಿಯೇ "ಆ ಸುಂದರಾಂಗಿಯನ್ನು ಪಾತಿವ್ರತ್ಯದ ಮಹಿಮೆಯೇ ಕಾಪಾಡಿರಬಹುದು. ಮಂಗಳಸ್ವರೂಪಿಣಿಯಾದ ಅವಳು ಬೆಂಕಿಯಿಂದ ನಾಯಲಾರಳು. ಬೆಂಕಿಯು ಬೆಂಕಿಯನ್ನೆಂದಾದರೂ ಸುಡಬಲ್ಲುದೆ? ಅವಳು ಧರ್ಮಾತ್ಮನೂ ಮಹಾತೇಜಸ್ವಿಯೂ ಆದ ಶ್ರೀರಾಮನ ಪತ್ನಿ. ಪರಿಶುದ್ಧವಾದ ನಡತೆಯೇ ಅವಳಿಗೆ ಬೆಂಗಾವಲಾಗಿದೆ. ಅಂತಹವಳನ್ನು ಅಗ್ನಿಯು ಮುಟ್ಟಲಾರನು (೨೩–೨೪). (ಸೇವಕನಾದ) ನನ್ನನ್ನೇ ಅಗ್ನಿಯು ಸುಡಲಿಲ್ಲ. ಇದಕ್ಕೆ ರಾಮನ ಪ್ರಭಾವವೂ ಸೀತೆಯ ಪರಿಶುದ್ಧವಾದ ನಡತೆಯೂ ಕಾರಣವಲ್ಲದೆ ಬೇರೆ ಇಲ್ಲ. ಭರತ ಲಕ್ಷ್ಮಣ ಶತ್ರುಘ್ನರಿಗೆ ದೇವತೆಯೆನಿಸಿ ಕೊಂಡು, ಶ್ರೀರಾಮನಿಗೆ ಮನೋವಲ್ಲಭೆಯಾದ ಸೀತಾದೇವಿಯು ನಾಶವಾಗು ತ್ತಾಳೆ ಎಂದರೇನು? (೨೫–೨೬). ಅಗ್ನಿಗೆ ಸುಡುವುದೇ ಸ್ವಭಾವ. ಅವನಿಗೆ ತಡೆ ಎಂಬುದೇ ಇಲ್ಲ. ಅಂಥ ಅಗ್ನಿಯು ನನ್ನ ಬಾಲವನ್ನೇ ಸುಡದಿರುವಾಗ ಆ ದೇವಿಯನ್ನು ಎಂದಿಗಾದರೂ ಸುಡುವನೆ?" ಎಂದು ಆಲೋಚಿಸುತ್ತಿರು ವಾಗ, ಸಮುದ್ರಮಧ್ಯದಲ್ಲಿ ಮೈನಾಕಪರ್ವತವು ಎದ್ದುಬಂದು ಕಾಣಿಸಿ ಕೊಂಡುದು ನೆನಪಾಗಿ ವಿಸ್ಮಿತನಾದನು (೨೭–೨೮). ಅವನು ತನ್ನ ಮನಸ್ಸಿ ನಲ್ಲಿ "ಸೀತಾದೇವಿಯು ತನ್ನ ತಪಃಪ್ರಭಾವ, ಸತ್ಯದ ಬಲ, ಪಾತಿವ್ರತ್ಯದ ತೇಜಸ್ಸುಗಳಿಂದ ಅಗ್ನಿಯನ್ನೇ ಸುಟ್ಟುಬಿಟ್ಟಾಳು! ಅಗ್ನಿಯು ಅವಳನ್ನು ಸುಡ ಲಾರದು" ಎಂದು ನಿರ್ಧರಿಸಿ, ಸೀತೆಯ ಧರ್ಮನಿಷ್ಠೆಯನ್ನು ಸ್ಮರಿಸಿಕೊಳ್ಳು ತ್ತಿರುವಾಗ ಮಹಾತ್ಮರಾದ ಚಾರಣರು ಹೇಳಿಕೊಳ್ಳುತ್ತಿದ್ದ ಕೆಲವು ಮಾತುಗಳು ಅವನಿಗೆ ಕೇಳಿಸಿದವು (೨೯–೩೦): "ಆಹಾ! ಏನು ಆಶ್ಚರ್ಯ! ಹನುಮಂತನು ಎಷ್ಟು ಅಸಾಧ್ಯವಾದ ಕಾರ್ಯವನ್ನು ಮಾಡಿಬಿಟ್ಟನು! ರಾಕ್ಷಸರ ಮನೆಮನೆಗೂ ಘೋರವಾದ ಬೆಂಕಿಯನ್ನು ಹತ್ತಿಸಿಬಿಟ್ಟನು. ಹೆಂಗಸರು, ಮಕ್ಕಳು ಮುದುಕರು ಮೊದಲಾಗಿ ರಾಕ್ಷಸರೆಲ್ಲರೂ ಭಯದಿಂದ ಓಡುತ್ತಿದ್ದಾರೆ. ಪರ್ವತದ ಗುಹೆಗಳಲ್ಲಿ ಇವರ ಕೋಲಾಹಲವು ಪ್ರತಿಧ್ವನಿಸಿ ಲಂಕಾನಗರಿಯೇ ಅಳುತ್ತಿರುವಂತೆ ಭಾಸ ವಾಗುತ್ತದೆ (೩೧–೩೨). ಮಹಡಿ, ಪ್ರಾಕಾರ, ಮಹಾದ್ವಾರಗಳ ಸಹಿತ ಇಡೀ ಲಂಕೆಯೇ ಸುಟ್ಟು ಬೂದಿಯಾಯಿತು. ಆದರೆ ಜಾನಕಿಯು ಮಾತ್ರ ಯಾವ

ಅಪಾಯವೂ ಆಗದೆ ಉಳಿದುಕೊಂಡಳು. ಇದು ಅದ್ಭುತವೇ ಸರಿ" ಎಂದು ಅವರು ಮಾತಾಡುತ್ತಿದ್ದರು. ಅಮೃತದಂತಿದ್ದ ಆ ಮಾತನ್ನು ಕೇಳಿ ಹನುಮಂತನಿಗೆ ಪರಮಾನಂದವಾಯಿತು (೩೩–೩೪). ಹಿಂದೆ ಫಲಸಿದ್ಧಿಯನ್ನು ಕೊಟ್ಟಿದ್ದ ಶುಭಶಕುನಗಳು ಪುನಃ ತೋರಿದ್ದರಿಂದಲೂ (ರಾಮನ ತೇಜಸ್ಸು, ಸೀತೆಯ ಚಾರಿತ್ರ ಮುಂತಾದ) ಮಹಾಗುಣಗಳಿಂದಲೂ ಚಾರಣರ ಮಾತುಗಳಿಂದಲೂ ಹನುಮಂತನಿಗೆ ಹರ್ಷವಾಯಿತು (೩೫). ತಾನು ಉದ್ದೇಶಿಸಿ ಬಂದ ಕಾರ್ಯವು ಸಫಲವಾಯಿತೆಂದೂ ರಾಜಕುಮಾರಿಯಾದ ಸೀತೆಯು ಕ್ಷೇಮದಿಂದಿರುವಳೆಂದೂ ತಿಳಿದುಕೊಂಡನು. ತಾನು ಪ್ರತ್ಯಕ್ಷವಾಗಿ ಸೀತೆಯನ್ನು ನೋಡಿ, ಅನಂತರ ಹಿಂದಿರುಗಿ ಪ್ರಯಾಣಮಾಡಬೇಕೆಂದು ಆತನು ನಿರ್ಧರಿಸಿದನು(೩೬).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಐವತ್ತೈದನೆಯ ಸರ್ಗ

---

## ಸರ್ಗ ೫೬

ಹನುಮಂತನು ಸೀತೆಯನ್ನು ಕಂಡು ಸಮಾಧಾನಪಡಿಸುವುದು. ಆಮೇಲೆ ಸಮುದ್ರವನ್ನು ಲಂಘಿಸುವುದಕ್ಕಾಗಿ ಅರಿಷ್ಟಪರ್ವತವನ್ನೇರಿ ಆಕಾಶಕ್ಕೆ ನೆಗೆಯುವುದು.

ಅನಂತರ ಆಂಜನೇಯನು ಶಿಂಶಪಾವೃಕ್ಷದ ಕೆಳಗೆ ಕುಳಿತಿದ್ದ ಸೀತಾದೇವಿಯ ಸಮೀಪಕ್ಕೆ ಬಂದು ನಮಸ್ಕಾರಮಾಡಿ "ದೇವಿ, ಇಲ್ಲಿ ಯಾವ ಅಪಾಯಕ್ಕೂ ಸಿಕ್ಕದಿರುವ ನಿನ್ನನ್ನು ಮತ್ತೆ ನೋಡುತ್ತಿದ್ದೇನೆ. ಇದು ನನ್ನ ಭಾಗ್ಯ!" ಎಂದನು (೧). ಸೀತೆಯು ಪ್ರಯಾಣಕ್ಕೋಸ್ಕರ ಸಿದ್ಧನಾಗಿ ನಿಂತಿದ್ದ ಅವನನ್ನು ಮತ್ತೆ ಮತ್ತೆ ನೋಡುತ್ತ, ತನಗೆ ಪತಿಯಲ್ಲಿರುವ ಪ್ರೇಮವನ್ನು ಸೂಚಿಸುವ ಮಾತಿನಿಂದ ಹೀಗೆಂದಳು (೨): "ವೀರಾಗ್ರಣಿ, ನೀನೊಬ್ಬನೇ ನನ್ನನ್ನು ಸೆರೆಯಿಂದ ಬಿಡಿಸಿ ಕಾರ್ಯವನ್ನು ಸಾಧಿಸಲು ಸಮರ್ಥನಾಗಿದ್ದೀಯೆ. ಬಲಶಾಲಿಯೆಂದು ನಿನಗೆ ಕೀರ್ತಿ ಬರುವುದು. ಆದರೆ ಶ್ರೀರಾಮನು ತನ್ನ ಶರಗಳಿಂದ ಲಂಕೆಯನ್ನು ಮುಚ್ಚಿ, ಶತ್ರುಗಳನ್ನು ಸಂಹರಿಸಿ ನನ್ನನ್ನು ಕರೆದೊಯ್ದರೆ, ಆಗ ಅವನ ಹೆಸರಿಗೆ ಯೋಗ್ಯವಾದ ಕೆಲಸವಾಗುತ್ತದೆ (೩–೪). ರಣಧೀರನಾದ

ಆ ಮಹಾತ್ಮನು ತನಗೆ ಅನುರೂಪವಾದ ಪರಾಕ್ರಮವನ್ನು ತೋರಿಸುವಂತೆ ಏರ್ಪಡಿಸಬೇಕು" ಎಂದಳು (೫). ಅರ್ಥಗರ್ಭಿತವೂ ಯುಕ್ತಿಯುಕ್ತವೂ ಆದ ಸೀತೆಯ ಮಾತನ್ನು ಕೇಳಿ ಹನುಮಂತನು "ಅಮ್ಮಾ, ಶ್ರೀರಾಮನು ವಾನರ ಭಲ್ಲೂಕ ಸೇನೆಯೊಡನೆ ಶೀಘ್ರದಲ್ಲಿಯೇ ಬಂದು ಶತ್ರುಗಳನ್ನು ಜಯಿಸಿ, ನಿನ್ನ ಕಷ್ಟವನ್ನು ಪರಿಹರಿಸುತ್ತಾನೆ" ಎಂದು ಹೇಳಿ ವೈದೇಹಿಯನ್ನು ಸಮಾಧಾನ ಪಡಿಸಿ ಸಾಷ್ಟಾಂಗ ನಮಸ್ಕಾರಮಾಡಿದನು (೬–೮). ಅನಂತರ ಆ ವಾನರ ಶ್ರೇಷ್ಠನು ತನ್ನ ಸ್ವಾಮಿಯನ್ನು ನೋಡುವ ಉತ್ಸಾಹದಿಂದ ಕೂಡಲೇ ಹೊರಟು ಅರಿಷ್ಟವೆಂಬ ಪರ್ವತವನ್ನು ಹತ್ತಿದನು. ಆ ಪರ್ವತವು ಉನ್ನತವಾದ ಭೂರ್ಜವೃಕ್ಷಗಳಿರುವ ಅರಣ್ಯಗಳಿಂದ ಪರಿಧಾನವನ್ನು (ಪಂಚೆಯನ್ನು) ಉಟ್ಟಂತೆಯೂ ಶಿಖರಗಳಲ್ಲಿ ತೂಗಾಡುವ ಮೋಡಗಳಿಂದ ಉತ್ತರೀಯವನ್ನು ಹೊದ್ದಿರುವಂತೆಯೂ ತೋರುವುದು (೯–೧೦). ಸೂರ್ಯನು ತನ್ನ ಕಿರಣಗಳೆಂಬ ಕೈಗಳಿಂದ ಪ್ರೀತಿಪೂರ್ವಕವಾಗಿ ಮೈದಡವಿ ಪರ್ವತವನ್ನು ಎಚ್ಚರಗೊಳಿಸುವಂತೆಯೂ ಪರ್ವತವು ಮಣಿಶಿಲೆ ಮುಂತಾದ ಧಾತುಗಳಿಂದ ಕಣ್ಣು ತೆರೆಯುತ್ತಿರುವಂತೆಯೂ ತೋರುವುದು! ಆ ಪರ್ವತವು ಗಿರಿನದಿಗಳ ಗಂಭೀರ ನಿನಾದದಿಂದ ವೇದವನ್ನು ಅಧ್ಯಯನಮಾಡುತ್ತಿರುವಂತೆ ಗೋಚರಿಸುವುದು! ಸಣ್ಣ ಚಿಲುಮೆಗಳ ಮಂಜುಲಧ್ವನಿಯಿಂದ ಸಂಗೀತವನ್ನು ಹಾಡುತ್ತಿರುವಂತೆ ಕಾಣುವುದು (೧೧–೧೨). ಎತ್ತರವಾಗಿ ಬೆಳೆದ ದೇವದಾರು ಮರಗಳಿಂದ ಕೈಗಳನ್ನು ಮೇಲೆತ್ತಿ ನಿಂತಂತೆ ಭಾಸವಾಗುವುದು. ಜಲಪಾತಗಳ ಮೊರೆತದಿಂದ ಕೂಗಿಕೊಳ್ಳುತ್ತಿರುವಂತೆ ಕಾಣಿಸುವುದು. ಆಲ್ಲಾಡುತ್ತಿರುವ ಶರತ್ಕಾಲದ ವನಗಳಿಂದ ನಡುಗುವಂತೆಯೂ ಗಾಳಿಯಿಂದ ಕಿರ್ರೆನ್ನುವ ಬಿದಿರುಗಳಿಂದ ಸಿಳ್ಳೆಯನ್ನೂದುವಂತೆಯೂ ಇರುವುದು (೧೩–೧೪). ಘೋರವಾದ ವಿಷಸರ್ಪಗಳಿಂದ ಬುಸುಗುಟ್ಟುವಂತೆಯೂ ಮಂಜಿನಿಂದ ಮುಚ್ಚಿದ ನಿಶ್ಶಬ್ದವಾದ ಗುಹೆಗಳಿಂದ ಧ್ಯಾನಮಾಡುವಂತೆಯೂ ತೋರುವುದು! ಮೇಘಕ್ಕೆ ತಾಕುವ ಸುತ್ತಲಿನ ಕಿರುಬೆಟ್ಟಗಳಿಂದ ನಡೆದುಹೋಗುವಂತೆಯೂ ಮೇಘವನ್ನು ದಾಟಿ ಹೋದ ಶೃಂಗಗಳಿಂದ ಮೈಮುರಿಯುವಂತೆಯೂ* ಕಾಣುವುದು (೧೫–೧೬).

---

* ಮೈಮುರಿಯುವಾಗ, ಶರೀರದ ಮೇಲ್ಭಾಗವು ಪಾರ್ಶ್ವಕ್ಕೆ ವಾಲುತ್ತದೆ. ಚಲಿಸುವ ಮೋಡವು ಮೈಮುರಿಯುವ ಪರ್ವತದ ಮೇಲ್ಭಾಗದಂತೆ ಇದ್ದಿತು.

ಅಲ್ಲಿ ಗುಹೆಗಳಿಂದ ತುಂಬಿದ ಅನೇಕ ಶಿಖರಗಳಿದ್ದವು. ನಾಲ, ತಾಳೆ, ಅಶ್ವಕರ್ಣ, ಬಿದಿರು ಮುಂತಾದುವುಗಳಿಂದ ಆ ಪರ್ವತವು ಶೋಭಿಸುತ್ತಿತ್ತು. ಹೂಗಳು ಅರಳಿರುವ ಲತಾಸಮೂಹಗಳೂ ನಾನಾ ಮೃಗಗಳೂ ಧಾತುಗಳೂ ಅದಕ್ಕೆ ಭೂಷಣವಾಗಿದ್ದವು (೧೭–೧೮). ಅಲ್ಲಿ ಅಸಂಖ್ಯಾತವಾಗಿ ನಿರ್ಝರಗಳು ಹರಿಯುತ್ತಿದ್ದವು. ದೊಡ್ಡ ದೊಡ್ಡ ಬಂಡೆಗಳು ಹೇರಳವಾಗಿದ್ದವು. ಮಹರ್ಷಿಗಳು, ಯಕ್ಷರು, ಗಂಧರ್ವರು, ಕಿಂನರರು ಮತ್ತು ಉರಗರು ಅಲ್ಲಲ್ಲಿ ನೆರೆದಿದ್ದರು. ಆ ಪರ್ವತವು ಮರಬಳ್ಳಿಗಳಿಂದ ತುಂಬಿ ಸಿಂಹಗಳಿರುವ ಗುಹೆಗಳಿಂದ ವ್ಯಾಪ್ತವಾಗಿತ್ತು. ಹುಲಿಗಳು ಸಂಚರಿಸುತ್ತಿದ್ದವು. ಅಲ್ಲಿ ರುಚಿಕರವಾದ ಗಡ್ಡೆ, ಹಣ್ಣು, ನೀರು ಯಥೇಷ್ಟವಾಗಿತ್ತು (೧೯–೨೦). ಆ ರೀತಿಯಲ್ಲಿದ್ದ ಅರಿಷ್ಟಪರ್ವತವನ್ನು ಹನುಮಂತನು ರಾಮನನ್ನು ನೋಡಬೇಕೆಂಬ ಲವಲವಿಕೆಯಿಂದ ಬೇಗಬೇಗನೆ ಹತ್ತಿದನು. ಅವನು ಮೇಲಕ್ಕೆ ಹತ್ತುವಾಗ ಕಾಲು ತುಳಿತಕ್ಕೆ ಸಿಕ್ಕಿದ ಬಂಡೆಗಳು ಪುಡಿಪುಡಿಯಾಗಿ ಶಬ್ದಮಾಡುತ್ತ ಉರುಳಿಬೀಳುತ್ತಿದ್ದವು (೨೧–೨೨). ಆ ಮಹಾಕಪಿಯು ಪರ್ವತವನ್ನು ಹತ್ತಿ, ಸಮುದ್ರದ ಉತ್ತರತೀರಕ್ಕೆ ಹೋಗುವುದಕ್ಕಾಗಿ ದೇಹವನ್ನು ಬೆಳೆಸಿಕೊಂಡನು. ಮತ್ಸ್ಯಗಳಿಂದಲೂ ಸರ್ಪಗಳಿಂದಲೂ ತುಂಬಿ ಭಯಂಕರವಾಗಿದ್ದ ಮಹಾಸಾಗರವನ್ನು ಒಮ್ಮೆ ನೋಡಿದನು (೨೩–೨೪). ಆ ಕಪಿಶಾರ್ದೂಲನು ತಂದೆಯಾದ ವಾಯುವಿನಂತೆ ಒಡನೆಯೇ ಆಕಾಶಕ್ಕೆ ನೆಗೆದು, ಮನಸ್ಸಿನಲ್ಲಿ ಉತ್ತರತೀರಕ್ಕೆ ಹೋಗಿ ಸೇರಿದೆನೆಂದು ಭಾವಿಸಿದನು. ಅವನು ನೆಗೆಯುವಾಗ ಪರ್ವತವನ್ನು ಮೆಟ್ಟಿದ ರಭಸಕ್ಕೆ ಅಲ್ಲಿದ್ದ ಸಮಸ್ತ ಪ್ರಾಣಿಗಳೂ ಕಿರಿಚಿಕೊಂಡವು. ಅರಿಷ್ಟಪರ್ವತವು ನೆಲದಲ್ಲಿ ಕುಸಿದುಹೋಗತೊಡಗಿತು (೨೫–೨೬). ಶಿಖರಗಳು ಅಲ್ಲಾಡಿದವು. ಮರಗಳು ಉರುಳಿಬಿದ್ದವು. ಹನುಮಂತನ ತೊಡೆಯ ವೇಗಕ್ಕೆ ಸಿಲುಕಿದ ಪುಷ್ಪಿತ ವೃಕ್ಷಗಳು, ಸಿಡಿಲಿನ ಒಡಿತಕ್ಕೆ ಸಿಕ್ಕಿದಂತೆ ನೆಲದಲ್ಲಿ ಉರುಳಿದವು. ಗುಹೆಗಳಲ್ಲಿ ಸಿಕ್ಕಿಕೊಂಡ ಮಹಾಸಿಂಹಗಳು ಆಕಾಶವು ಬಿರಿಯುವಂತೆ ಗರ್ಜಿಸಿದವು. ಬೆಟ್ಟದಲ್ಲಿ ವಿಹರಿಸುತ್ತಿದ್ದ ವಿದ್ಯಾಧರಿಯರು ಬೆದರಿ, ಅವರ ಉಟ್ಟ ಉಡಿಗೆ ತೊಟ್ಟ ಒಡವೆಗಳು ಸಡಿಲಿಹೋದವು (೨೭–೨೯). ಅವರು ಥಟ್ಟನೆ ಆಕಾಶಕ್ಕೆ ಹಾರಿದರು. ಭಾರಿದೇಹದ ವಿಷಸರ್ಪಗಳು ತಲೆಗೆ ಪೆಟ್ಟು ತಾಕಿದುದರಿಂದ ನಾಲಿಗೆಯನ್ನು ಚಾಚಿ ಹೊರಳಾಡತೊಡಗಿದವು. ಅಲ್ಲಿದ್ದ ಕಿಂನರ, ಗಂಧರ್ವ

ಮುಂತಾದವರು ಪರ್ವತವನ್ನು ಬಿಟ್ಟು ಆಕಾಶವನ್ನಡರಿದರು. ಬಲಾಢ್ಯನಾದ ಹನುಮಂತನು ಒತ್ತಿದ ಪಾದವೇಗಕ್ಕೆ ಆ ಪರ್ವತವು ಸಮಸ್ತ ವೃಕ್ಷಶಿಖರ ಗಳೊಡನೆ ಭೂಮಿಯಲ್ಲಿ ಇಳಿದುಹೋಯಿತು! ಹತ್ತು ಯೋಜನದಷ್ಟು ವಿಸ್ತಾರ ವಾಗಿಯೂ ಮೂವತ್ತು ಯೋಜನದಷ್ಟು ಎತ್ತರವಾಗಿಯೂ ಇದ್ದ ಆ ಮಹಾ ಪರ್ವತವು ನೆಲಸಮವಾಯಿತು! (೩೦–೩೩). ಅಲೆಗಳು ಉಕ್ಕಿಬಂದು ತೀರ ವನ್ನು ಅಪ್ಪಳಿಸುತ್ತಿರಲು, ಭಯಂಕರವಾಗಿದ್ದ ಮಹಾಸಾಗರವನ್ನು ಲೀಲಾಜಾಲ ವಾಗಿ ದಾಟಬಲ್ಲೆನೆಂದೆಣಿಸಿ, ಆಂಜನೇಯನು ಗಗನತಳಕ್ಕೆ ನೆಗೆದುಬಿಟ್ಟನು (೩೪).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಐವತ್ತಾರನೆಯ ಸರ್ಗ

---

## ಸರ್ಗ ೫೭

### ಹನುಮಂತನು ಸಮುದ್ರವನ್ನು ದಾಟಿ ಉತ್ತರತೀರಕ್ಕೆ ಬಂದು ಜಾಂಬವಂತ ಮೊದಲಾದವರೊಡನೆ ಸೇರಿಕೊಳ್ಳುವುದು.

ಹನುಮಂತನು ದಾಟಿಬರುತ್ತಿದ್ದ ಗಗನವೇ ಒಂದು ಮಹಾಸಮುದ್ರವಾಗಿತ್ತು. ಅದರಲ್ಲಿ ಚಂದ್ರನೇ ಬಿಳಿಯ ನೈದಿಲೆಹೂವು. ಸೂರ್ಯನು ಕಾರಂಡವಪಕ್ಷಿ (ನೀರುಕೋಳಿ). ಪುಷ್ಯ ಶ್ರವಣ ನಕ್ಷತ್ರಗಳು ರಾಜಹಂಸಗಳು. ಮೋಡವು ಪಾಚಿ ಮತ್ತು ತೀರದಲ್ಲಿರುವ ಹುಲ್ಲುಗಾವಲು. ಪುನರ್ವಸುನಕ್ಷತ್ರವು ದೊಡ್ಡ ಮೀನು, ಅಂಗಾರಕಗ್ರಹವು ದೊಡ್ಡ ಮೊಸಳೆ. ಐರಾವತವು ಒಂದು ದ್ವೀಪ. ಸ್ವಾತೀನಕ್ಷತ್ರವು ಹಂಸ(೧–೨). ಬಿರುಗಾಳಿಯೇ ತರಂಗ, ಚಂದ್ರಕಿರಣಗಳೇ ನೀರು, ನಾಗಯಕ್ಷಗಂಧರ್ವರೇ ಅರಳಿದ ತಾವರೆ ನೈದಿಲೆ ಹೂಗಳು. ಸಮುದ್ರ ದಲ್ಲಿ ದೊಡ್ಡ ಹಡಗೊಂದು ಸಾಗುವಂತೆ, ಆಂಜನೇಯನು ಅಪಾರವಾದ ಆಕಾಶ ವೆಂಬ ಸಮುದ್ರದಲ್ಲಿ ವಾಯುವೇಗದಿಂದ ಅನಾಯಾಸವಾಗಿ ಹಾರಿಹೋಗು ತ್ತಿದ್ದನು (೩–೪). ಆ ವಾಯುಪುತ್ರನು ಆಕಾಶವನ್ನೇ ನುಂಗಿಬಿಡುವನೊ ಚಂದ್ರನನ್ನು ಪರಚಿಬಿಡುವನೊ ನಕ್ಷತ್ರಮಂಡಲ ಸೂರ್ಯಮಂಡಲಸಹಿತವಾಗಿ ಗಗನವನ್ನು ಕಿತ್ತುಕೊಂಡುಹೋಗುವನೊ ಮೋಡಗಳನ್ನು ಸೆಳೆದೊಯ್ಯುವನೊ

ಎಂಬಂತೆ ಆಕಾಶದಲ್ಲಿ ಸಾಗುತ್ತಿದ್ದನು (೫–೬). ಆಗ ಮೇಘಪಂಕ್ತಿಗಳು ಬಿಳುಪಾಗಿ ಕೆಂಪಾಗಿ ಕಪ್ಪಾಗಿ ಹೊಂಬಣ್ಣವಾಗಿ ಹಸುರಾಗಿ ನಸುಗೆಂಪಾಗಿ ಚೆಲುವಾದವು. ಹನುಮಂತನು ಚಂದ್ರನಂತೆ ಮೋಡಗಳಲ್ಲಿ ಆಗಾಗ ಮರೆಯಾಗುತ್ತ ಮತ್ತೆ ಕಾಣಿಸಿಕೊಳ್ಳುತ್ತ ಇದ್ದನು (೭–೮). ಬಿಳಿಯ ಬಟ್ಟೆಯನ್ನುಟ್ಟಿದ್ದ ಆ ವೀರನು ನಾನಾಬಗೆಯ ಮೋಡಗಳ ಮಧ್ಯದಲ್ಲಿ ನುಗ್ಗುತ್ತ ಹೊರಡುತ್ತ, ಮೋಡಗಳಲ್ಲಿ ಮರೆಯಾಗಿ ಮತ್ತೆ ಕಾಣಿಸಿಕೊಳ್ಳುವ ಚಂದ್ರನಂತೆ ಶೋಭಿಸುತ್ತಿದ್ದನು. ಅವನು ಆಕಾಶದಲ್ಲಿ ಮೇಘಪಂಕ್ತಿಗಳನ್ನು ಭೇದಿಸಿಕೊಂಡು ಹೊರಗೆ ಬರುತ್ತಿರಲು ಗರುಡನಂತೆ ಕಾಣುತ್ತಿದ್ದನು (೯–೧೦). ಆ ಮಹಾತೇಜಸ್ವಿಯು ಲಂಕೆಯಲ್ಲಿ ಅನೇಕ ರಾಕ್ಷಸವೀರರನ್ನು ಸಂಹರಿಸಿ, ತನ್ನ ಹೆಸರನ್ನು ಪ್ರಖ್ಯಾತಿಗೊಳಿಸಿ, ಲಂಕಾಪಟ್ಟಣವನ್ನು ಕಂಗೆಡಿಸಿ, ರಾವಣನನ್ನು ವ್ಯಥೆಪಡಿಸಿ, ಅವನ ಘೋರಸೈನ್ಯವನ್ನು ಧ್ವಂಸಪಡಿಸಿ, ಸೀತೆಗೆ ನಮಸ್ಕರಿಸಿ, ದಾರಿಯಲ್ಲಿ ಮೈನಾಕಪರ್ವತವನ್ನು ಮೈದಡವಿ ಸಂತೈಸಿ ಮೇಘದಂತೆ ಗರ್ಜಿಸುತ್ತ ಹಾರಿ ಬಂದನು (೧೧–೧೩). ಅವನು ಹೆದೆಯಿಂದ ಹೊರಟ ಬಾಣದಂತೆ ಮಹಾವೇಗದಿಂದ ಬರುತ್ತ, ಮುಂದೆ ಮೇಘದಂತೆ ಕಾಣುತ್ತಿದ್ದ ಮಹೇಂದ್ರಪರ್ವತವನ್ನು ಕಂಡು ಹತ್ತು ದಿಕ್ಕುಗಳೂ ಮೊಳಗುವಂತೆ ಹರ್ಷದಿಂದ ಸಿಂಹನಾದ ಮಾಡಿದನು (೧೪–೧೫). ಆ ಕಪಿಶಾರ್ದೂಲನು ತನ್ನ ಗೆಳೆಯರನ್ನು ಕಾಣಬೇಕೆಂಬ ಲಾಲಸೆಯಿಂದ ಬಾಲವನ್ನಲ್ಲಾಡಿಸುತ್ತ ಗರ್ಜನೆಮಾಡುತ್ತಲೇ ಆಕಾಶಮಾರ್ಗದಲ್ಲಿ ಬರುತ್ತಿದ್ದನು. ಅವನ ಗರ್ಜನೆಗೆ ಸೂರ್ಯಮಂಡಲಸಹಿತವಾಗಿ ಗಗನವೇ ಬಿರಿದುಹೋಗುವಂತೆ ಕಾಣುತ್ತಿದ್ದಿತು (೧೬–೧೮). ಇತ್ತ ಸಮುದ್ರದ ಉತ್ತರತೀರದಲ್ಲಿ ಅಂಗದಾದಿ ವಾನರರು ಹನುಮಂತನಿಗೋಸ್ಕರ ಕಾಯುತ್ತ ದೀನವದನರಾಗಿ ಕುಳಿತಿದ್ದರು. ಅವರಿಗೆ ದೂರದಲ್ಲಿ ಗುಡುಗಿನಂತೆ ಹನುಮಂತನ ಗರ್ಜನೆಯೂ ಅವನ ತೊಡೆಗಳ ವೇಗದಿಂದ ಹುಟ್ಟುತ್ತಿದ್ದ ಘೋರೆಂಬ ಶಬ್ದವೂ ಕೇಳಿಸಿದವು (೧೯–೨೦). ತಮ್ಮ ಗೆಳೆಯನನ್ನು ನೋಡಬೇಕೆಂದು ಕಾದಿದ್ದ ಆ ಕಪಿಗಳೆಲ್ಲರೂ ಹನುಮಂತನ ಗರ್ಜನೆಯನ್ನು ಕೇಳಿ ಉತ್ಸಾಹಗೊಂಡರು. ಆಗ ಅವರಲ್ಲಿ ಪ್ರಮುಖನಾದ ಜಾಂಬವಂತನು ಸಂತೋಷದಿಂದ ಹಿಗ್ಗುತ್ತ ಕಪಿಗಳನ್ನು ಕುರಿತು "ಎಲೈ ಕಪಿವೀರರೆ, ಕಾರ್ಯವನ್ನು ಸಾಧಿಸಿಕೊಂಡು ಹನುಮಂತನೇ ಬರುತ್ತಿದ್ದಾನೆ. ಸಂದೇಹವೇ ಇಲ್ಲ (೨೧–೨೩). ಕಾರ್ಯವು

ಕೈಗೂಡದಿದ್ದ ಪಕ್ಷದಲ್ಲಿ ಅವನು ಈ ರೀತಿಯಾಗಿ ಗರ್ಜಿಸುತ್ತಿರಲಿಲ್ಲ" ಎಂದು ಹೇಳಿದನು. ಅವರು ಹನುಮಂತನ ತೋಳು ತೊಡೆಗಳ ವೇಗದ ಶಬ್ದವನ್ನೂ ಅವನ ಗರ್ಜನೆಯನ್ನೂ ಕೇಳಿ, ಆನಂದದಿಂದ ಕುಣಿದಾಡತೊಡಗಿದರು ! (೨೪–೨೫). ಮರದಿಂದ ಮರಕ್ಕೂ ಬೆಟ್ಟದ ಶಿಖರದಿಂದ ಶಿಖರಕ್ಕೂ ನೆಗೆಯುತ್ತ ಹನುಮಂತನನ್ನು ನೋಡುವುದಕ್ಕಾಗಿ ನೆರೆದರು ! ಆ ವಾನರರು ಮರಗಳ ತುದಿ ಯನ್ನೇರಿ ನಿಂತು ಹನುಮಂತನನ್ನು ಸ್ವಾಗತಿಸುವುದಕ್ಕಾಗಿ, ಬಾವುಟಗಳನ್ನು ಬೀಸುವಂತೆ ಹೂವಿನ ಕೊಂಬೆಗಳನ್ನು ಕೈಯಲ್ಲಿ ಹಿಡಿದು ಅಲ್ಲಾಡಿಸತೊಡಗಿ ದರು ! (೨೬–೨೭). ಪರ್ವತದ ಗುಹೆಯಲ್ಲಿ ನುಗ್ಗಿ ಬಿರುಗಾಳಿಯು ಶಬ್ದ ಮಾಡುವಂತೆ, ಆಂಜನೇಯನು ಗರ್ಜಿಸುತ್ತ ಒರುತ್ತಿದ್ದನು. ಆಕಾಶದಲ್ಲಿ ಮೇಘವು ಬರುವಂತೆ ಹಾರಿಬರುತ್ತಿದ್ದ ಆ ಮಹಾಕಪಿಯನ್ನು ಕಂಡು ಕಪಿ ಗಳೆಲ್ಲರೂ ಕೈಮುಗಿದುಕೊಂಡು ನಿಂತುಬಿಟ್ಟರು. ಅಷ್ಟರಲ್ಲಿ ವೇಗದಿಂದ ಬರುತ್ತಿದ್ದ ಆಂಜನೇಯನು ಸಂತೋಷದಿಂದ ಹಿಗ್ಗುತ್ತ ಮಹೇಂದ್ರಪರ್ವತದ ಶಿಖರದಮೇಲೆ, ರೆಕ್ಕೆಕತ್ತರಿಸಿದ ಇನ್ನೊಂದು ಪರ್ವತದಂತೆ ಆಕಾಶದಿಂದ ಧುಮುಕಿದನು (೨೮–೩೧). ಆಗ ಕಪಿವೀರರೆಲ್ಲರೂ ಬಂದು ಅವನ ಸುತ್ತಲೂ ಮುತ್ತಿಕೊಂಡರು. ಅವರ ಹರ್ಷಕ್ಕೆ ಪಾರವೇ ಇರಲಿಲ್ಲ. ಕ್ಷೇಮದಿಂದ ಹಿಂದಿರುಗಿ ಬಂದ ವಾಯುಪುತ್ರನಿಗೆ ಅವರು ಸಂತೋಷದಿಂದ ಗೆಡ್ಡೆಗೆಣಸು, ಹಣ್ಣು ಮುಂತಾದ ಕಾಣಿಕೆಗಳನ್ನು ತಂದುಕೊಟ್ಟರು (೩೨–೩೩). ಹನುಮಂತನು ಜಾಂಬವಂತನೇ ಮೊದಲಾದ ಗುರುಹಿರಿಯರಿಗೂ ಯುವರಾಜ ನಾದ ಅಂಗದನಿಗೂ ನಮಸ್ಕಾರಮಾಡಿದನು. ಆಗ ಅಂಗದ ಜಾಂಬವಂತರೂ ಇತರ ಕಪಿಗಳೂ ಗೌರವಾರ್ಹನಾದ ಹನುಮಂತನನ್ನು ಆದರಿಸಿ ಸತ್ಕರಿಸಿದರು. ಅವನು "ಸೀತೆಯನ್ನು ನೋಡಿದೆನು" ಎಂದು ವೃತ್ತಾಂತವನ್ನು ಸಂಕ್ಷೇಪವಾಗಿ ತಿಳಿಸಿ, ಅಂಗದನ ಕೈಯನ್ನು ಹಿಡಿದುಕೊಂಡು ಆ ಶೈಲದ ಒಂದು ರಮಣೀಯ ಪ್ರದೇಶಕ್ಕೆ ಬಂದು ಕುಳಿತನು (೩೪–೩೬). ಆಮೇಲೆ ಕಪಿವೀರರನ್ನೆಲ್ಲಾ ನೋಡುತ್ತ "ಮಿತ್ರರೆ, ಅಶೋಕವನದಲ್ಲಿ ಜಾನಕಿಯನ್ನು ನೋಡಿಬಂದೆನು. ಘೋರರಾಕ್ಷಸಿಯರು ಆಕೆಯನ್ನು ಕಾಯುತ್ತಿದ್ದಾರೆ. ಅವಳು ಒಂಟಿಜಡೆಯನ್ನು ಧರಿಸಿ ದೀನಳಾಗಿ ಶ್ರೀರಾಮನ ದರ್ಶನಕ್ಕಾಗಿ ಹಾತೊರೆಯುತ್ತಿದ್ದಾಳೆ. ಉಪವಾಸದಿಂದ ಕೃಶಳಾಗಿ ಕುಂದಿಹೋಗಿರುವಳು" ಎಂದನು (೩೭–೩೯).

"ನೋಡಿದೆನು" ಎಂಬ ಮಾತು ಕಪಿಗಳಿಗೆ ಅಮೃತದಂತಾಯಿತು. ಅವರು ಆನಂದದಿಂದ ಉಬ್ಬಿಹೋದರು. ಕೆಲವರು ಕುಪ್ಪಳಿಸಿದರು. ಕೆಲವರು ಕೀಯೆಂದು ಕೂಗಿದರು. ಕೆಲವರು ಸಿಂಹನಾದಮಾಡಿದರು. ಕೆಲವರು ಕಿಲಕಿಲ ಎಂದು ವಟಗುಟ್ಟಿದರು. ಕೆಲವರು ಗರ್ಜನೆಗೆ ಪ್ರತಿಗರ್ಜನೆ ಮಾಡಿದರು (೪೦-೪೧). ಕೆಲವು ಕಪಿವೀರರು ತಮ್ಮ ಉದ್ದನೆಯ ದಪ್ಪವಾದ ಬಾಲಗಳನ್ನು ನಿಮಿರಿಸಿ ನೆಲದಮೇಲೆ ಬಡಿಯುತ್ತಿದ್ದರು. ಇನ್ನು ಕೆಲವರು ಹಾರಿಬಂದು ಮಹಾದ್ರಿ ನೆಯಂತಿದ್ದ ಹನುಮಂತನನ್ನು ಅಪ್ಪಿಕೊಂಡು ಮೈಯನ್ನು ಸಂವರಿಸುತ್ತಿದ್ದರು! (೪೨-೪೩). ಅನಂತರ ಅಂಗದನು ಹನುಮಂತನನ್ನು ಕುರಿತು "ಹೇ ವಾನರೋತ್ತಮ, ಸತ್ತ್ವಪರಾಕ್ರಮಗಳಲ್ಲಿ ನಿನಗೆ ಸಮಾನರಾದವರು ಇನ್ನೊಬ್ಬ ರಿಲ್ಲ. ಇಷ್ಟು ವಿಸ್ತಾರವಾದ ಸಮುದ್ರವನ್ನು ದಾಟಿಹೋಗಿ ಹಿಂತಿರುಗಿ ಬಂದಿದ್ದೀಯೆ. ನಮ್ಮೆಲ್ಲರ ಪ್ರಾಣವನ್ನು ಉಳಿಸಿದೆ. ನಿನ್ನ ಅನುಗ್ರಹದಿಂದಲೇ ನಾವು ಕಾರ್ಯವನ್ನು ಸಾಧಿಸಿದಂತಾಯಿತು. ಈಗ ನಾವು ರಾಮನ ಹತ್ತಿರ ಹೋಗು ವಂತಾದುದು ನಿನ್ನಿಂದಲೇ (೪೪-೪೬). ಅಬ್ಬಾ! ನಿನ್ನ ಸ್ವಾಮಿಭಕ್ತಿ ಎಷ್ಟು! ವೀರ್ಯವೆಷ್ಟು! ಧೈರ್ಯವೆಷ್ಟು! ಯಶಸ್ವಿನಿಯಾದ ಶ್ರೀರಾಮನ ಪತ್ನಿಯನ್ನು ನಮ್ಮ ಭಾಗ್ಯದಿಂದ ನೀನು ನೋಡಿಬಂದೆ. ಇನ್ನು ಶ್ರೀರಾಮನಿಗೆ ಸೀತಾವಿರಹ ದುಃಖವು ಕಳೆದುಹೋಗುವುದು" ಎಂದನು (೪೭-೪೮). ಅನಂತರ ಕಪಿ ಗಳೆಲ್ಲರೂ ಹನುಮಂತ ಅಂಗದ ಜಾಂಬವಂತರನ್ನು ನಡುವೆ ಬಿಟ್ಟುಕೊಂಡು, ಸುತ್ತಲೂ ಹರಡಿದ್ದ ವಿಶಾಲವಾದ ಬಂಡೆಗಳಮೇಲೆ ಕುಳಿತರು. ಹನುಮಂತನು ಸಮುದ್ರವನ್ನು ದಾಟಿ ಲಂಕಾನಗರವನ್ನೂ ಸೀತೆಯನ್ನೂ ರಾವಣನನ್ನೂ ನೋಡಿಬಂದ ಕ್ರಮವನ್ನು ವಿಸ್ತಾರವಾಗಿ ಕೇಳಬೇಕೆಂಬ ಕುತೂಹಲದಿಂದ, ಅವರೆಲ್ಲರೂ ಕೈಕಟ್ಟಿಕೊಂಡು ಹನುಮಂತನ ಮುಖವನ್ನೇ ನೋಡುತ್ತಿದ್ದರು (೪೯-೫೦). ಅಲ್ಲಿ ಶ್ರೀಮಂತನಾದ ಅಂಗದಕುಮಾರನು ದೇವತೆಗಳಿಂದ ಪರಿವೃತನಾದ ದೇವೇಂದ್ರನಂತೆ, ವಾನರರಿಂದ ಪರಿವೃತನಾಗಿ ಕುಳಿತಿದ್ದನು. ಹೀಗೆ ಕೀರ್ತಿಯನ್ನು ಗಳಿಸಿದ ಹನುಮಂತನೂ ತೋಳುಗಳಲ್ಲಿ ಭುಜಕೀರ್ತಿ ಯನ್ನು ಧರಿಸಿದ್ದ ಅಂಗದಕುಮಾರನೂ ಸಂತೋಷದಿಂದ ಕುಳಿತಿರಲು, ಉನ್ನತ ವಾಗಿದ್ದ ಆ ಮಹೇಂದ್ರಪರ್ವತಕ್ಕೆ ಒಂದು ರಮಣೀಯವಾದ ಶೋಭೆಯುಂಟಾ ಯಿತು (೫೧-೫೩).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಐವತ್ತೇಳನೆಯ ಸರ್ಗ

## ಸರ್ಗ ೫೮

ಹನುಮಂತನು ಲಂಕೆಗೆ ಹೋಗಿಬಂದ ವೃತ್ತಾಂತವನ್ನು ವಾನರರಿಗೆ ಹೇಳುವುದು.

ಹೀಗೆ ಮಹೇಂದ್ರಪರ್ವತದ ಶಿಖರದಲ್ಲಿ ಹನುಮಂತನೇ ಮೊದಲಾದ ಕಪಿವೀರರು ಸಂತೋಷದಿಂದ ಕುಳಿತಿದ್ದರು. ಆಗ ಆನಂದಿತನಾದ ಜಾಂಬವಂತನು ಹನುಮಂತನನ್ನು ಕುರಿತು "ವತ್ಸ–ಆಂಜನೇಯ, ನೀನು ಸೀತಾದೇವಿಯನ್ನು ಹೇಗೆ ನೋಡಿದೆ? ಅವಳು ಯಾವ ಸ್ಥಿತಿಯಲ್ಲಿ ಇದ್ದಾಳೆ? ಕ್ರೂರನಾದ ರಾವಣನು ಅವಳ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತಿದ್ದಾನೆ?"(೧–೩). ಇದೆಲ್ಲವನ್ನೂ ವಿವರವಾಗಿ ತಿಳಿಸು. ಆ ದೇವಿಯನ್ನು ನೀನು ಹುಡುಕಿದ ಬಗೆ ಹೇಗೆ? ಅವಳು ನಿನಗೆ ಏನು ಹೇಳಿದಳು? ಇದೆಲ್ಲವನ್ನೂ ತಿಳಿದುಕೊಂಡು ಮುಂದೇನು ಮಾಡಬೇಕೆಂದು ಆಲೋಚಿಸೋಣ. ನಾವು ರಾಮನ ಹತ್ತಿರ 'ಏನನ್ನು ಹೇಳಬೇಕು–ಏನನ್ನು ಹೇಳಬಾರದು' ಎಂಬುದನ್ನು ನಮಗೆ ನೀನು ತಿಳಿಸಬೇಕು. ಈ ವಿಚಾರದಲ್ಲಿ ನೀನು ಬುದ್ಧಿಶಾಲಿ" ಎಂದನು (೪–೬). ಆಗ ಆಂಜನೇಯನಿಗೆ (ಸೀತೆಯ ಸ್ಮರಣೆಯಾಗಿ) ರೋಮಾಂಚವಾಯಿತು. ಅವನು ಸೀತಾದೇವಿಗೆ ತಲೆಬಾಗಿ ವಂದಿಸಿ ಹೇಳತೊಡಗಿದನು: "ಗೆಳೆಯರೆ, ನಾನು ಸಮುದ್ರವನ್ನು ಲಂಘಿಸುವುದಕ್ಕಾಗಿ ಈ ಮಹೇಂದ್ರಗಿರಿಶೃಂಗದಿಂದ ಆಕಾಶಕ್ಕೆ ಹಾರಿದುದನ್ನು ನೀವು ನೋಡಿದಿರಿ. ಮುಂದೆ ಹೋಗುತ್ತಿರುವಾಗ ಘೋರವಾದ ವಿಘ್ನ ಒಂದು ಸಂಭವಿಸಿದಂತೆ ಕಂಡುಬಂದಿತು (೭–೮). ದಾರಿಗೆ ಅಡ್ಡಲಾಗಿ ಒಂದು ಸುವರ್ಣಮಯವಾದ ಪರ್ವತಶಿಖರವು ಕಾಣಿಸಿತು. ಆ ಪರ್ವತವು ನನಗೆ ಅಡ್ಡಿಯಾಯಿತೆಂದು ಭಾವಿಸಿ, ಅದನ್ನು ಒಡೆದುಹಾಕಬೇಕೆಂದು ಮನಸ್ಸಿನಲ್ಲಿ ಗುಣಿಸಿದೆನು. ಕೂಡಲೇ ಬಾಲದಿಂದ ಅದನ್ನು ಅಪ್ಪಳಿಸಿ ಹೊಡೆದೆನು. ಅದರ ಶಿಖರವು ಸಾವಿರ ಚೂರಾಗಿ ಉರುಳಿಬಿತ್ತು (೯–೧೧). ಅಷ್ಟರಲ್ಲಿ ಆ ಪರ್ವತರಾಜನು ನನ್ನ ಉದ್ದೇಶವನ್ನು ಅರಿತು ಮನಸ್ಸಿಗೆ ಆಹ್ಲಾದಕರವಾದ ರೀತಿಯಲ್ಲಿ "ವತ್ಸ! ನಾನು ನಿನಗೆ ಚಿಕ್ಕಪ್ಪನೆಂದು* ತಿಳಿ. ನಿನ್ನ ತಂದೆಯಾದ ವಾಯುದೇವನ ಸ್ನೇಹಿತ ನಾನು. ನನ್ನ ಹೆಸರು ಮೈನಾಕ. ಈ ಸಮುದ್ರದಲ್ಲಿ ವಾಸವಾಗಿದ್ದೇನೆ (೧೨–೧೩). ಮಗು! ಹಿಂದೆ ಪರ್ವತಗಳಿಗೆ ರೆಕ್ಕೆಗಳಿದ್ದವು.

---

* ಚಿಕ್ಕಪ್ಪನಂತೆ ವಾತ್ಸಲ್ಯವನ್ನಿಟ್ಟವನು.

ಅವು ಸ್ವೇಚ್ಛೆಯಿಂದ ಹಾರಾಡುತ್ತ ಪ್ರಾಣಿಗಳಿಗೆ ಹಿಂಸೆಯನ್ನು ಕೊಡುತ್ತಿವು. ಪರ್ವತಗಳ ಚೇಷ್ಟೆಯನ್ನು ಕೇಳಿ ದೇವೇಂದ್ರನು ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನು ಕತ್ತರಿಸುತ್ತ ಬಂದನು (೧೪–೧೫). ಆಗ ಮಹಾತ್ಮನಾದ ನಿನ್ನ ತಂದೆಯು ನನ್ನನ್ನು ಈ ಸಮುದ್ರಕ್ಕೆ ತಂದುಹಾಕಿ ಕಾಪಾಡಿದನು. ಎಲೈ ವೀರನೆ, ಶ್ರೀರಾಮನಿಗೆ ಸಹಾಯಮಾಡಬೇಕಾದದ್ದು ನನ್ನ ಕರ್ತವ್ಯ. ಅವನು ಮಹಾಧರ್ಮಿಷ್ಠ. ದೇವೇಂದ್ರನಂತೆ ಪರಾಕ್ರಮಿ" ಎಂದು ಹೇಳಿದನು (೧೬–೧೭). ನಾನು ಆ ಮಹಾತ್ಮನ ಮಾತನ್ನು ಕೇಳಿದಮೇಲೆ ಅವನಿಗೆ ನನ್ನ ಕಾರ್ಯ ಗೌರವವನ್ನೂ ಮನಸ್ಸಿನ ಉದ್ವೇಗವನ್ನೂ ತಿಳಿಸಿದೆನು. (ಅಲ್ಲಿ ವಿಶ್ರಮಿಸದೆ) ಮುಂದೆ ಹೋಗುತ್ತೇನೆಂದು ಮೈನಾಕನನ್ನು ಒಪ್ಪಿಸಿದೆನು. ಮನುಷ್ಯಶರೀರ ವನ್ನು ಧರಿಸಿ ಮಾತನಾಡುತ್ತಿದ್ದ ಮೈನಾಕನು ಅಂತರ್ಧಾನಹೊಂದಿದನು. ಪರ್ವತವು ಸಮುದ್ರದಲ್ಲಿ ಮುಳುಗಿತು. ನಾನು ಇನ್ನೂ ಅತಿಶಯವೇಗದಿಂದ ಮುಂದಿನ ದಾರಿಯನ್ನು ಹಿಡಿದೆನು (೧೮–೨೦). ಅನಂತರ ಬಹಳ ಹೊತ್ತು ಪ್ರಯಾಣಮಾಡಿದಮೇಲೆ ನೋಡುತ್ತೇನೆ—ಸಮುದ್ರಮಧ್ಯದಲ್ಲಿ ನಾಗಮಾತೆ ಯಾದ ಸುರಸಾದೇವಿಯು ನಿಂತುಬಿಟ್ಟಿದ್ದಾಳೆ! ಅವಳು "ಎಲೈ ವಾನರ, ನೀನು ನನಗೆ ಆಹಾರವೆಂದು ದೇವತೆಗಳು ಹೇಳಿದ್ದಾರೆ. ಬಹುದಿನಗಳಮೇಲೆ ನನಗೆ ಸಿಕ್ಕಿದ್ದೀಯೆ. ನಿನ್ನನ್ನು ಭಕ್ಷಿಸಿಬಿಡುತ್ತೇನೆ" ಎಂದಳು (೨೧–೨೨). ಆಗ ನಾನು ಕೈಮುಗಿದುಕೊಂಡು ದೈನ್ಯಭಾವದಿಂದ "ದೇವಿ, ದಶರಥನ ಮಗ ನಾದ ಶ್ರೀರಾಮನು ಸೀತಾಲಕ್ಷ್ಮಣರೊಡನೆ ದಂಡಕಾರಣ್ಯಕ್ಕೆ ಬಂದನು. ದುರಾತ್ಮನಾದ ರಾವಣನು ಸೀತಾದೇವಿಯನ್ನು ಅಪಹರಿಸಿಬಿಟ್ಟನು(೨೩–೨೫). ನಾನು ರಾಮನ ಆಜ್ಞೆಯಂತೆ ದೂತನಾಗಿ ಅವಳ ಬಳಿಗೆ ಹೋಗುತ್ತಿದ್ದೇನೆ. ನೀನು ರಾಮರಾಜ್ಯದಲ್ಲಿ ಪ್ರಜೆಯಾಗಿರುವುದರಿಂದ ಅವನ ಕಾರ್ಯಕ್ಕೆ ಸಹಾಯ ಮಾಡಬೇಕು (೨೬). ಅಥವಾ ಮೈಥಿಲಿಯನ್ನು ಕಂಡಮೇಲೆ ಪುನಃ ರಾಮ ನನ್ನು ನೋಡಿ ನಾನೇ ಬಂದು ನಿನ್ನ ಬಾಯಿಗೆ ಸಿಗುತ್ತೇನೆ. ಆಣೆಯಿಟ್ಟು ಹೇಳುತ್ತೇನೆ. ಈ ಮಾತು ಸತ್ಯ" ಎಂದೆನು (೨೭). ಆಗ ಕಾಮರೂಪಿಣಿ ಯಾದ ಸುರಸೆಯು "ನನ್ನ ಕೈಗೆ ಸಿಕ್ಕಿದಮೇಲೆ ಯಾರೂ ತಪ್ಪಿಸಿಕೊಂಡು ಹೋಗಕೂಡದು. ಇದು ನನಗೆ ಒಂದು ವರ" ಎಂದಳು. ನಾನು ದೇಹವನ್ನು ಹತ್ತುಯೋಜನ ವಿಸ್ತಾರವಾಗಿ ಬೆಳೆಯಿಸಿಕೊಂಡು ಕ್ಷಣಕ್ಷಣಕ್ಕೂ ಇನ್ನೂ

ದೊಡ್ಡದಾಗಿ ಬೆಳೆಯಿಸುತ್ತ ಹೋದೆನು (೨೮–೨೯). ಸುರಸೆಯು ನನಗಿಂತಲೂ ದೊಡ್ಡದಾಗಿ ಬಾಯನ್ನು ತೆರಿಯುತ್ತಿದ್ದಳು. ನಾನು ಒಂದು ಕ್ಷಣದಲ್ಲಿ ದೇಹವನ್ನು ಹೆಬ್ಬೆರಳಿನಷ್ಟು ಚಿಕ್ಕದಾಗಿ ಮಾಡಿ ಅವಳ ಬಾಯೊಳಗೆ ನುಗ್ಗಿ, ಥಟ್ಟನೆ ಈಚೆಗೆ ಬಂದುಬಿಟ್ಟೆನು (೩೦–೩೧). ಆಗ ಸುರಸಾದೇವಿಯು ತನ್ನ ನಿಜರೂಪವನ್ನು ಧರಿಸಿ ನಿಂತು "ಹೇ ವಾನರೋತ್ತಮ! ನಿನ್ನ ಕಾರ್ಯಸಿದ್ಧಿಯಾಗಲಿ. ಸುಖವಾಗಿ ಪ್ರಯಾಣಮಾಡು. ವೈದೇಹಿಯನ್ನು ಕರೆತಂದು ಶ್ರೀರಾಮನೊಡನೆ ಸೇರಿಕೊಳ್ಳುವಂತೆ ಮಾಡು. ವೀರಾಗ್ರಣಿ, ನಿನಗೆ ಸುಖವಾಗಲಿ. ನಾನು ಮೆಚ್ಚಿದೆನು" ಎಂದಳು (೩೨–೩೩). ಅದನ್ನು ನೋಡುತ್ತಿದ್ದ ಸಮಸ್ತದೇವತೆಗಳೂ 'ಭಲೆ! ಭಲೆ!' ಎಂದು ನನ್ನನ್ನು ಕೊಂಡಾಡಿದರು. ನಾನು ಗರುಡನಂತೆ, ವಿಶಾಲವಾದ ಆಕಾಶದಲ್ಲಿ ಮುಂದಕ್ಕೆ ಹಾರಿಹೋದೆನು. ಸ್ವಲ್ಪ ಹೊತ್ತಿನಲ್ಲಿ ಯಾರೋ ನನ್ನ ನೆರಳನ್ನು ಜಗ್ಗಿ ಹಿಡಿದಂತಾಯಿತು. ನೋಡಿದರೆ ಯಾರೂ ಕಾಣಿಸಲಿಲ್ಲ. ನನ್ನ ವೇಗಕ್ಕೆ ಅಡ್ಡಿಯಾಯಿತು. ಹತ್ತು ದಿಕ್ಕುಗಳಲ್ಲಿಯೂ ಕಣ್ಣಿಟ್ಟು ನೋಡಿದೆನು (೩೪–೩೫). ನನ್ನ ಪ್ರಯಾಣವನ್ನು ತಡೆದು ನಿಲ್ಲಿಸಿದ ವಸ್ತು ಯಾವುದೆಂದು ಗೋಚರಿಸಲೇ ಇಲ್ಲ. 'ಎಲಾ! ಆಕಾಶದಲ್ಲಿ ನನಗೆ ಯಾರು ವಿಘ್ನವನ್ನು ಮಾಡುತ್ತಿರಬಹುದು? ಯಾವ ರೂಪವೂ ಕಾಣಿಸುವುದಿಲ್ಲ' ಎಂದು ಚಿಂತಿಸುತ್ತ ಕೆಳಗೆ ಸಮುದ್ರವನ್ನು ಗಮನಿಸಿ ನೋಡಿದೆನು (೩೬–೩೭). ಆಗ ಸಮುದ್ರದಮೇಲೆ ಒಬ್ಬ ಘೋರ ರಾಕ್ಷಸಿಯು ಮಲಗಿಕೊಂಡಿದ್ದಳು. ಅವಳು ನನ್ನನ್ನು ನೋಡಿ ಗಟ್ಟಿಯಾಗಿ ನಕ್ಕಳು. ನಾನು ಸ್ವಲ್ಪವೂ ಭಯಪಡದೆ ಹಾಗೆಯೇ ನಿಂತುಕೊಂಡೆನು. ಅವಳು ಕೆಟ್ಟಧ್ವನಿಯಲ್ಲಿ "ಎಲೈ ಭಾರಿ ಶರೀರದವನೆ! ಎಲ್ಲಿಗೆ ಹೋಗುತ್ತೀಯೆ? ನನಗೆ ಹಸಿವಾಗಿದೆ. ಒಳ್ಳೆಯ ಭಕ್ಷ್ಯವಾಗಿ ನೀನು ಸಿಕ್ಕಿದೆ. ನನ್ನ ದೇಹಕ್ಕೆ ಆಹಾರವಿಲ್ಲದೆ ಬಹಳ ದಿನವಾಯಿತು. ಇದಕ್ಕೆ ತೃಪ್ತಿಯನ್ನುಂಟುಮಾಡು" ಎಂದು ಕಿರಿಚಿದಳು. ನಾನು "ಒಳ್ಳೆಯದು; ಹಾಗೆಯೇ ಆಗಲಿ" ಎಂದು ಒಪ್ಪಿಕೊಂಡೆನು (೩೮–೪೦). ಕೂಡಲೇ ಅವಳ ಬಾಯಿಗಿಂತ ದೊಡ್ಡದಾಗಿ ನನ್ನ ದೇಹವನ್ನು ಬೆಳೆಯಿಸಿದೆನು. ಅವಳೂ ನನ್ನನ್ನು ನುಂಗಬೇಕೆಂದು ಇನ್ನೂ ದೊಡ್ಡದಾಗಿ ಬಾಯನ್ನು ಹಿಗ್ಗಿಸಿದಳು. ಅವಳಿಗೆ ನನ್ನ ಸಾಮರ್ಥ್ಯವಾಗಲಿ ನಾನು ಉದ್ದೇಶಿಸಿದ ಉಪಾಯವಾಗಲಿ ತಿಳಿಯಲಿಲ್ಲ. ಒಂದು ನಿಮಿಷದಲ್ಲಿ

ನನ್ನ ದೊಡ್ಡದೇಹವನ್ನು ಚಿಕ್ಕದಾಗಿ ಮಾಡಿಕೊಂಡು ಬಾಯೊಳಗೆ ನುಗ್ಗಿ ಅವಳ ಎದೆಯನ್ನು ಸೀಳಿ ಆಕಾಶಕ್ಕೆ ನೆಗೆದುಬಿಟ್ಟೆನು. ಆ ಪರ್ವತಾಕಾರದ ರಾಕ್ಷಸಿಯು ಕೈಚಾಚಿಕೊಂಡು ಸಮುದ್ರದಲ್ಲಿ ದೊಪ್ಪನೆ ಬಿದ್ದುಹೋದಳು (೪೧–೪೩). ಗಗನದಲ್ಲಿ ಸಂಚರಿಸುತ್ತಿದ್ದ ಸಿದ್ಧಚಾರಣರು "ಘೋರರಾಕ್ಷಸಿಯಾದ ಸಿಂಹಿಕೆಯನ್ನು ಹನುಮಂತನು ಕೊಂದುಬಿಟ್ಟನು" ಎಂದು ಹೇಳಿಕೊಳ್ಳುತ್ತಿದ್ದ ಮಾತು ನನಗೆ ಕೇಳಿಸಿತು. ಹೀಗೆ ಸಿಂಹಿಕೆಯನ್ನು ಕೊಂದುಹಾಕಿ, ಕಾಲವಿಳಂಬ ವಾಯಿತೆಂದು ಬಗೆಯುತ್ತ ಬಹುದೂರದವರೆಗೆ ಹಾರಿಹೋದೆನು (೪೪–೪೫). ಮುಂದೆ ಪರ್ವತನಿಬಿಡವಾದ ಸಮುದ್ರದ ದಕ್ಷಿಣತೀರವು ಗೋಚರಿಸಿತು. ಅಲ್ಲಿಯೇ ಲಂಕಾಪಟ್ಟಣವಿದೆ. ನಾನು ಸೂರ್ಯನು ಮುಳುಗಿದಮೇಲೆ ಬಲಾಢ್ಯರಾದ ರಾಕ್ಷಸರಿಗೆ ಕಾಣಿಸಿಕೊಳ್ಳದಂತೆ ಲಂಕಾನಗರವನ್ನು ಪ್ರವೇಶಿಸಿದೆನು (೪೬–೪೭). ಪ್ರವೇಶಮಾಡುತ್ತಿರುವಾಗ ಒಬ್ಬ ಹೆಂಗಸು ಪ್ರಳಯಕಾಲದ ಮೇಘದಂತೆ ಗರ್ಜಿಸುತ್ತ ಅಟ್ಟಹಾಸಮಾಡುತ್ತ ಎದುರಿಗೆ ಬಂದು ನಿಂತುಬಿಟ್ಟಳು! ಅವಳು ನನ್ನನ್ನು ಕೊಲ್ಲಬೇಕೆಂದಿದ್ದಳು. ಅವಳ ತಲೆಗೂದಲು ಬೆಂಕಿಯ ಜ್ವಾಲೆಯಂತಿತ್ತು. ನಾನು ಎಡಗೈಯಿಂದ ಆ ಭೈರವಿಯನ್ನು ಗುದ್ದಿದೆನು (೪೮–೪೯). ಆಕೆಯು ಹಿಂಜರಿದು ಹೆದರಿ "ಎಲೈ ವೀರನೆ, ನಾನು ಲಂಕಾಧಿದೇವತೆ. ನಿನ್ನ ಪರಾಕ್ರಮಕ್ಕೆ ನಾನು ಸೋತೆನು. ಆದ್ದರಿಂದ ನೀನು ಸಮಸ್ತರಾಕ್ಷಸರನ್ನೂ ಜಯಿಸುತ್ತೀಯೆ" ಎಂದು ಹೇಳಿದಳು. ಅನಂತರ ಇಡೀ ರಾತ್ರಿಯೆಲ್ಲಾ ಸೀತೆಯನ್ನು ಹುಡುಕುತ್ತ ಅವಳನ್ನು ಕಾಣದೆ ರಾವಣನ ಅಂತಃಪುರಕ್ಕೆ ಹೋದೆನು. ಅಲ್ಲಿ ಸೀತೆಯನ್ನು ಕಾಣಲಿಲ್ಲ. ಅವನ ಮನೆಯಲ್ಲಿ ಎಲ್ಲಿ ಹುಡುಕಿದರೂ ಸೀತೆಯು ಗೋಚರಿಸಲಿಲ್ಲ (೫೦–೫೨). ಶೋಕಸಮುದ್ರದಿಂದ ಪಾರಾಗುವ ದಾರಿಯೇ ನನಗೆ ತೋರಲಿಲ್ಲ. ಮುಂದೇನೆಂದು ಚಿಂತಿಸುತ್ತಿರುವಾಗ ವಿಶಾಲವಾದ ಸುವರ್ಣಪ್ರಾಕಾರದಿಂದ ಪರಿವೇಷ್ಟಿತವಾದ ರಾವಣನ ಉದ್ಯಾನವನವು ನನಗೆ ಕಂಡಿತು. ನಾನು ಆ ಪ್ರಾಕಾರದಮೇಲೆ ಧುಮುಕಿ, ವೃಕ್ಷಪಂಕ್ತಿಗಳಿಂದ ಶೋಭಿಸುತ್ತಿದ್ದ ಉದ್ಯಾನವನದಲ್ಲಿ ಹುಡುಕಲಾರಂಭಿಸಿದೆನು (೫೩–೫೪). ಅದೇ ಅಶೋಕವನ. ಅದರ ನಡುವೆ ಇದ್ದ ಒಂದು ದೊಡ್ಡ ಶಿಂಶಪಾವೃಕ್ಷವನ್ನೇರಿ ನೋಡುತ್ತಿರುವಾಗ, ಸುವರ್ಣಮಯವಾದ ಒಂದು ಬಾಳೆಯ ತೋಟವು ನನಗೆ ಕಾಣಿಸಿತು. ಅಷ್ಟರಲ್ಲಿ ನಾನು ಕುಳಿತಿದ್ದ ಶಿಂಶಪಾ

ವೃಕ್ಷಕ್ಕೆ ಸ್ವಲ್ಪ ದೂರದಲ್ಲಿ ಗೌರವರ್ಣದ ಒಬ್ಬ ಯುವತಿಯನ್ನು ಕಂಡೆನು. ಅವಳೇ ಸೀತಾದೇವಿ. ಅವಳ ಕಣ್ಣುಗಳು ತಾವರೆಯ ದಳದಂತೆ ಇದ್ದವು. ಉಪವಾಸದಿಂದ ಅವಳ ಮುಖವು ಬಾಡಿಹೋಗಿತ್ತು (೫೫–೫೬). ಸೀರೆಯೊಂದನ್ನೇ ಸುತ್ತಿಕೊಂಡಿದ್ದಳು. ತಲೆಗೂದಲು ಮಲಿನವಾಗಿತ್ತು. ದುಃಖದಿಂದ ಕೊರಗುತ್ತ, ತನ್ನ ಪತಿಯ ಹಿತವನ್ನೇ ಚಿಂತಿಸುತ್ತಿದ್ದಳು. ಸುತ್ತಲೂ ವಿಕಾರಿಗಳಾದ ಘೋರರಾಕ್ಷಸಿಯರು ಇದ್ದರು. ಅವರೆಲ್ಲರೂ ಮಾಂಸಾಹಾರಿಗಳು. ಹುಲಿಗಳು ಹೆಣ್ಣುಜಿಂಕೆಯನ್ನು ಸುತ್ತುವರಿಯುವಂತೆ, ಅವರು ಸೀತಾದೇವಿಯನ್ನು ಮುತ್ತಿಕೊಂಡು ಹೆದರಿಸುತ್ತಿದ್ದರು (೫೭–೫೮). ಸೀತೆಯಾದರೋ ಒಂಟಿ ಜಡೆಯನ್ನು ಧರಿಸಿ ದೈನ್ಯದಿಂದ ಗಂಡನನ್ನೇ ಧ್ಯಾನಿಸುತ್ತ ಇರುವಳು. ನೆಲದಮೇಲೆ ಮಲಗುತ್ತ, ಮೈಬಣ್ಣಗೆಟ್ಟು, ಚಳಿಗಾಲದ ತಾವರೆಯ ಬಳ್ಳಿಯಂತಾಗಿರುವಳು. ರಾವಣನ ದೆಸೆಯಿಂದ ಜೀವಿತದಲ್ಲಿ ನಿರಾಶಳಾಗಿ ಸಾಯಬೇಕೆಂದು ನಿಶ್ಚಯಿಸಿಬಿಟ್ಟಿದ್ದಳು (೫೯–೬೦). ಅಷ್ಟರಲ್ಲಿ ಹೇಗೋ ದೈವವಶದಿಂದ ನಾನು ಆ ಹರಿಣನೇತ್ರೆಯನ್ನು ಕಂಡೆನು. ಹಾಗಿದ್ದ ಆ ತರುಣಿಯು ಶ್ರೀರಾಮನ ಪತ್ನಿಯೆಂದು ನಿಶ್ಚಯಿಸಿ, ಶಿಂಶಪಾವೃಕ್ಷದಲ್ಲಿಯೇ ನೋಡುತ್ತ ಕುಳಿತೆನು. ಆಗ ರಾವಣನ ಅರಮನೆಯ ಕಡೆಯಿಂದ ಡಾಬು, ಕಾಲಂದಿಗೆಗಳ ಶಬ್ದದೊಡನೆ ಗಂಭೀರವಾದ ಕಲಕಲಧ್ವನಿಯು ಕೇಳಿಸಿತು (೬೧–೬೨). ನಾನು ಗಾಬರಿಯಿಂದ ರೂಪವನ್ನು ಮರೆಸಿಕೊಂಡು ಶಿಂಶಪಾವೃಕ್ಷದ ದಟ್ಟವಾದ ಎಲೆಗಳ ಸಂದಿನಲ್ಲಿ ಹಕ್ಕಿಯಂತೆ ಕುಳಿತುಕೊಂಡೆನು. ಆಗ ಸೀತಾದೇವಿ ಇದ್ದಲ್ಲಿಗೆ ಮಹಾಬಲಶಾಲಿಯಾದ ರಾವಣನೂ ಅವನ ಹೆಂಡತಿಯರೂ ಬಂದರು (೬೩–೬೪). ರಾವಣನು ಬರುತ್ತಿರುವುದನ್ನು ಕಂಡು ಸೀತೆಯು ತೊಡೆಗಳನ್ನು ಮಡಿಸಿ ತೋಳುಗಳಿಂದ ಎದೆಯನ್ನು ಮುಚ್ಚಿಕೊಂಡು ಕುಳಿತಳು. ಅವಳು ಹೆದರಿ ಆತಂಕದಿಂದ ಅತ್ತಿತ್ತ ನೋಡುತ್ತ, ಯಾವ ರಕ್ಷಣೆಯನ್ನೂ ಕಾಣದೆ ನಡುಗಲಾರಂಭಿಸಿದಳು (೬೫–೬೬). ಅನಾಥೆಯೂ ಪರಮ ದುಃಖಿತೆಯೂ ಆದ ಸೀತೆಯನ್ನು ಉದ್ದೇಶಿಸಿ ರಾವಣನು ಹೀಗೆಂದನು: "ಹೇ ಕೋಪನೆ, ನಿನಗೆ ತಲೆಬಾಗಿ ನಮಸ್ಕರಿಸುತ್ತೇನೆ. ನನ್ನ ಮಾತನ್ನು ನಡೆಸಿ ಮನ್ನಿಸು. ನೀನು ಗರ್ವದಿಂದ ನನ್ನನ್ನು ಮೆಚ್ಚದೆ ಇದ್ದರೆ, ಇನ್ನು ಎರಡು ತಿಂಗಳು ಅವಕಾಶವನ್ನು ಕೊಡುತ್ತೇನೆ. ಆಮೇಲೆ, ಎಲೆ ಸೀತೆ, ನಿನ್ನ ರಕ್ತವನ್ನು ಕುಡಿದುಬಿಡು

ತ್ತೇನೆ!" (೬೭–೬೯). ಆ ದುರಾತ್ಮನ ಮಾತನ್ನು ಕೇಳಿ ಸೀತೆಯು ಅತ್ಯಂತ ಕ್ರುದ್ಧಳಾದಳು. "ಎಲಾ ಅಧಮ, ಮಹಾತೇಜಸ್ವಿಯಾದ ಶ್ರೀರಾಮನ ಪತ್ನಿಗೆ, ಇಕ್ಷ್ವಾಕು ಕುಲನಾಥನಾದ ದಶರಥಮಹಾರಾಜನ ಸೊಸೆಗೆ, ಅವಾಚ್ಯವಾದ ಮಾತನ್ನಾಡುವೆಯಾ? ನಿನ್ನ ನಾಲಿಗೆ ಕಳಚಿ ಬಿದ್ದುಹೋಗಬಾರದೆ? (೭೦–೭೧). ಅನಾರ್ಯ–ಪಾಪಿ, ನನ್ನ ಗಂಡನು ಇಲ್ಲದ ಸಮಯದಲ್ಲಿ ಅವನಿಗೆ ಕಾಣಿಸಿಕೊಳ್ಳದಂತೆ ನನ್ನನ್ನು ಅಪಹರಿಸಿ ತಂದ ನಿನ್ನ ಪರಾಕ್ರಮ ಎಷ್ಟರದು? ನೀನು ರಾಮನಿಗೆ ಸಾಟಿಯಾಗುವುದಿರಲಿ, ಅವನ ದಾಸನಾಗುವುದಕ್ಕೆ ಕೂಡ ಯೋಗ್ಯನಲ್ಲ! ಅಜೇಯನೂ ಸತ್ಯಸಂಧನೂ ರಣಧೀರನೂ ಆದವನು ಶ್ರೀರಾಮ" ಎಂದು ಹೇಳಿದಳು (೭೨–೭೩). ಜಾನಕಿಯ ಈ ಕಠೋರವಾದ ನುಡಿಯನ್ನು ಕೇಳಿ ರಾವಣನು ಕೋಪದಿಂದ ಚಿತಾಗ್ನಿಯಂತೆ ಉರಿದೆದ್ದನು. ಅವನು ಕಣ್ಣುಗಳನ್ನು ತಿರುಗಿಸುತ್ತ ಬಲಗೈಮುಷ್ಟಿಯನ್ನೆತ್ತಿ, ಸೀತೆಯನ್ನು ಕೊಲ್ಲಬೇಕೆಂದು ನುಗ್ಗಿದನು. ಹೆಂಗಸರು ಹಾಹಾಕಾರಮಾಡಿದರು. ಥಟ್ಟನೆ ಆ ಹೆಂಗಸರ ಮಧ್ಯದಿಂದ ಮಂಡೋದರಿ* ಎಂಬ ರಾವಣನ ಹೆಂಡತಿಯು ಓಡಿಬಂದು ರಾವಣನನ್ನು ತಡೆದಳು (೭೪–೭೬). ಅವಳು ಕಾಮಪೀಡಿತನಾಗಿದ್ದ ರಾವಣನನ್ನು ಕುರಿತು ಮೃದುವಾದ ಮಾತಿನಿಂದ "ನೀನು ದೇವೇಂದ್ರನಂತಹ ಪರಾಕ್ರಮಿ. ಸೀತೆಯಿಂದ ಆಗಬೇಕಾದದ್ದೇನು? ದೇವ ಗಂಧರ್ವ ಕನ್ಯೆಯರೂ ಯಕ್ಷಕನ್ಯೆಯರೂ ನಿನಗೆ ಇದ್ದಾರೆ. ಮಹಾರಾಜ, ಅವರೊಡನೆ ವಿಹರಿಸು. ಸೀತೆ ಇಲ್ಲದಿದ್ದರೆ ನಿನಗೇನು?" ಎಂದು ಹೇಳಿದಳು (೭೭–೭೮). ಅನಂತರ ಆ ಹೆಂಗಸರೆಲ್ಲರೂ ಸೇರಿ ಅವನನ್ನು ಅರಮನೆಗೆ ಕರೆದುಕೊಂಡು ಹೋದರು. ರಾವಣನು ಹೊರಟುಹೋದಮೇಲೆ ಅಲ್ಲಿದ್ದ ಕೆಟ್ಟಮೋರೆಯ ರಾಕ್ಷಸಿಯರು ಭೀಕರವಚನಗಳಿಂದ ಸೀತೆಯನ್ನು ಬೆದರಿಸತೊಡಗಿದರು. ಜಾನಕಿಯು ಮಾತ್ರ ಅವರ ಮಾತನ್ನು ಹುಲ್ಲಿನಂತೆ ಕಡೆಗಣಿಸಿದಳು. ರಾಕ್ಷಸಿಯರ ಬೆದರಿಕೆ

* ಹಿಂದೆ ಇಪ್ಪತ್ತೆರಡನೆಯ ಸರ್ಗದಲ್ಲಿ ಧಾನ್ಯಮಾಲಿನಿಯು ತಡೆದುದಾಗಿ ಹೇಳಿದೆ. ಈಗ ಮಂಡೋದರಿಯು ತಡೆದುದಾಗಿ ಹೇಳಿದೆ. ಆದ್ದರಿಂದ ಇಬ್ಬರೂ ಬಂದು ತಡೆದರೆಂದು ತಿಳಿಯಬೇಕು. ಅಥವಾ ಮಂಡೋದರಿಗೆ ಧಾನ್ಯಮಾಲಿನಿ ಎಂದು ಇನ್ನೊಂದು ಹೆಸರು ಇದ್ದಿರಬಹುದು. ಹೆಸರು ತಿಳಿಯದೆ ಹನುಮಂತನು ತಪ್ಪಾಗಿ ಹೇಳಿದ್ದರೂ ಇರಬಹುದು.

ಯೆಲ್ಲವೂ ನಿಷ್ಫಲವಾಯಿತು (೭೯–೮೧). ತನ್ನ ಆರ್ಭಟಗಳೆಲ್ಲಾ ನಿಷ್ಫಲ ವಾದಮೇಲೆ, ಮಾಂಸಭಕ್ಷಕರಾದ ಆ ರಾಕ್ಷಸಿಯರು ಸೀತೆಯ ದೃಢನಿಶ್ಚಯವನ್ನು ರಾವಣನಿಗೆ ಹೋಗಿ ತಿಳಿಸಿದರು. ರಾಕ್ಷಸಿಯರಿಗೆ ಮುಂದೇನು ಮಾಡಬೇಕೆಂದು ತೋರಲಿಲ್ಲ. ಅವರು ಮಲಗಿ ನಿದ್ರಿಸಿಬಿಟ್ಟರು (೮೨–೮೩). ಸೀತೆಯು ತನ್ನ ದುಃಖವನ್ನು ತೋಡಿಕೊಳ್ಳುತ್ತ ಅಳುತ್ತಿದ್ದಳು. ಆಗ ತ್ರಿಜಟೆ ಎಂಬವಳು ಎಚ್ಚತ್ತು ರಾಕ್ಷಸಿಯರನ್ನು ಕುರಿತು "ಎಲೈ ಕೆಟ್ಟ ಹೆಂಗಸರೆ! ನೀವು ನಿಮ್ಮನ್ನೇ ಸದ್ಯದಲ್ಲಿ ತಿನ್ನಬೇಕಾಗುತ್ತದೆ! ಸೀತೆಯು ಎಂದಿಗೂ ಸಾಯುವುದಿಲ್ಲ (೮೪–೮೫). ಇವಳು ಜನಕರಾಜನ ಪುತ್ರಿ. ದಶರಥಮಹಾರಾಜನ ಸೊಸೆ. ಮಹಾ ಪತಿವ್ರತೆ. ನಾನು ಒಂದು ಭಯಂಕರವಾದ ವೈನವಿರೇಳಿಸುವ ಕನಸನ್ನು ಕಂಡೆ. ಅದು ರಾಕ್ಷಸರಿಗೆ ಸರ್ವನಾಶವನ್ನೂ ಇವಳ ಗಂಡನಿಗೆ ವಿಜಯವನ್ನೂ ಸೂಚಿಸು ತ್ತಿದೆ. ಮುಂದೆ ರಾಮನಿಂದಾಗುವ ವಿಪತ್ತಿನಿಂದ ಪಾರಾಗಬೇಕಾದರೆ ನಮಗೆ ಇವಳೇ ಗತಿ (೮೬–೮೭). ಈ ಸೀತೆಯನ್ನು ಮರೆಹೊಕ್ಕು ಬೇಡಿಕೊಳ್ಳು ವುದೇ ಸರಿ ಎಂದು ನನಗೆ ತೋರುತ್ತದೆ. ಈಕೆಯು ಕಷ್ಟದಲ್ಲಿದ್ದಾಗ ನನಗೆ ಇಂತಹ ದುಃಸ್ವಪ್ನವಾದ್ದರಿಂದ, ಈಕೆಯು ಎಲ್ಲಾ ಕಷ್ಟಗಳಿಂದಲೂ ಬಿಡುಗಡೆ ಹೊಂದಿ ಸುಖವನ್ನು ಪಡೆಯುವಳು. ನಾವು ಶರಣಾದರೆ ಜಾನಕಿಯು ಪ್ರಸನ್ನ ಳಾಗುತ್ತಾಳೆ" ಎಂದಳು (೮೮–೮೯). ತನ್ನ ಪತಿಗೆ ವಿಜಯವಾಗುವುದೆಂಬ ಮಾತನ್ನು ಕೇಳಿ ಸೀತೆಗೆ ಆನಂದವಾಯಿತು. ಆ ಬಾಲೆಯು ನಾಚುತ್ತ "ತ್ರಿಜಟೆಯ ಮಾತು ಸತ್ಯವಾದರೆ ನಿಮ್ಮನ್ನು ರಕ್ಷಿಸುವೆನು" ಎಂದಳು. ಸೀತೆಯ ಕಷ್ಟವನ್ನು ನೋಡುತ್ತಲಿದ್ದ ನನ್ನ ಮನಸ್ಸಿಗೆ ನೆಮ್ಮದಿಯೇ ಇರಲಿಲ್ಲ (೯೦–೯೧). ಅವಳೊಡನೆ ಹೇಗೆ ಮಾತನ್ನಾರಂಭಿಸಬೇಕೆಂದು ಆಲೋಚಿಸು ತ್ತಿದ್ದೆನು. (ರಾಕ್ಷಸಿಯರು ಮತ್ತೆ ನಿದ್ರಿಸಿಬಿಟ್ಟರು.) ಆಗ ನಾನು ಇಕ್ಷ್ವಾಕುವಂಶ ವನ್ನು ಮುಂದಿಟ್ಟು ರಾಮನನ್ನು ಹೊಗಳಲಾರಂಭಿಸಿದೆನು. ರಾಜರ್ಷಿಗಳೆಲ್ಲ ರಿಗೂ ಸಮ್ಮತವಾದ ಮಾತನ್ನೇ ನಾನು ಆಡಿದೆ. ಅದನ್ನು ಕೇಳಿ ದೇವಿಯು ಕಣ್ಣೀರು ತುಂಬಿಕೊಂಡು ನನ್ನ ಕಡೆಗೆ ನೋಡುತ್ತ ಹೀಗೆಂದಳು (೯೨–೯೩): "ಹೇ ವಾನರೋತ್ತಮ, ನೀನು ಯಾರು? ಇಲ್ಲಿಗೇಕೆ ಬಂದೆ? ರಾಮನಲ್ಲಿ ನಿನಗೆ ಇಷ್ಟೊಂದು ಪ್ರೀತಿಯಿರಲು ಕಾರಣವೇನು? ತಿಳಿಸು" (೯೪). ಆಗ ನಾನು ಹೀಗೆ ಹೇಳಿದೆ: "ದೇವಿ, ನಿನ್ನ ಪತಿಯಾದ ಶ್ರೀರಾಮನಿಗೆ ಸುಗ್ರೀವ

ನೆಂಬ ವಾನರೇಂದ್ರನು ಮಿತ್ರನಾಗಿದ್ದಾನೆ. ಸುಗ್ರೀವನು ಮಹಾಪರಾಕ್ರಮಿ. ನಾನು ಆತನ ಭೃತ್ಯ. ನನ್ನ ಹೆಸರು ಹನುಮಂತ (೯೫–೯೬). ನಿನ್ನ ಪತಿಯಾದ ರಾಮನು ನನ್ನನ್ನು ಇಲ್ಲಿಗೆ ಕಳಿಸಿದ್ದಾನೆ. ದಶರಥಪುತ್ರನಾದ ಆ ವೀರನು ಗುರುತಿಗಾಗಿ, ತಾನೇ ಈ ಉಂಗುರವನ್ನು ಕೊಟ್ಟು ಕಳಿಸಿದ್ದಾನೆ. ದೇವಿ, ನಾನು ಮಾಡಬೇಕಾದ ಕೆಲಸವೇನು? ಆಜ್ಞಾಪಿಸು. ರಾಮಲಕ್ಷ್ಮಣ ರಿದ್ದಲ್ಲಿಗೆ ನಿನ್ನನ್ನು ಕರೆದುಕೊಂಡು ಹೋಗಲಿ?" ಎಂದೆನು (೯೭–೯೯). ಆಗ ಜಾನಕಿಯು "ಶ್ರೀರಾಮನೇ ಬಂದು ರಾವಣನನ್ನು ಸಂಹರಿಸಿ ನನ್ನನ್ನು ಕರೆದು ಕೊಂಡು ಹೋಗಲಿ" ಎಂದುಬಿಟ್ಟಳು! ನಾನು ಆ ಪೂಜ್ಯಳಿಗೆ ನಮಸ್ಕಾರಮಾಡಿ "ದೇವಿ, ಹಾಗಾದರೆ ಶ್ರೀರಾಮನ ಮನಸ್ಸಿಗೆ ಹರ್ಷವನ್ನು ಕೊಡತಕ್ಕ ಯಾವು ದಾದರೂ ಗುರುತೊಂದನ್ನು ಕೊಡು" ಎಂದು ಕೇಳಿಕೊಂಡೆನು(೧೦೦–೧೦೧). ಆಗ ಸೀತಾದೇವಿಯು "ಈ ಚೂಡಾಮಣಿಯನ್ನು ಶ್ರೀರಾಮನಿಗೆ ಕೊಡು. ಆ ಮಹಾಬಾಹುವು ನಿನ್ನನ್ನು ಗೌರವಿಸುವನು" ಎಂದು ಹೇಳಿ ತನ್ನ ಚೂಡಾ ರತ್ನವನ್ನು ನನಗೆ ಕೊಟ್ಟಳು. ಅದೊಂದು ಅದ್ಭುತವಾದ ರತ್ನ. ಅಲ್ಲದೆ ರಾಮ ನಿಗೆ ತಿಳಿಸಬೇಕೆಂದು ದುಃಖದಿಂದ ಉಮ್ಮಳಿಸುತ್ತ ಕೆಲವು ಮಾತುಗಳನ್ನು ಹೇಳಿ ಕಳಿಸಿದ್ದಾಳೆ. ಆಮೇಲೆ ನಾನು ರಾಜಪುತ್ರಿಗೆ ಪ್ರದಕ್ಷಿಣ ನಮಸ್ಕಾರಮಾಡಿ, ಹೊರಡಲು ಸಿದ್ಧನಾದೆನು. ಸೀತೆಯು ಮತ್ತೆ ಏನನ್ನೋ ನಿಶ್ಚಯಿಸಿ ಹೀಗೆಂದಳು (೧೦೨–೧೦೪): "ಹನುಮಂತ, ನನ್ನ ವೃತ್ತಾಂತವನ್ನು ಶ್ರೀರಾಮನಿಗೆ ತಿಳಿಸು. ಇದನ್ನು ಕೇಳಿದಕೂಡಲೆ ರಾಮಲಕ್ಷ್ಮಣರಿಬ್ಬರೂ ಸುಗ್ರೀವನೊಡನೆ ಇಲ್ಲಿಗೆ ಬರುವಹಾಗೆ ಮಾಡು ಇಲ್ಲದಿದ್ದರೆ ಇನ್ನು ಎರಡೇ ತಿಂಗಳು ನಾನು ಬದುಕಿರುವುದು. ಆಮೇಲೆ ಶ್ರೀರಾಮನು ನನ್ನನ್ನು ನೋಡಲಾರ. ದಿಕ್ಕಿಲ್ಲದವಳಂತೆ ಸತ್ತುಹೋಗುತ್ತೇನೆ" ಎಂದಳು. ಕರುಳನ್ನೇ ಕೊರೆಯುವ ಆ ಮಾತನ್ನು ಕೇಳಿ ನನಗೆ (ರಾವಣನಮೇಲೆ) ರೋಷ ಉಕ್ಕಿ ಬಂದಿತು (೧೦೫–೧೦೭). ಅನಂತರ ನಾನು ಮಾಡಬೇಕಾದದ್ದು ಇನ್ನೇನೆಂದು ಆಲೋಚಿಸಿದೆನು. ನನ್ನ ದೇಹವು ಪರ್ವತಾಕಾರವಾಗಿ ಬೆಳೆದು ನಿಂತಿತು. ರಾಕ್ಷಸರೊಡನೆ ಯುದ್ಧಮಾಡಬೇಕೆಂದು ಇಚ್ಛೆಯಾಯಿತು. ಕೂಡಲೇ ಅಶೋಕ ವನವನ್ನು ಧ್ವಂಸಮಾಡಲಾರಂಭಿಸಿದೆನು. ಅಲ್ಲಿದ್ದ ಮೃಗಪಕ್ಷಿಗಳು ಓಡಿಹೋದವು (೧೦೮–೧೦೯). ಆಗ ಕೆಟ್ಟಮೋರೆಯ ಆ ರಾಕ್ಷಸಿಯರಿಗೆ ಎಚ್ಚರವಾಗಲು,

ಅವರು ಅತ್ತಿತ್ತ ಓಡುತ್ತಿರುವಾಗ, ನನ್ನನ್ನು ಕಂಡರು. ಅವರು ರಾವಣನ ಹತ್ತಿರಕ್ಕೆ ಓಡಿಹೋಗಿ "ಮಹಾರಾಜ, ಯಾವುದೋ ಒಂದು ಕೆಟ್ಟ ಕಪಿಯು ಬಂದು ಅಶೋಕವನವನ್ನು ನಾಶಮಾಡಿಬಿಟ್ಟಿದೆ. ಅದಕ್ಕೆ ನಿನ್ನ ಪರಾಕ್ರಮ ಗೊತ್ತಿಲ್ಲ! ಆ ದುರ್ಬುದ್ಧಿಯ ಕೋಡಗವನ್ನು ವಧಿಸಬೇಕೆಂದು ಆಜ್ಞಾಪಿಸು. ಅದು ಹಾಳಾಗಿಹೋಗಲಿ" ಎಂದು ಹೇಳಿರಬೇಕು! (೧೧೦-೧೧೩). ಆಗ ರಾವಣನು ಶೂರರಾದ ಕಿಂಕರರೆಂಬ ರಾಕ್ಷಸರನ್ನು ನನ್ನ ಮೇಲೆ ಯುದ್ಧಕ್ಕೆ ಕಳುಹಿಸಿದನು. ಅವರು ಎಂಭತ್ತುಸಾವಿರ ಜನರಿದ್ದರು. ಶೂಲ, ಮುದ್ಗರ— ಮುಂತಾದ ಆಯುಧಗಳನ್ನು ಹಿಡಿದು ಬಂದಿದ್ದರು. ನಾನು ಅಶೋಕವನದ ಮಹಾದ್ವಾರದ ಅಗುಳಿಯನ್ನು ಕಿತ್ತುಕೊಂಡು ಅವರನ್ನು ಒಡಿದು ಕೊಂದೆನು. ಸತ್ತುಳಿದ ಕೆಲವು ರಾಕ್ಷಸರು ರಾವಣನ ಬಳಿಗೆ ಓಡಿಹೋದರು (೧೧೪-೧೧೫). ದೊಡ್ಡ ಸೇನೆಯನ್ನೇ ನಾನು ಕೊಂದೆನೆಂದು ಅವನಿಗೆ ತಿಳಿಸಿದರು. ಅಷ್ಟರಲ್ಲಿ ನನಗೆ ಇನ್ನೊಂದು ಆಲೋಚನೆಯು ಬಂದು, ಚೈತ್ಯಪ್ರಾಸಾದವೆಂಬ ದೊಡ್ಡ ಗೋಪುರದಮೇಲೆ ಹಾರಿದೆನು. ಅದರ ಒಂದು ಕಂಭವನ್ನು ಕಿತ್ತುಕೊಂಡು ಅಲ್ಲಿದ್ದ ನೂರುಮಂದಿ ಕಾವಲುಗಾರರನ್ನು ಕೊಂದುಹಾಕಿದೆನು. ಲಂಕಾನಗರಕ್ಕೆ ಅಲಂಕಾರಪ್ರಾಯವಾದ ಆ ಮಂದಿರವನ್ನು ಮುರಿದುಹಾಕಿದೆನು (೧೧೬-೧೧೭). ಪ್ರಹಸ್ತ ಎಂಬವನು ರಾವಣನ ಮಂತ್ರಿ. ಅವನ ಮಗ ಜಂಬುಮಾಲಿ. ಅವನು ಬಲಾಢ್ಯನೂ ಯುದ್ಧಕೋವಿದನೂ ಆದ ರಾಕ್ಷಸ. ಆಮೇಲೆ ಅವನು ಬಹುಮಂದಿ ಘೋರರಾಕ್ಷಸರೊಡನೆ ಯುದ್ಧಕ್ಕೆ ಬಂದನು. ನಾನು ಅದೇ ಅಗುಳಿಯಿಂದ ಅವನನ್ನೂ ಅವನ ಸೈನ್ಯವನ್ನೂ ಧ್ವಂಸಮಾಡಿದೆನು (೧೧೮-೧೧೯). ಅದನ್ನು ಕೇಳಿ ರಾವಣನು ಬಲಶಾಲಿಗಳಾದ ಏಳು ಮಂದಿ ಮಂತ್ರಿಪುತ್ರರನ್ನು ಕಾಲಾಳುಗಳೊಂದಿಗೆ ಕಳುಹಿಸಿದನು. ಅವರೆಲ್ಲರನ್ನೂ ಅದೇ ಪರಿಘದಿಂದ ಹೊಡೆದು ಯಮಲೋಕಕ್ಕೆ ಕಳುಹಿಸಿಕೊಟ್ಟೆನು. ಅದನ್ನು ಕೇಳಿದ ಮೇಲೆ ರಾವಣನು ಐವರು ಸೇನಾಪತಿಗಳನ್ನು ಯುದ್ಧಕ್ಕೆ ಕಳುಹಿಸಿದನು. ನಾನು ಅವರೆಲ್ಲರನ್ನೂ ಸೈನ್ಯಸಮೇತವಾಗಿ ನಾಶಮಾಡಿದೆನು (೧೨೦-೧೨೨). ಅನಂತರ ರಾವಣನು ತನ್ನ ಮಗನಾದ ಅಕ್ಷಕುಮಾರನನ್ನೇ ಅನೇಕ ರಾಕ್ಷಸ ಭಟರೊಡನೆ ಕಳುಹಿಸಿಬಿಟ್ಟನು. ಅಕ್ಷಕುಮಾರನು ಮಂಡೋದರಿಯ ಮಗ. ರಣಪಂಡಿತ. ಅವನು ಆಕಾಶಕ್ಕೆ ನೆಗೆಯುತ್ತಿರುವಾಗ, ಗಪ್ಪನೆ ಅವನ ಕಾಲು

ಗಳೆರಡನ್ನೂ ಹಿಡಿದು ಗಿರ್ರನೆ ನೂರಾರು ಸಲ ತಿರುಗಿಸಿ ಅಪ್ಪಳಿಸಿ ಕೊಂದು ಬಿಟ್ಟೆನು. ಅಕ್ಷಕುಮಾರನು ಸತ್ತ ಸುದ್ದಿ ರಾವಣನಿಗೆ ಮುಟ್ಟಿತು (೧೨೩–೧೨೫). ಅವನು ಅತ್ಯಂತ ಕ್ರುದ್ಧನಾಗಿ ಇಂದ್ರಜಿತ್ ಎಂಬ ಇನ್ನೊಬ್ಬ ಮಗನನ್ನು ನನ್ನ ಮೇಲೆ ಕಳುಹಿಸಿದನು. ಅವನು ಮಹಾಶೂರ. ಯುದ್ಧವೆಂದರೆ ಅವನಿಗೆ ಮದವೇರುತ್ತದೆ. ನಾನು ಅವನ ಸೈನ್ಯವನ್ನೆಲ್ಲಾ ಕಂಗೆಡಿಸಿ, ಅವನ ಪರಾಕ್ರಮ ವನ್ನು ಅಡಗಿಸಿ ಹರ್ಷದಿಂದ ಉಬ್ಬಿದೆನು (೧೨೬–೧೨೭). ಆದರೆ ಇಂದ್ರಜಿತ್ತು ರಣಮಲ್ಲ. ಅವನು ನನ್ನನ್ನು ಗೆಲ್ಲುತ್ತಾನೆಂಬ ದೃಢವಿಶ್ವಾಸದಿಂದ ರಾವಣನು ಅವನನ್ನು ಮಹಾಪರಾಕ್ರಮಿಗಳಾದ ರಾಕ್ಷಸರೊಡನೆ ಕಳುಹಿಸಿದ್ದನು. ಇಂದ್ರಜಿತ್ತಿಗೆ ನಾನು ಅಜೇಯನೆಂಬುದು ಗೊತ್ತಾಯಿತು. ತನ್ನ ಸೈನ್ಯವೂ ಕಂಗೆಟ್ಟುಹೋಗಿತ್ತು. ಅದನ್ನರಿತು ಆತನು ಮಹಾವೇಗದಿಂದ ಬ್ರಹ್ಮಾಸ್ತ್ರ ವನ್ನು ಪ್ರಯೋಗಿಸಿ ನನ್ನನ್ನು ಬಂಧಿಸಿದನು (೧೨೮–೧೨೯). ಆಮೇಲೆ ರಾಕ್ಷಸರು ಹಗ್ಗಗಳಿಂದ ನನ್ನನ್ನು ಕಟ್ಟಿ ರಾವಣನ ಬಳಿಗೆ ಕರೆದೊಯ್ದರು. ದುರಾತ್ಮನಾದ ರಾವಣನು ನನ್ನನ್ನು ನೋಡಿ ಮಾತನಾಡಿದನು. ಲಂಕಾ ನಗರಕ್ಕೆ ಬಂದುದಕ್ಕೂ ರಾಕ್ಷಸರನ್ನು ವಧಿಸಿದುದಕ್ಕೂ ಕಾರಣವೇನೆಂದು ವಿಚಾರಿಸಿದನು (೧೩೦–೧೩೧). ಅದೆಲ್ಲವನ್ನೂ ಸೀತಾದೇವಿಗೋಸ್ಕರ ಮಾಡಿದೆನೆಂದು ನಾನು ಸ್ಪಷ್ಟವಾಗಿ ತಿಳಿಸಿದೆನು. "ಎಲೈ ರಾಜನೆ, ಸೀತಾ ದೇವಿಯನ್ನು ನೋಡುವುದಕ್ಕಾಗಿಯೇ ನಾನು ನಿನ್ನ ಮನೆಗೆ ಬಂದೆನು. ನಾನು ವಾಯುದೇವನ ಔರಸಪುತ್ರ. ವಾನರಜಾತಿಗೆ ಸೇರಿದವನು. ನನ್ನ ಹೆಸರು ಹನುಮಂತ. ಶ್ರೀರಾಮನಿಗೆ ದೂತನಾಗಿ ಬಂದಿದ್ದೇನೆ. ಸುಗ್ರೀವನ ಮಂತ್ರಿ ನಾನು (೧೩೨–೧೩೩). ರಾಮನ ದೂತಕಾರ್ಯಕ್ಕಾಗಿ ನಿನ್ನ ಬಳಿಗೆ ಬಂದಿ ದ್ದೇನೆ. ಮಹಾತೇಜಸ್ವಿಯಾದ ಸುಗ್ರೀವಮಹಾರಾಜನು ನಿನ್ನ ಯೋಗಕ್ಷೇಮ ವನ್ನು ವಿಚಾರಿಸಿದ್ದಾನೆ. ಅವನು ಧರ್ಮಾರ್ಥಕಾಮಸಹಿತವಾದ ಕೆಲವು ಹಿತವಚನಗಳನ್ನು ನಿನಗೆ ಹೇಳಿಕಳುಹಿಸಿದ್ದಾನೆ (೧೩೪–೧೩೫). ಏನೆಂದರೆ, 'ರಾವಣ, ನಾನು ಋಷ್ಯಮೂಕಪರ್ವತದಲ್ಲಿರುವಾಗ ರಣಧೀರನಾದ ಶ್ರೀರಾಮನ ಸ್ನೇಹವಾಯಿತು. ಅವನು ತನ್ನ ಪತ್ನಿಯನ್ನು ರಾಕ್ಷಸನೊಬ್ಬನು ಅಪಹರಿಸಿದ್ದಾ ನೆಂದೂ ಅವಳನ್ನು ಹುಡುಕುವುದಕ್ಕೆ ಎಲ್ಲಾ ವಿಧದಲ್ಲಿಯೂ ಸಹಾಯಮಾಡ ಬೇಕೆಂದೂ ನನ್ನನ್ನು ಕೇಳಿಕೊಂಡನು. ನಾನು ವಾಲಿಯನ್ನು ಮೊದಲು ಸಂಹರಿಸ

ಬೇಕೆಂದೂ ಆ ವಿಷಯದಲ್ಲಿ ಶಪಥಮಾಡಿಕೊಟ್ಟರೆ ನಿನಗೆ ಸಹಾಯಮಾಡು ತ್ತೇನೆಂದೂ ರಾಮನಿಗೆ ಹೇಳಿದೆನು (೧೩೬–೧೩೮). ಆಗ ರಾಮನು ಲಕ್ಷ್ಮಣ ಸಮೇತನಾಗಿ ನನ್ನೊಡನೆ ಅಗ್ನಿಸಾಕ್ಷಿಕವಾಗಿ ಸ್ನೇಹವನ್ನು ಬೆಳೆಯಿಸಿ, ಒಂದೇ ಬಾಣದಿಂದ ವಾಲಿಯನ್ನು ಸಂಹಾರಮಾಡಿದ್ದಾನೆ. ಆಮೇಲೆ ನನ್ನನ್ನು ಕಪಿರಾಜ್ಯಕ್ಕೆ ಅಧೀಶ್ವರನನ್ನಾಗಿ ಮಾಡಿದ್ದಾನೆ. ಈಗ ನಾವು ಸಕಲ ವಿಧ ದಿಂದಲೂ ರಾಮನಿಗೆ ಸಹಾಯಮಾಡಬೇಕಾಗಿದೆ (೧೩೯–೧೪೦). ಆದ್ದರಿಂದ ಈ ಹನುಮಂತನನ್ನು ನಿನ್ನ ಸಮೀಪಕ್ಕೆ ಕಳುಹಿಸಿದ್ದೇವೆ. ನೀನು ಧರ್ಮ ಮರ್ಯಾದೆಯನ್ನು ಪಾಲಿಸಿ, ಒಡನೆಯೇ ಸೀತೆಯನ್ನು ರಾಘವನಿಗೆ ತಂದು ಒಪ್ಪಿಸಿಬಿಡು. ಇಲ್ಲದಿದ್ದರೆ ಕಪಿವೀರರು ನಿನ್ನ ಸೇನೆಯನ್ನು ಧ್ವಂಸಮಾಡು ವರು. ಇವರ ಸಾಮರ್ಥ್ಯವು ಯಾರಿಗೆ ತಾನೇ ತಿಳಿದಿಲ್ಲ? (೧೪೧–೧೪೨). ಈ ಕಪಿವೀರರು ದೇವತೆಗಳ ಪ್ರಾರ್ಥನೆಯಂತೆ ಅವರಿಗೂ ಕೂಡ ಯುದ್ಧದಲ್ಲಿ ಸಹಾಯಮಾಡುತ್ತಿದ್ದಾರೆ.” ಈ ರೀತಿಯಲ್ಲಿ ಸುಗ್ರೀವರಾಜನು ಹೇಳಿಕಳುಹಿಸಿ ದ್ದಾನೆಂದೂ ಹೇಳಿದೆನು. ಅದನ್ನು ಕೇಳಿ ರಾವಣನು ರೋಷದಿಂದ ಸುಟ್ಟು ಬಿಡುವಹಾಗೆ ದುರದುರನೆ ನೋಡುತ್ತ, ನನ್ನನ್ನು ಕೊಂದುಬಿಡುವಂತೆ ದೂತ ರಿಗೆ ಆಜ್ಞಾಪಿಸಿದನು (೧೪೩–೧೪೪). ಆ ದುರಾತ್ಮನಿಗೆ ನನ್ನ ಸಾಮರ್ಥ್ಯವು ತಿಳಿಯದೆ ಹೋಯಿತು. ಆತನಿಗೆ ವಿಭೀಷಣನೆಂಬ ಬುದ್ಧಿಶಾಲಿಯಾದ ತಮ್ಮ ಇದ್ದಾನೆ. ಅವನು ರಾಕ್ಷಸರಾಜನನ್ನು ಕುರಿತು ನನಗೋಸ್ಕರ ಬಹು ಪರಿಯಲ್ಲಿ ಬೇಡಿಕೊಂಡನು. “ಮಹಾರಾಜ, ಹೀಗೆ ಮಾಡಬಾರದು. ಈ ನಿರ್ಧಾರವನ್ನು ತ್ಯಜಿಸಿಬಿಡು (೧೪೫–೧೪೬). ನೀನು ಹೋಗುತ್ತಿರುವುದು ರಾಜನೀತಿಗೆ ವಿರುದ್ಧವಾದ ದಾರಿ. ರಾಜನೀತಿಶಾಸ್ತ್ರದಲ್ಲಿ ದೂತವಧೆಯನ್ನು ಎಲ್ಲಿಯೂ ಹೇಳಿಲ್ಲ. ದೂತನಾದವನು ಹಿತವನ್ನು ಹೇಳುವುದಕ್ಕಾಗಿ ಇದ್ದ ಸಂಗತಿಯನ್ನು ಇದ್ದಂತೆ ಹೇಳುವುದು ಕರ್ತವ್ಯ. ದೂತನು ಎಂತಹ ಅಪರಾಧಮಾಡಿದರೂ ಅಂಗವೈಕಲ್ಯವನ್ನು ಮಾಡಬಹುದೇ ಹೊರತು ದೂತವಧೆಮಾಡಲು ಶಾಸ್ತ್ರ ಸಮ್ಮತಿ ಇಲ್ಲ” ಎಂದು ರಾವಣನಿಗೆ ಹೇಳಿದನು (೧೪೭–೧೪೯). ಆಗ ರಾವಣನು “ಈತನ ಬಾಲವನ್ನು ಸುಟ್ಟುಬಿಡಿ” ಎಂದು ರಾಕ್ಷಸರಿಗೆ ಆಜ್ಞೆ ಮಾಡಿದನು. ಅದನ್ನು ಕೇಳಿ ರಾಕ್ಷಸರು ನನ್ನನ್ನು ಸುತ್ತುಗಟ್ಟಿ ನನ್ನ ಬಾಲಕ್ಕೆ ಸೆಣಬನ್ನೂ ಹತ್ತಿಯ ಹರಕು ಬಟ್ಟೆಗಳನ್ನೂ ಸುತ್ತಿ ಸಜ್ಜುಪಡಿಸಿದರು

(೧೫೦–೧೫೧). ನನ್ನನ್ನು ದೊಣ್ಣೆಗಳಿಂದಲೂ ಮುಷ್ಟಿಗಳಿಂದಲೂ ಹೊಡೆಯುತ್ತ ಬಾಲಕ್ಕೆ ಬೆಂಕಿಯನ್ನು ಹತ್ತಿಸಿದರು. ಆಗ ರಾಕ್ಷಸರು ನನ್ನನ್ನು ಹಗ್ಗಗಳಿಂದ ಹೆಡಮುರಿಗೆ ಕಟ್ಟಿ ಸುತ್ತುವರಿದು ಹಿಡಿದುಕೊಂಡಿದ್ದರು. ನನಗೆ ಹಗಲು ಹೊತ್ತು ಲಂಕೆಯನ್ನು ಸರಿಯಾಗಿ ನೋಡಬೇಕೆಂಬ ಆಸೆ ಇದ್ದುದರಿಂದ ನಾನು ಸುಮ್ಮನಿದ್ದೆನು. ಬೆಂಕಿಯಿಂದ ನನಗೆ ಯಾವ ಬಾಧೆಯೂ ಆಗಲಿಲ್ಲ (೧೫೨–೧೫೩). ಆ ರಾಕ್ಷಸರು ನನ್ನನ್ನು ಹೀಗೆ ಕಟ್ಟಿ ಬಾಲಕ್ಕೆ ಬೆಂಕಿಯನ್ನಿಟ್ಟು ರಾಜಮಾರ್ಗದಲ್ಲಿ ಸಾರುತ್ತ ನಗರದ ಮಹಾದ್ವಾರದ ಬಳಿಗೆ ತರೆತಂದರು. ಅಲ್ಲಿ ನಾನು ನನ್ನ ದೊಡ್ಡ ಶರೀರವನ್ನು ಚಿಕ್ಕದಾಗಿ ಮಾಡಿ ಕಟ್ಟುಗಳನ್ನೆಲ್ಲಾ ಸಡಿಲಿಸಿ ಕಳಚಿಹಾಕಿ, ಮತ್ತೆ ಮೊದಲಿನಂತೆ ನಿಜಶರೀರವನ್ನು ತಾಳಿದೆನು. ಬಾಗಿಲಿಗೆ ಹಾಕಿದ್ದ ಕಬ್ಬಿಣದ ಪರಿಘವನ್ನು ತೆಗೆದುಕೊಂಡು ಆ ರಾಕ್ಷಸರನ್ನು ಸದೆಬಡಿದೆನು (೧೫೪–೧೫೫). ಅಲ್ಲಿಂದ ನಗರದ ಮಹಾದ್ವಾರದಮೇಲೆ ಹಾರಿದೆನು. ಅನಂತರ ಉರಿಯುತ್ತಿದ್ದ ನನ್ನ ಬಾಲದಿಂದ ಉಪ್ಪರಿಗೆ ಗೋಪುರಗಳ ಸಹಿತವಾಗಿ ಲಂಕಾಪಟ್ಟಣವನ್ನೇ ದಹಿಸಿಬಿಟ್ಟೆನು. ನನಗೆ ಸ್ವಲ್ಪವೂ ಭಯವಾಗಲಿಲ್ಲ. ಪ್ರಳಯಾಗ್ನಿಯು ಜನರನ್ನು ದಹಿಸಿದಂತೆ ಆಗಿಹೋಯಿತು. (ಕಡೆಯಲ್ಲಿ ನನಗೊಂದು ಚಿಂತೆ ಹುಟ್ಟಿತು.) "ಈ ನಗರದಲ್ಲಿ ಸುಟ್ಟುಹೋಗದ ಸ್ಥಳವೇ ಉಳಿಯಲಿಲ್ಲ. ಜಾನಕಿಯೂ ಸುಟ್ಟು ನಾಶವಾಗಿರಬೇಕು (೧೫೬–೧೫೭). ಲಂಕಾನಗರವೆಲ್ಲಾ ಸುಟ್ಟು ಬೂದಿಯಾಯಿತು. ಲಂಕೆಯನ್ನು ಸುಡುವ ಸಂಭ್ರಮದಲ್ಲಿ ಸೀತೆಗೂ ಅಪಾಯವನ್ನು ತಂದುಬಿಟ್ಟೆ. ಸಂದೇಹವೇ ಇಲ್ಲ. ಶ್ರೀರಾಮನ ಕಾರ್ಯವನ್ನು ಕೆಡಿಸಿದೆ" ಎಂದು ಅಗಾಧವಾದ ಶೋಕದಲ್ಲಿ ಮುಳುಗಿ ದಿಕ್ಕುತೋರದಂತಾದೆನು (೧೫೮–೧೫೯). ಅಷ್ಟರಲ್ಲಿ ಆಶ್ಚರ್ಯದಿಂದ ಲಂಕಾದಹನದ ಸುದ್ದಿಯನ್ನು ಮಾತನಾಡಿಕೊಳ್ಳುತ್ತಿದ್ದ ಚಾರಣರು "ಸೀತೆಯು ದಗ್ಧಳಾಗಲಿಲ್ಲ" ಎಂದು ಹೇಳಿದ ಮಾತು ನನ್ನ ಕಿವಿಗೆ ಬಿದ್ದಿತು. ವಿಸ್ಮಯಕರವಾದ ಆ ಮಾತನ್ನು ಕೇಳಿ ಸೀತೆಯು ದಗ್ಧಳಾಗಿಲ್ಲವೆಂದು ನಿಶ್ಚಯಿಸಿದೆನು. ಅದಕ್ಕೆ ಅನುಗುಣವಾಗಿ ನನಗೆ ಕೆಲವು ಶುಭಶಕುನಗಳೂ ಆದವು (೧೬೦–೧೬೧). ಬಾಲದಲ್ಲಿ ಅಗ್ನಿಯು ಜ್ವಲಿಸುವಾಗಲೂ ಉರಿಯು ನನಗೆ ತಗುಲಿರಲಿಲ್ಲ. ಮನಸ್ಸಿಗೆ ಉಲ್ಲಾಸವಾಯಿತು. ಸುಗಂಧಿಯಾದ ವಾಯುವು ಬೀಸತೊಡಗಿತು. ಹಿಂದೆ ಫಲವನ್ನು ತಪ್ಪದೆ ಸೂಚಿಸಿದ್ದ ಶುಭಶಕುನಗಳಿಂದಲೂ,

ರಾಮನ ತೇಜಸ್ಸು-ಸೀತೆಯ ಚಾರಿತ್ರ ಮುಂತಾದ ಮಹಾಗುಣಗಳಿಂದಲೂ, ಚಾರಣರು ಆಡುತ್ತಿದ್ದ ಸತ್ಯವಾಕ್ಯಗಳಿಂದಲೂ ಮನಸ್ಸಿಗೆ ಹರ್ಷವಾಯಿತು (೧೬೨-೧೬೩). ಆದರೂ ನಾನು ಮತ್ತೆ ಹೋಗಿ ವೈದೇಹಿಯನ್ನು ಕಂಡೆನು. ಹಿಂದಿರುಗಿ ಪ್ರಯಾಣಮಾಡಲು ಅವಳಿಂದ ಅನುಜ್ಞೆಯನ್ನು ಪಡೆದು ಅರಿಷ್ಟಪರ್ವತವನ್ನು ಹತ್ತಿದೆನು. ಅಲ್ಲಿಂದ, ಗೆಳೆಯರೆ, ನಿಮ್ಮನ್ನು ನೋಡುವ ಅಭಿಲಾಷೆಯಿಂದ ಇತ್ತಕಡೆ ಪ್ರಯಾಣವನ್ನಾರಂಭಿಸಿದೆನು. ವಾಯು, ಚಂದ್ರ, ಸೂರ್ಯ, ಸಿದ್ಧ, ಗಂಧರ್ವರು ಸಂಚರಿಸತಕ್ಕ ಗಗನಮಾರ್ಗದಲ್ಲಿ ಹಾರಿಬಂದು ನಿಮ್ಮನ್ನು ಕಂಡೆನು (೧೬೪-೧೬೫). ಇಷ್ಟು ಕಾರ್ಯವನ್ನು ನಾನು ಮಾಡಿರುವುದು ಶ್ರೀರಾಮನ ಪ್ರಭಾವದಿಂದ; ನಿಮ್ಮೆಲ್ಲರ ಮತ್ತು ಸುಗ್ರೀವನ ತೇಜಸ್ಸಿನ ಬಲದಿಂದ. ಸಮಸ್ತ ಸಂಗತಿಯನ್ನೂ ನಿಮಗೆ ಯಥಾವತ್ತಾಗಿ ತಿಳಿಸಿದ್ದೇನೆ. ಇನ್ನು ಮುಂದಿನ ಕೆಲಸವನ್ನು ನೋಡಿಕೊಳ್ಳಿರಿ" ಎಂದು ಹೇಳಿದನು (೧೬೬-೧೬೭).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಐವತ್ತೆಂಟನೆಯ ಸರ್ಗ

---

## ಸರ್ಗ ೫೯

ರಾವಣನನ್ನು ಕೊಂದು ನಾವೇ ಸೀತೆಯನ್ನು ಸೆರೆಯಿಂದ ಬಿಡಿಸಬೇಕೆಂಬ ಅಭಿಪ್ರಾಯದಿಂದ ಹನುಮಂತನು ತನ್ನ ಸಾಮರ್ಥ್ಯವನ್ನು ಹೇಳಿ ಕೊಂಡು, ಜಾಂಬವಂತ ಮೊದಲಾದವರನ್ನು ಹೊಗಳುವುದು.

ಹೀಗೆ ಆಂಜನೇಯನು ಸೀತೆಯನ್ನು ನೋಡಿಬಂದ ವೃತ್ತಾಂತವೆಲ್ಲವನ್ನೂ ಹೇಳಿ ಮುಂದಿನ ವಿಷಯವನ್ನು ಹೇಳಲಾರಂಭಿಸಿದನು: "ಮಿತ್ರರೆ, ನಾನು ಸೀತಾದೇವಿಯ ಸಚ್ಚಾರಿತ್ರವನ್ನು ಕಂಡಮೇಲೆ, ಶ್ರೀರಾಮನು ಅವಳಿಗಾಗಿ ಮಾಡುತ್ತಿರುವ ಪ್ರಯತ್ನವೂ ಸುಗ್ರೀವನ ಉತ್ಸಾಹವೂ ಯೋಗ್ಯವೇ ಸರಿ ಎಂದು ನನಗೆ ದೃಢವಾಯಿತು. ನನ್ನ ಮನಸ್ಸು ಭಕ್ತಿಯಿಂದ ಒಲಿಯಿತು (೧-೨). ರಾಕ್ಷಸೇಶ್ವರನಾದ ರಾವಣನು ಸಾಮಾನ್ಯನಲ್ಲ. ಅವನು ತನ್ನ ತಪೋಬಲದಿಂದ ಮೂರುಲೋಕಗಳನ್ನು ರಕ್ಷಿಸಬಲ್ಲನು. ಕ್ರುದ್ಧನಾದರೆ

ಮೂರು ಲೋಕಗಳನ್ನೂ ದಹಿಸಬಲ್ಲನು. ಎಲ್ಲಾ ವಿಧದಲ್ಲಿಯೂ ಅವನು ಬಲಶಾಲಿ. ಆತನು ಸೀತಾದೇವಿಯನ್ನು ಮುಟ್ಟಿದರೂ ತನ್ನ ತಪೋಬಲದಿಂದಲೇ ನಾಶವಾಗದೆ ಉಳಿದಿದ್ದಾನೆ. ಜನಕಪುತ್ರಿಯು ಕ್ರುದ್ಧಳಾದರೆ ಏನು ಮಾಡ ಬಲ್ಲಳೆಂಬುದು ಗೊತ್ತಿದೆಯೆ? ಕೈಯಿಂದ ಮುಟ್ಟಿದರೆ ಅಗ್ನಿಜ್ವಾಲೆಯೂ ಅಂತಹ ಕೆಲಸವನ್ನು ಮಾಡಲಾರದು (೩–೫). ಪರಿಸ್ಥಿತಿಯು ಹೀಗಿದೆ ಎಂಬುದನ್ನು ನಿಮಗೆ ತಿಳಿಸಿದ್ದೇನೆ. ಜಾಂಬವಂತನೇ ಮೊದಲಾದ ಕಪಿನಾಯಕರೆಲ್ಲರೂ ಒಪ್ಪುವುದಾದರೆ, ನಾವು ಸೀತಾದೇವಿಯನ್ನು ಬಿಡಿಸಿ ಅವಳನ್ನು ಕರೆದು ಕೊಂಡೇ ರಾಮಲಕ್ಷ್ಮಣರ ಬಳಿಗೆ ಹೋಗುವುದು ಸರಿಯೆಂದು ನನಗೆ ತೋರು ತ್ತದೆ. ಈಗ ನಾನೊಬ್ಬನೇ ಬೇಕಾದರೂ ಲಂಕೆಗೆ ನುಗ್ಗಿ ರಾಕ್ಷಸರನ್ನು ನಾಶ ಮಾಡಿ ರಾವಣನನ್ನು ಸಂಹರಿಸಬಲ್ಲೆನು (೬–೭). ಹೀಗಿರುವಾಗ ವೀರರೂ ಧೀರರೂ ಶಸ್ತ್ರಾಸ್ತ್ರಸಂಪನ್ನರೂ ಜಯಾಕಾಂಕ್ಷಿಗಳೂ ಆದ ನಿಮ್ಮಂಥ ಕಪಿನಾಯಕರು ಸಹಾಯಕರಾದರೆ ಹೇಳಬೇಕಾದ್ದೇನು? ನಾನು ಯುದ್ಧದಲ್ಲಿ ರಾವಣ, ಅವನ ಸೈನ್ಯ, ಮಕ್ಕಳು, ಸಹೋದರರು—ಇವರೆಲ್ಲರನ್ನೂ ಕೊಂದು ಹಾಕುವೆನು (೮–೯). ಇಂದ್ರಜಿತ್ತೇ ಯುದ್ಧಕ್ಕೆ ಬಂದು ಘೋರವಾದ ಬ್ರಹ್ಮ, ಐಂದ್ರ, ರೌದ್ರ, ವಾಯವ್ಯ, ವಾರುಣ ಮುಂತಾದ ಅಸ್ತ್ರಗಳನ್ನೇ ಪ್ರಯೋಗಿಸಲಿ, ಅವೆಲ್ಲವನ್ನೂ ಧ್ವಂಸಮಾಡಿಬಿಡುತ್ತೇನೆ. ರಾಕ್ಷಸರನ್ನು ವಧಿಸುತ್ತೇನೆ. ನೀವು ಅನುಮತಿಯನ್ನಿತ್ತರೆ ನನ್ನ ಪರಾಕ್ರಮವು ರಾವಣನನ್ನು ಅಡ್ಡಗಟ್ಟುವುದು (೧೦–೧೧). ನಾನು ಪರ್ವತಗಳನ್ನು ಎತ್ತಿ ಬೀಸಲಾರಂಭಿಸಿದರೆ, ಈ ರಾಕ್ಷಸರ ಮಾತಿರಲಿ—ದೇವತೆಗಳೂ ಉಳಿಯುವುದಿಲ್ಲ. ಈ ಜಾಂಬವಂತನೇನು ಸಾಮಾನ್ಯನೆ? ಸಮುದ್ರವಾದರೂ ಎಲ್ಲೆಯನ್ನು ಮೀರಿ ಉಕ್ಕಬಹುದು, ಮಂದರಪರ್ವತವಾದರೂ ಅಲ್ಲಾಡಬಹುದು, ಈ ಜಾಂಬವಂತನು ಮಾತ್ರ ಜಗ್ಗುವುದಿಲ್ಲ. ಇವನನ್ನು ಶತ್ರುಸೇನೆಯು ಅಲ್ಲಾಡಿಸಲಾರದು! (೧೨–೧೩). ವೀರನಾದ ಈ ವಾಲಿಪುತ್ರನು ಸಮಸ್ತ ರಾಕ್ಷಸರನ್ನೂ ಅವರ ಪೂರ್ವಜರನ್ನೂ ಸಹ ನಾಶಮಾಡಲು ಶಕ್ತನಾಗಿದ್ದಾನೆ. ಈ ಪನಸನ—ಈ ನೀಲನ ತೊಡೆಯ ವೇಗಕ್ಕೆ ಮಂದರಪರ್ವತವೂ ಸೀಳಿಹೋದೀತು. ದೇವ ಅಸುರ ಯಕ್ಷರಲ್ಲಾಗಲಿ, ಗಂಧರ್ವ ಸರ್ಪ ಪಕ್ಷಿಜಾತಿಗಳಲ್ಲಾಗಲಿ—ಮೈಂದದ್ವಿವಿದರೊಡನೆ ಹೋರಾಡ ಬಲ್ಲವರು ಯಾರಿದ್ದಾರೆ? ಹೇಳಿರಿ (೧೪–೧೬). ಈ ಮೈಂದದ್ವಿವಿದರು

ಅಶ್ವಿನೀದೇವತೆಗಳ ಮಕ್ಕಳು. ವಾನರಶ್ರೇಷ್ಠರು. ರಣಾಂಗಣದಲ್ಲಿ ಇವರಿಗೆ ಎದುರಾಗತಕ್ಕವನೊಬ್ಬನನ್ನೂ ನಾನು ಕಾಣೆ. ಇವರು ಬ್ರಹ್ಮದೇವನ ವರಬಲ ದಿಂದ ಮಹಾದರ್ಪಶಾಲಿಗಳಾಗಿದ್ದಾರೆ. ಅಮೃತವನ್ನು ಕುಡಿದು ಬಂದಿರತಕ್ಕ ವಾನರೋತ್ತಮರು (೧೭–೧೮). ಅಶ್ವಿನೀದೇವತೆಗಳನ್ನು ಸಂತೋಷಪಡಿಸು ವುದಕ್ಕಾಗಿ ಬ್ರಹ್ಮದೇವನು ಇವರಿಗೆ ಯಾರಿಂದಲೂ ಮರಣವಾಗದಿರಲಿ ಎಂದು ವರವನ್ನು ಅನುಗ್ರಹಿಸಿದ್ದಾನೆ. ಆ ವರಬಲದಿಂದ ಇವರು ದೇವತೆಗಳನ್ನು ಜಯಿಸಿ ಅಮೃತವನ್ನು ಕುಡಿದು ಬಂದಿದ್ದಾರೆ ಉಳಿದ ವಾನರರೆಲ್ಲ ಹಾಗಿರಲಿ! ಇವರಿಬ್ಬರೇ ಕ್ರುದ್ಧರಾದರೆ ಸಮಸ್ತ ಲಂಕೆಯನ್ನೂ ನಾಶಮಾಡಬಲ್ಲರು (೧೯–೨೧). ನಾನೇ ಲಂಕೆಯನ್ನು ಸುಟ್ಟು ಬೂದಿಮಾಡಿ ಹೆಚ್ಚುಕಡಿಮೆ ನಾಶಮಾಡಿ ಬಿಟ್ಟಿದ್ದೇನೆ. ರಾಜಬೀದಿಗಳಲ್ಲಿ ಹೆಸರನ್ನು ಘೋಷಿಸಿ ಬಂದಿದ್ದೇನೆ. "ಮಹಾ ಬಲಶಾಲಿಗಳಾದ ರಾಮಲಕ್ಷ್ಮಣರಿಗೆ ಜಯವಾಗಲಿ! ಶ್ರೀರಾಮನ ರಕ್ಷಣೆ ಯಲ್ಲಿರುವ ಸುಗ್ರೀವಮಹಾರಾಜನಿಗೆ ಜಯವಾಗಲಿ! ನಾನು ಕೋಸಲಾಧಿಪತಿ ಯಾದ ರಾಘವನ ದೂತ. ವಾಯುದೇವನ ಪುತ್ರ. ಹನುಮಂತನೆಂದು ನನ್ನ ಹೆಸರು!" ಎಂಬುದಾಗಿ ಬೀದಿಬೀದಿಗಳಲ್ಲಿಯೂ ಘೋಷಮಾಡಿದ್ದೇನೆ (೨೨–೨೪). ದುರಾತ್ಮನಾದ ರಾವಣನ ಅಶೋಕವನದಲ್ಲಿ ಶಿಂಶಪಾವೃಕ್ಷದ ಕೆಳಗೆ ಆ ಸಾಧ್ವಿಯು ದೈನ್ಯದಿಂದ ಕುಳಿತಿದ್ದಾಳೆ. ರಾಕ್ಷಸಿಯರಿಂದ ಸುತ್ತುವರಿಯ ಲ್ಪಟ್ಟು ಶೋಕಸಂತಪ್ತಳಾದ ಆಕೆಯನ್ನು ನೋಡಿದರೆ, ಮೋಡ ಮುಚ್ಚಿದ ಚಂದ್ರಕಲೆಯಂತೆ ಕಾಂತಿಹೀನಳಾಗಿ ಕಾಣುತ್ತಾಳೆ (೨೫–೨೬). ಪತಿವ್ರತೆ ಯಾದ ಜಾನಕಿಯು ಸೆರೆಯಲ್ಲಿದ್ದರೂ ಬಲದರ್ಪಿತನಾದ ರಾವಣನನ್ನು ಲೆಕ್ಕಿಸದೆ ಇದ್ದಾಳೆ. ಅವಳದು ಪರಿಶುದ್ಧವಾದ ನಡತೆ. ಶ್ರೀರಾಮನಲ್ಲಿ ದೃಢವಾದ ಪ್ರೇಮವನ್ನಿಟ್ಟು, ಶಚೀದೇವಿಯು ದೇವೇಂದ್ರನನ್ನೇ ಧ್ಯಾನಿಸುವಂತೆ ಶ್ರೀರಾಮ ನನ್ನೇ ಚಿಂತಿಸುತ್ತಿದ್ದಾಳೆ (೨೭–೨೮). ಸೀರೆಯೊಂದನ್ನು ಸುತ್ತಿಕೊಂಡು ಮಲಿನಶರೀರಳಾಗಿ ಶೋಕಿಸುತ್ತ ತನ್ನ ಪತಿಯ ಹಿತವನ್ನೇ ಚಿಂತಿಸುತ್ತಿದ್ದಾಳೆ. ವಿಕಾರರೂಪಿನ ರಾಕ್ಷಸಿಯರು ಹೆಜ್ಜೆಹೆಜ್ಜೆಗೂ ಅವಳನ್ನು ಹೆದರಿಸುವುದನ್ನು ನಾನು ಅಶೋಕವನದಲ್ಲಿ ಕಂಡಿದ್ದೇನೆ (೨೯–೩೦). ಸೀತೆಯು ಒಂಟಿ ಜಡೆ ಯನ್ನು ಧರಿಸಿ ದೀನಳಾಗಿ ಗಂಡನನ್ನೇ ಚಿಂತಿಸುತ್ತ, ನೆಲದಮೇಲೆ ಮಲಗುತ್ತ, ಬಣ್ಣಗುಂದಿ, ಚಳಿಗಾಲದ ತಾವರೆಯ ಬಳ್ಳಿಯಂತೆ ಆಗಿದ್ದಾಳೆ. ರಾವಣನ

ದೆಸೆಯಿಂದ ಜೀವಿತದಲ್ಲಿ ನಿರಾಶಳಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ನಿಶ್ಚಯಿಸಿಬಿಟ್ಟಿದ್ದಳು. ನಾನು ಬಹುಕಷ್ಟದಿಂದ ಸಮಾಧಾನ ಹೇಳಿ ನಂಬಿಕೆ ಯುಂಟುಮಾಡಿದೆ (೩೧-೩೨). ನಿಖಿಲ ವೃತ್ತಾಂತಗಳನ್ನೂ ತಿಳಿಸಿ ರಾಮ ಸುಗ್ರೀವರಿಬ್ಬರೂ ಸ್ನೇಹವಾದ ವಿಷಯವನ್ನು ಹೇಳಿದ ಮೇಲೆ ಸಂತೋಷ ಪಟ್ಟಳು. ಸೀತಾದೇವಿಯ ಕಟ್ಟುನಿಟ್ಟಾದ ಸದಾಚಾರ, ಪತಿಯಲ್ಲಿ ದೃಢವಾದ ಭಕ್ತಿ—ಇವೆರಡೇ ರಾವಣನನ್ನು ಕೊಲ್ಲುವುದಕ್ಕೆ ಸಾಕು. ಇದುವರೆಗೆ ಅವನು ಸಾಯದೆ ಉಳಿದಿರುವುದರಿಂದ ರಾವಣನು ಮಹಾನುಭಾವನೆಂದೇ ಹೇಳಬೇಕು! ಆದರೆ, ಮಿತ್ರರೆ! (ಸೀತಾದೇವಿಯ ಸದ್ಗುಣಗಳೇ ರಾವಣನನ್ನು ಕೊಲ್ಲುತ್ತವೆ.) ಅವನ ವಧೆಗೆ ಶ್ರೀರಾಮನು ನಿಮಿತ್ತಮಾತ್ರ. ದೇವಿಯು ಸಹಜವಾಗಿಯೇ ಕೃಶಾಂಗಿ. ಈಗ ಪತಿವಿಯೋಗದಿಂದ ಇನ್ನೂ ಕೃಶಳಾಗಿಬಿಟ್ಟಿದ್ದಾಳೆ (೩೩-೩೫). ಪಾಡ್ಯಗಳಲ್ಲಿ ಅಧ್ಯಯನ ಮಾಡತಕ್ಕವನ ವಿದ್ಯೆಯಂತೆ ದಿನೇದಿನೇ ಕೃಶಳಾಗುತ್ತಿದ್ದಾಳೆ. ಎಲೈ ಮಿತ್ರರೆ, ಮಹಾತ್ಮಳಾದ ಸೀತಾದೇವಿಯು ಹೀಗೆ ದುಃಖದಲ್ಲಿ ಮುಳುಗಿಹೋಗಿದ್ದಾಳೆ. ಇದಕ್ಕೆ ನಾವು ಏನು ಮಾಡಬೇಕೆಂಬು ದನ್ನು ಆಲೋಚಿಸಿರಿ" ಎಂದನು (೩೬).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಐವತ್ತೊಂಬತ್ತನೆಯ ಸರ್ಗ

---

## ಸರ್ಗ ೬೦

ನಾವೇ ರಾಕ್ಷಸರನ್ನು ಗೆದ್ದು ಸೀತೆಯನ್ನು ರಾಮನ ಬಳಿಗೆ ಕರೆದುಕೊಂಡು ಹೋಗೋಣವೆಂದು ಅಂಗದನು ಹೇಳಲು, ಅದು ಸರಿಯಲ್ಲವೆಂದು ಜಾಂಬವಂತನು ತಿಳಿಸುವುದು.

ಹನುಮಂತನ ಮಾತನ್ನು ಕೇಳಿ ಅಂಗದನು "ಎಲೈ ವಾನರರೆ, ನಾವು ದೇವಿಯನ್ನು ದರ್ಶನಮಾಡಿದ ಮೇಲೆ, ಅವಳನ್ನು ಬಿಟ್ಟು ಶ್ರೀರಾಮನ ಸಮೀಪಕ್ಕೆ ಹೋಗುವುದು ಯುಕ್ತವಲ್ಲ. ಅಲ್ಲಿಗೆ ಹೋಗಿ 'ದೇವಿಯನ್ನು ನೋಡಿದೆವು. ಆದರೆ ಕರೆತರಲಿಲ್ಲ' ಎಂದು ಹೇಳಿಕೊಳ್ಳುವುದು ನಿಮ್ಮಂತಹ ಪರಾಕ್ರಮಿಗಳಿಗೆ ಅಷ್ಟು ಚೆನ್ನಾಗಿರುವುದಿಲ್ಲ (೧-೨). ಹಾರುವುದರಲ್ಲಾಗಲಿ,

ಪರಾಕ್ರಮದಲ್ಲಾಗಲಿ ನಮಗೆ ಸಮಾನನಾದವನು ದೇವದಾನವಾದಿಗಳಲ್ಲಿ ಒಬ್ಬನೂ ಇಲ್ಲ. ಹನುಮಂತನೇ ಬಹುಮಂದಿ ರಾಕ್ಷಸವೀರರನ್ನು ಕೊಂದು ಬಿಟ್ಟಿರುವನು. ಇನ್ನು ನಾವು ಮಾಡಬೇಕಾದ್ದಾದರೂ ಏನಿದೆ? ಜಾನಕಿಯನ್ನು ಕರೆದುಕೊಂಡು ಹೋಗಿಬಿಡೋಣ! ರಾಮಲಕ್ಷ್ಮಣರ ಬಳಿಗೆ ಅವಳನ್ನು ಸೇರಿಸಿ ಬಿಡೋಣ (೩–೫). ಕಿಷ್ಕಿಂಧೆಯಲ್ಲಿರುವ ಸಮಸ್ತ ಕಪಿವೀರರಿಗೂ ಕಷ್ಟವನ್ನು ಕೊಡುವುದೇಕೆ? ನಾವೇ ಹೋಗಿ ರಾಕ್ಷಸರನ್ನು ಸಂಹರಿಸಿ ರಾಮಲಕ್ಷ್ಮಣ ಸುಗ್ರೀವರನ್ನು ನೋಡುವುದು ಯುಕ್ತ" ಎಂದನು. ಅಂಗದನ ಉದ್ದೇಶವನ್ನು ಗ್ರಹಿಸಿ ಜಾಂಬವಂತನಿಗೆ ಸಂತೋಷವಾಯಿತು. ಆದರೆ ವಿವೇಕಿಯಾದ ಜಾಂಬವಂತನು ಕಾರ್ಯಾಕಾರ್ಯವನ್ನು ವಿವೇಚಿಸಿ ಅಂಗದನನ್ನು ಕುರಿತು "ಕಪಿಶ್ರೇಷ್ಠ, ನಿನ್ನ ಅಭಿಪ್ರಾಯವು ಸರಿಯಲ್ಲ (೬–೮). ದಕ್ಷಿಣದಿಕ್ಕಿನಲ್ಲಿ ಸೀತೆಯನ್ನು ಹುಡುಕಬೇಕೆಂದು ಮಾತ್ರ ನಮಗೆ ಆಜ್ಞೆಯಾಗಿದೆ. ಸುಗ್ರೀವನಾಗಲಿ–ಶ್ರೀರಾಮನಾಗಲಿ ಸೀತೆಯನ್ನು ಕರೆತರಬೇಕೆಂದು ನಮಗೆ ಆಜ್ಞೆ ಮಾಡಿಲ್ಲ. ಒಂದು ವೇಳೆ ನಾವು ಗೆದ್ದು ಸೀತೆಯನ್ನು ಕರೆತಂದರೂ, ರಘುನಾಥನ ಮನಸ್ಸಿಗೆ ರುಚಿಸದೇಹೋಗಬಹುದು. ಆ ಪುರುಷಸಿಂಹನು ತನ್ನ ಕುಲದ ಔನ್ನತ್ಯವನ್ನು ಅಭಿಮಾನದಿಂದ ಹೇಳಿಕೊಳ್ಳುತ್ತಾನೆ (೯–೧೦). ನಿಖಿಲ ಕಪಿನಾಯಕರ ಎದುರಿನಲ್ಲಿ ಸೀತೆಯನ್ನು ವಿಜಯಶಾಲಿಯಾಗಿ ಕರೆತರುತ್ತೇನೆಂದು ರಾಮನು* ಪ್ರತಿಜ್ಞೆಮಾಡಿದ್ದಾನೆ. ಈಗ ಅದನ್ನು ಸುಳ್ಳುಮಾಡುವುದಾದರೂ ಹೇಗೆ? ನಾವು ಮಾಡಿದ ಕೆಲಸವೆಲ್ಲವೂ ನಿಷ್ಫಲವಾದೀತು. ರಾಮನಿಗೆ ಸಂತೋಷವೂ ಆಗದೆ ಹೋದೀತು. ನಾವು ವ್ಯರ್ಥವಾಗಿ ಪರಾಕ್ರಮವನ್ನು ಪ್ರದರ್ಶನಮಾಡಿದಂತಾಗುವುದು (೧೧–೧೨). ಈಗ ನಾವು ರಾಮಲಕ್ಷ್ಮಣಸುಗ್ರೀವರು ಇರತಕ್ಕ ಸ್ಥಳಕ್ಕೆ ಹೋಗಿ ಸೀತಾವೃತ್ತಾಂತವನ್ನು ತಿಳಿಸೋಣ. ಯುವರಾಜ, ನಿನ್ನ ವಿಚಾರಸರಣಿಯು ಯೋಗ್ಯವೇನೋ ಹೌದು. ಆದರೆ ನಾವು ರಾಮನ ಅಭಿಪ್ರಾಯವನ್ನನುಸರಿಸಿ ಕಾರ್ಯವನ್ನು ಸಾಧಿಸಬೇಕಾಗಿದೆ. ಆಲೋಚಿಸಿ ನೋಡು" ಎಂದು ಹೇಳಿದನು (೧೩–೧೪).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಅರುವತ್ತನೆಯ ಸರ್ಗ

---

* 'ಪ್ರತಿಜ್ಞಾಯ ಸ್ವಯಂ ರಾಜಾ' ಎಂದು ಮೂಲ. ಇಲ್ಲಿ ರಾಜನೆಂದರೆ ಸುಗ್ರೀವನೆಂದೂ ಅರ್ಥಮಾಡಬಹುದು.

# ಸರ್ಗ ೬೧

ಹನುಮಂತ ಮೊದಲಾದವರೆಲ್ಲರೂ ಕಿಷ್ಕಿಂಧೆಗೆ ಹೊರಟು, ದಾರಿಯಲ್ಲಿ ಮಧುವನವನ್ನು ಪ್ರವೇಶಿಸುವುದು. ಕಾವಲುಗಾರನಾದ ದಧಿಮುಖನ ಆಕ್ಷೇಪ.

ಜಾಂಬವಂತನ ಮಾತನ್ನು ಅಂಗದನೇ ಮೊದಲಾದ ಕಪಿವೀರರೂ ಹನುಮಂತನೂ ಒಪ್ಪಿದರು. ಅವರೆಲ್ಲರೂ ಆನಂದದಿಂದ ಹನುಮಂತನನ್ನು ಮುಂದೆ ಇಟ್ಟುಕೊಂಡು ಮಹೇಂದ್ರಪರ್ವತದಿಂದ ಆಕಾಶಕ್ಕೆ ನೆಗೆದರು(೧–೨). ಪರ್ವತಗಳಂತೆಯೂ ಮದ್ದಾನೆಗಳಂತೆಯೂ ಇದ್ದ ಬಲಾಢ್ಯರಾದ ಕಪಿಗಳು ಆಕಾಶವನ್ನೇ ಮುಚ್ಚಿಬಿಡುವಂತೆ ಕಾಣುತ್ತಿದ್ದರು. ಸಿದ್ಧಗಂಧರ್ವಾದಿಗಳು ಹನುಮಂತನನ್ನು ಬಹುಮಾನದಿಂದ ನೋಡುತ್ತಿದ್ದರು. ಕಪಿಗಳೆಲ್ಲರಿಗೂ ಹನುಮಂತನಮೇಲೆ ದೃಷ್ಟಿ. ಅವರು ದೃಷ್ಟಿಗಳಿಂದಲೇ ಅವನನ್ನು ಎತ್ತಿತರುವಂತೆ ಕಾಣುತ್ತಿತ್ತು(೩–೪). ಅವರೆಲ್ಲರಿಗೂ ಶ್ರೀರಾಮನ ಕಾರ್ಯವು ಸಿದ್ಧಿಸಿಹೋದಂತೆ ನಿಶ್ಚಯ. ಎಲ್ಲರಿಗೂ ಕೀರ್ತಿ ಲಭಿಸಿತೆಂದು ವಿಶ್ವಾಸ. ತಾವು ಸಾಧಿಸಿದ ಕಾರ್ಯಕ್ಕಾಗಿ ಹೆಮ್ಮೆ. ಸೀತೆಯು ಸಿಕ್ಕಿದಳೆಂಬ ಸಂತೋಷದ ಸುದ್ದಿಯನ್ನು ಹೇಳಲು ಉತ್ಸಾಹ. ಯುದ್ಧಮಾಡಲು ಒಬ್ಬೊಬ್ಬರಿಗೂ ಕುತೂಹಲ. ರಾಮನು ರಾವಣನಿಗೆ ತಕ್ಕ ಪ್ರತೀಕಾರವನ್ನು ಮಾಡಿಯೇ ತೀರುತ್ತಾನೆಂದು ಪ್ರತಿಯೊಬ್ಬರೂ ನಿಶ್ಚಯಿಸಿಬಿಟ್ಟಿದ್ದರು (೫–೬). ಆ ವಾನರರು ಆಕಾಶದಲ್ಲಿ ಹಾರಿಬರುತ್ತಿರುವಾಗ, ನಂದನವನದಂತಿರುವ ಒಂದು ತೋಟವು ಕಾಣಿಸಿತು. ಅದು ಸುಗ್ರೀವನಿಗೆ ಸೇರಿದ ಮನೋಹರವಾದ ಮಧುವನ. ಯಾವ ಪ್ರಾಣಿಯೂ ಅದರ ಒಳಕ್ಕೆ ಹೋಗದಂತೆ ಬಲವಾದ ಕಾವಲಿತ್ತು. ಸುಗ್ರೀವನ ಸೋದರಮಾವನಾದ ದಧಿಮುಖನೆಂಬ ಕಪಿವೀರನೊಬ್ಬನು ಅದನ್ನು ರಕ್ಷಿಸುತ್ತಿದ್ದನು (೭–೯). ಸುಗ್ರೀವನಿಗೆ ಬಹು ಪ್ರಿಯವಾಗಿದ್ದ ಆ ಮಧುವನವನ್ನು ಕಂಡೊಡನೆ ಕಪಿಗಳಿಗೆ ಅಲ್ಲಿ ಜೇನನ್ನು ಕುಡಿಯಬೇಕೆಂದು ಆಸೆಯಾಯಿತು. ಮಧುಪಾನಕ್ಕೆ ಅವಕಾಶ ಕೊಡಬೇಕೆಂದು ಅಂಗದನನ್ನು ಪ್ರಾರ್ಥಿಸಿದರು (೧೦–೧೧). ಅಂಗದಕುಮಾರನು ಜಾಂಬವಂತನೇ ಮೊದಲಾದ ಹಿರಿಯರ ಸಮ್ಮತಿಯನ್ನು ಪಡೆದು, ಕಪಿಗಳಿಗೆ ಮಧುಪಾನಮಾಡಲು ಅನುಮತಿಕೊಟ್ಟನು. ಕಪಿಗಳು ಅನುಮತಿಯನ್ನು ಪಡೆದು ಆನಂದದಿಂದ ಉಬ್ಬಿದರು. ಹರ್ಷೋನ್ಮತ್ತ

ರಾಗಿ ಕುಣಿದಾಡಿದರು (೧೨–೧೩). (ಮಧುವನಕ್ಕೆ ದಾಳಿಯುಟ್ಟು ಜೇನನ್ನು ಕುಡಿದು ಮದವೇರಿದರು.) ಆ ಕಪಿಗಳಲ್ಲಿ ಕೆಲವರು ಹಾಡುವರು. ಕೆಲವರು ನಮಸ್ಕಾರಮಾಡುವರು. ಕೆಲವರು ಕುಣಿಯುವರು. ಕೆಲವರು ಗಟ್ಟಿಯಾಗಿ ನಗುವರು. ಕೆಲವರು ಧುಮುಕುವರು. ಕೆಲವರು ಓಡುವರು. ಕೆಲವರು ಕುಪ್ಪಳಿಸುವರು. ಕೆಲವರು ಏನನ್ನೋ ಹಲುಬುವರು (೧೪). ಒಬ್ಬರನ್ನೊಬ್ಬರು ಅಪ್ಪಿಕೊಳ್ಳುವರು. ತಳ್ಳುವರು. ಜಗಳವಾಡುವರು. ಆಟವಾಡುವರು. ಕೆಲವರು ಮರದಿಂದ ಮರಕ್ಕೆ ಜಿಗಿಯುತ್ತಿದ್ದರು. ಕೆಲವರು ಮರದಿಂದ ನೆಲಕ್ಕೆ ಹಾರಿಬೀಳುತ್ತಿದ್ದರು. ಕೆಲವರು ನೆಲದಿಂದ ಮರದ ತುದಿಗೆ ಛಟ್ಟನೆ ನೆಗೆಯುತ್ತಿದ್ದರು (೧೫–೧೬). ಒಬ್ಬ ಕಪಿಯು ಹಾಡುವಾಗ ಇನ್ನೊಬ್ಬನು ನಗುತ್ತ ಬಂದು ಮೇಲೆ ಬೀಳುವನು! ಒಬ್ಬನು ನಗುತ್ತಿದ್ದರೆ ಇನ್ನೊಬ್ಬನು ಅಳುತ್ತ ಎದುರಿಗೆ ಬಂದು ನಿಲ್ಲುವನು! ಇನ್ನೊಬ್ಬನು ಅಳುತ್ತಿದ್ದರೆ ಮತ್ತೊಬ್ಬನು ಕೇಕೆ ಹಾಕುತ್ತ ಬಂದು ನಿಲ್ಲುವನು! ಮತ್ತೊಬ್ಬನು ಕೇಕೆಹಾಕುತ್ತಿದ್ದರೆ ಮಗದೊಬ್ಬನು ಬಂದು ಅವನನ್ನು ತಳ್ಳುವನು! (೧೭). ಹೀಗೆ ಕಪಿಗಳು ಯಥೇಚ್ಛವಾಗಿ ಜೇನನ್ನು ಕುಡಿದು ಮದಿಸಿ ನಾನಾ ಚೇಷ್ಟೆಯನ್ನು ಮಾಡುತ್ತಿದ್ದರು. ಆ ಕಪಿಗಳಲ್ಲಿ ಮದವೇರದವನೇ ಇರಲಿಲ್ಲ. ಕುಡಿದು ತೃಪ್ತನಾಗದವನೂ ಇರಲಿಲ್ಲ. ಕಪಿಗಳು ಮಧುವನದಲ್ಲಿದ್ದ ಫಲಮೂಲಗಳನ್ನು ತಿಂದು, ವೃಕ್ಷಗಳನ್ನೂ ಪತ್ರಪುಷ್ಪಗಳನ್ನೂ ಹಾಳುಮಾಡುತ್ತಿರುವಾಗ ದಧಿಮುಖನೆಂಬ ವಾನರನು ಕೋಪದಿಂದ ಬಂದು ಅವರನ್ನು ತಡೆದನು (೧೮–೧೯). ಆದರೆ ಕೊಬ್ಬಿಹೋಗಿದ್ದ ಆ ಕಪಿಗಳು ವನರಕ್ಷಕನಾದ ದಧಿಮುಖನ ಮಾತನ್ನು ಲಕ್ಷಿಸದೆ ಅವನನ್ನೇ ಗದರಿಸತೊಡಗಿದರು. ಮಹಾತೇಜಸ್ವಿಯಾದ ದಧಿಮುಖನು ಹೇಗಾದರೂ ಇವರ ಹಾವಳಿಯನ್ನು ತಡೆದು ಮಧುವನವನ್ನು ರಕ್ಷಿಸಬೇಕೆಂದು ನಿರ್ಧರಿಸಿದನು. ಕೆಲವರನ್ನು ಕಠೋರವಾಕ್ಯಗಳಿಂದ ಹೆದರಿಸಿದನು. ಕೆಲವರನ್ನು ಕೈಯಿಂದ ಹೊಡೆದನು. ಕೆಲವರೊಡನೆ ಜಗಳವಾಡಿದನು. ಕೆಲವರಿಗೆ ಒಳ್ಳೆಯ ಮಾತಿನಿಂದ ಬುದ್ಧಿ ಹೇಳಿದನು (೨೦–೨೧). ದಧಿಮುಖನು ಎಷ್ಟು ತಡೆದರೂ ಕೇಳದೆ, ಆ ವಾನರರು ನಿರ್ಭಯವಾಗಿ ಚೇಷ್ಟೆಮಾಡುತ್ತ ತಮ್ಮ ತಪ್ಪನ್ನು ತಿಳಿದುಕೊಳ್ಳದೆ, ಒಟ್ಟಾಗಿ ಸೇರಿ ಅವನನ್ನೇ ಎಳೆದಾಡತೊಡಗಿದರು. ಮದವೇರಿದ ಆ ಕಪಿಗಳು ದಧಿಮುಖನನ್ನು ಪರಚಿ, ಕಚ್ಚಿ, ಕೈಯಿಂದ ಹೊಡೆದು, ಕಾಲಿನಿಂದ ಒದೆದು, ಮಧುವನವನ್ನು ಬರಿದುಮಾಡಿಬಿಟ್ಟರು (೨೨–೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಅರುವತ್ತೊಂದನೆಯ ಸರ್ಗ

# ಸರ್ಗ ೬೨

ಹಿಂದಿನ ಸರ್ಗದ ವಿಷಯುವನ್ನು ವಿಸ್ತಾರವಾಗಿ ವರ್ಣಿಸುವುದು. ದಧಿಮುಖನೂ ಇತರ ವನರಕ್ಷಕರೂ ಕಪಿಗಳಿಂದ ಪರಾಜಿತರಾಗಿ ಸುಗ್ರೀವನ ಬಳಿಗೆ ದೂರು ಹೇಳುವುದಕ್ಕಾಗಿ ಹೋಗುವುದು.

ಹನುಮಂತನು ತನ್ನ ಕಡೆಯ ಕಪಿಗಳನ್ನು ಕುರಿತು "ವಾನರರೆ, ನೀವು ನಿಶ್ಚಿಂತರಾಗಿ ಮಧುವನ್ನು ಕುಡಿಯಿರಿ. ನಿಮಗೆ ಅಡ್ಡಿಮಾಡತಕ್ಕವರನ್ನು ನಾನು ನೋಡಿಕೊಳ್ಳುತ್ತೇನೆ" ಎಂದನು. ಆ ಮಾತನ್ನು ಕೇಳಿ ಅಂಗದನು "ಅವಶ್ಯವಾಗಿ ಕಪಿಗಳು ಮಧುವನ್ನು ಕುಡಿಯಲಿ. ನಮ್ಮ ಕಾರ್ಯವನ್ನು ಸಾಧಿಸಿದವನೇ ಹನುಮಂತನು (೧–೩). ಅವನು ಒಂದು ಅಕಾರ್ಯವನ್ನು ಮಾಡಬೇಕೆಂದರೂ ನಾವು ಮಾಡಬೇಕು. ಹೀಗಿರುವಾಗ ಮಧುಪಾನದ ವಿಷಯದಲ್ಲಿ ಹೇಳಬೇಕಾದ್ದೇನು?" ಎಂದನು. ಅಂಗದನ ಮುಖದಿಂದ ಆ ಮಾತು ಬಂದಕೂಡಲೇ ಕಪಿಗಳೆಲ್ಲರೂ 'ಭಲೆ! ಭಲೆ!' ಎಂದು ಕೂಗುತ್ತ ಅಂಗದನನ್ನು ಅಭಿನಂದಿಸಿದರು (೪–೫). ಕೂಡಲೇ ನದೀಪ್ರವಾಹದಂತೆ ರಭಸದಿಂದ ಮಧುವನಕ್ಕೆ ನುಗ್ಗಿದರು. ಅವರಿಗೆ ಸೀತಾವೃತ್ತಾಂತವನ್ನು ತಿಳಿದುಬಂದೆವೆಂಬ ಜಂಬದೊಡನೆ ಮಧುವನ್ನು ಕುಡಿಯಲು ಅಂಗದನ ಅನುಮತಿಯೂ ಸಿಕ್ಕಿತು. ಅವರು ತೋಟದ ಕಾವಲುಗಾರರನ್ನು ಹೊಡೆದೋಡಿಸಿ ಹಣ್ಣುಗಳನ್ನು ಯಥೇಷ್ಟವಾಗಿ ತಿಂದು ಜೇನನ್ನು ಕುಡಿದರು (೬–೮). ದೊಡ್ಡ ದೊಡ್ಡ ಜೇನಿನ ಗೂಡುಗಳನ್ನು ಕಿತ್ತು ಜೇನನ್ನು ಬಾಯಿಗೆ ಹಿಂಡಿಕೊಂಡು ಗೂಡುಗಳನ್ನು ಎಸೆದರು. ಕೆಲವರು ಬೇಕಾದಷ್ಟು ಕುಡಿದು ಉಳಿದ ಜೇನನ್ನು ಚೆಲ್ಲಿದರು. ಕೆಲವರು ಜೇನಿನ ತಟ್ಟುಗಳಿಂದ ಹೊಡೆದಾಡಿದರು. ಮಧುಪಾನದಿಂದ ಮದವೇರಿ ಕೆಲವು ಕಪಿಗಳು ಮರದ ಕೊಂಬೆಗಳನ್ನು ಹಿಡಿದು ನಿಂತರು. ಕೆಲವರು ಎಲೆಗಳನ್ನು ಹಾಸಿ ಮಲಗಿಬಿಟ್ಟರು! (೯–೧೧). ಕೆಲವರು ಕುಡಿದು ಹುಚ್ಚರಂತಾಗಿ ಒಬ್ಬರನ್ನೊಬ್ಬರು ತಳ್ಳುತ್ತ ಎಡವುತ್ತ ಇದ್ದರು. ಕೆಲವರು ಸಿಂಹನಾದಮಾಡುವರು. ಕೆಲವರು ಕಿಲಕಿಲ ಶಬ್ದಮಾಡುವರು. ಕೆಲವರು ನೆಲದಮೇಲೆಯೇ ಮಲಗಿಬಿಡುವರು (೧೨–೧೩). ಏನಾದರೂ ಚೇಷ್ಟೆಮಾಡಿ ನಗತಕ್ಕವರು ಕೆಲವರು. ಅಳತಕ್ಕವರು ಕೆಲವರು! ಒಂದನ್ನು ಮಾಡಿ ಇನ್ನೊಂದನ್ನು ಹೇಳತಕ್ಕವರು ಕೆಲವರು.

ಏನನ್ನೋ ಹೇಳಿದರೆ ಇನ್ನೇನನ್ನೋ ತಿಳಿದುಕೊಳ್ಳತಕ್ಕವರು ಕೆಲವರು. ದಧಿಮುಖನ ಪರಿಚಾರಕರು ತಮಗೆ ಅಡ್ಡಿಮಾಡಿದರೆ ಈ ಭಯಂಕರ ಕಪಿಗಳು ಅವರನ್ನು ಹೊಡೆಷೋಡಿಸುತ್ತಿದ್ದರು (೧೪–೧೫). ಕೆಲವರು ವನಪಾಲಕರನ್ನು ಮೊಣಕಾಲುಗಳಲ್ಲಿ ಹಿಡಿದೆಳೆದು ಬೀಳಿಸಿ, ಅವರಿಗೆ ತಮ್ಮ ಅಪಾನದ್ವಾರಗಳನ್ನು ತೋರಿಸಿ ಹಂಗಿಸಿದರು. ಆಗ ವನಪಾಲಕರು ದುಃಖಿತರಾಗಿ ದಧಿಮುಖನ ಹತ್ತಿರ "ಸ್ವಾಮಿ, ಹನುಮಂತನ ಸಹಾಯಬಲದಿಂದ ಆ ಕಪಿಗಳು ನಮ್ಮ ಮಧುವನವನ್ನು ನಾಶಮಾಡಿಬಿಟ್ಟರು. ನಾವು ತಡೆಯುವುದಕ್ಕೆ ಹೋದರೆ, ನಮ್ಮ ಮೊಣಕಾಲುಗಳನ್ನು ಹಿಡಿದೆಳೆದು ತಮ್ಮ ಅಪಾನದ್ವಾರಗಳನ್ನು ತೋರಿಸಿ ಹಂಗಿಸುತ್ತಾರೆ" ಎಂದು ದೂರು ಹೇಳಿದರು (೧೬–೧೭). ಆಗ ದಧಿಮುಖನಿಗೆ ಬಹಳ ಕೋಪ ಉಂಟಾಯಿತು. ಅವನು ವನಪಾಲಕರಾದ ಆ ಕಪಿಗಳನ್ನು ಸಮಾಧಾನಪಡಿಸಿ "ನನ್ನೊಡನೆ ಬನ್ನಿರಿ. ಹೋಗೋಣ. ಮಧುವನವನ್ನು ಕುಡಿಯುತ್ತಿರುವ ಆ ಸೊಕ್ಕಿದ ಕಪಿಗಳನ್ನು ಬಲಾತ್ಕಾರದಿಂದ ತಡೆಯೋಣ" ಎಂದನು (೧೮–೧೯). ದಧಿಮುಖನ ಮಾತನ್ನು ಕೇಳಿ ಆ ವೀರರೆಲ್ಲರೂ ಒಟ್ಟುಗೂಡಿ ಮತ್ತೆ ಮಧುವನಕ್ಕೆ ಬಂದರು. ದಧಿಮುಖನು ಮರವೊಂದನ್ನು ಕಿತ್ತು ಹಿಡಿದುಕೊಂಡನು ಉಳಿದ ಕಪಿಗಳು ಬಂಡೆ, ಮರ, ಬೆಟ್ಟಗಳನ್ನು ಕಿತ್ತು ಹಿಡಿದುಕೊಂಡರು. ಎಲ್ಲರೂ ಸೇರಿ ಮಧುವನವನ್ನು ನಾಶಮಾಡುತ್ತಿದ್ದ ಕಪಿಗಳನ್ನು ಅಟ್ಟಿಸಿಕೊಂಡು ಬಂದರು (೨೦–೨೨). ವನಪಾಲಕರು ತಮ್ಮ ಒಡೆಯನ ಆಜ್ಞೆಯಂತೆ ಸಾಲವೃಕ್ಷ ಮೊದಲಾದವುಗಳನ್ನು ಹಿಡಿದು, ಮರದ ಮೇಲೆಯೂ ನೆಲದಮೇಲೆಯೂ ನಿಂತು ಹಾವಳಿ ಮಾಡುತ್ತಿದ್ದ ಕಪಿಗಳನ್ನು ಹೊಡೆಯಲಾರಂಭಿಸಿದರು. ದಧಿಮುಖನೇ ಕೋಪದಿಂದ ನುಗ್ಗಿ ಬರುತ್ತಿರುವುದನ್ನು ಕಂಡು ಹನುಮಂತನೇ ಮೊದಲಾದ ಕಪಿನಾಯಕರು ಅಲ್ಲಿಗೆ ಓಡಿ ಬಂದರು (೨೩–೨೫). ಆಗ ವೃಕ್ಷವನ್ನು ಎತ್ತಿ ಹಿಡಿದು ನುಗ್ಗಿಬರುತ್ತಿದ್ದ ಬಲಾಢ್ಯನಾದ ದಧಿಮುಖನನ್ನು ಕಂಡು ಕುಪಿತನಾದ ಅಂಗದನು ತನ್ನ ಕೈಗಳಿಂದಲೇ ಅವನನ್ನು ಅಪ್ಪಳಿಸಿ ಹೊಡೆದನು. ಅಂಗದನು ಮಧುಪಾನದಿಂದ ಮದವೇರಿದ್ದನು. ದಧಿಮುಖನು (ಸುಗ್ರೀವನಿಗೆ ಸೋದರಮಾವನಾದ್ದರಿಂದ) ತನಗೆ ಪೂಜ್ಯನೆಂಬುದನ್ನು ಅಂಗದನು ಗಮನಿಸಲಿಲ್ಲ. ಅವನು ದಧಿಮುಖನನ್ನು ಎತ್ತಿ ನೆಲದಮೇಲೆ ಬಲವಾಗಿ ಕುಕ್ಕಿಬಿಟ್ಟನು (೨೬–೨೭). ದಧಿಮುಖನ

ತೋಳು, ತೊಡೆ, ಹೆಗಲುಗಳು ಗಾಯಗೊಂಡು ಮೈಯೆಲ್ಲಾ ರಕ್ತಮಯ ವಾಯಿತು. ಸ್ವಲ್ಪಹೊತ್ತು ಅವನಿಗೆ ಎಚ್ಚರದಪ್ಪಿತು. ಆಮೇಲೆ ಚೇತರಿಸಿ ಕೊಂಡೆದ್ದು ಕ್ರುದ್ಧನಾದನು. ಅವನು ದೊಣ್ಣೆಯನ್ನು ಹಿಡಿದುಕೊಂಡು ಮಧು ಮತ್ತರಾದ ಕಪಿಗಳನ್ನು ಅಡ್ಡಗಟ್ಟಿದನು (೨೮–೨೯). ಆದರೆ ಅಂಗದಾದಿ ಕಪಿನಾಯಕರ ಎದುರಿಗೆ ನಿಲ್ಲಲಾರದೆ ಹೇಗೋ ತಪ್ಪಿಸಿಕೊಂಡುಹೋದನು. ಏಕಾಂತದಲ್ಲಿ ತನ್ನ ಸೇವಕರನ್ನು ಕರೆದು "ಈ ಕಪಿಗಳು ಹೀಗೇ ಇರಲಿ; ಈಗ ಸುಗ್ರೀವನು ಶ್ರೀರಾಮನೊಡನೆ ಇರತಕ್ಕ ಸ್ಥಳಕ್ಕೆ ಹೋಗೋಣ. ಇದೆಲ್ಲಾ ಅಂಗದನ ತಪ್ಪು ಎಂದು ಮಹಾರಾಜನಿಗೆ ತಿಳಿಸುತ್ತೇನೆ. ಸುಗ್ರೀವ ನಿಗೆ ಕೋಪಬಂದು ಈ ಕಪಿಗಳನ್ನೆಲ್ಲಾ ಕೊಲ್ಲಿಸಿಬಿಡುತ್ತಾನೆ (೩೦–೩೨). ಈ ಮಧುವನವೆಂದರೆ ಮಹಾತ್ಮನಾದ ಸುಗ್ರೀವನಿಗೆ ಬಹಳ ಪ್ರೀತಿ. ವಂಶ ಪರಂಪರೆಯಿಂದ ಈ ತೋಟ ಅವನಿಗೆ ಸೇರಿದೆ. ದಿವ್ಯವಾದ ಈ ವನಕ್ಕೆ ದೇವತೆಗಳಿಗೂ ಪ್ರವೇಶಿಸುವುದು ಸಾಧ್ಯವಿಲ್ಲ (೩೩). ಜೇನಿನ ಆಸೆಗೆ ನುಗ್ಗಿ ಬಂದಿರುವ ಈ ಕಪಿಗಳಿಗೆಲ್ಲಾ ಆಯಸ್ಸು ತೀರಿತೆಂದೇ ಭಾವಿಸಬೇಕು. ಇವರೆಲ್ಲರಿಗೂ ಸುಗ್ರೀವನು ಮರಣದಂಡನೆಯನ್ನು ವಿಧಿಸುವನು (೩೪). ರಾಜಾಜ್ಞೆಯನ್ನು ಧಿಕ್ಕರಿಸುವ ಈ ದುರಾತ್ಮರಿಗೆ ವಧೆಯೇ ಸರಿಯಾದ ಶಿಕ್ಷೆ. ಆಗಲೇ ನಮಗೆ ಇವರ ಮೇಲಿನ ಕೋಪದ ಸೇಡು ಸಫಲವಾಗುವುದು" ಎಂದನು. ದಧಿಮುಖನು ಹೀಗೆ ಹೇಳಿ ಆ ವನಪಾಲಕರನ್ನು ಜೊತೆಯಲ್ಲಿ ಕರೆದುಕೊಂಡು ಒಂದು ನಿಮಿಷಮಾತ್ರದಲ್ಲಿ ಸೂರ್ಯಪುತ್ರನಾದ ಸುಗ್ರೀವ ನಿರುವ ಸ್ಥಳಕ್ಕೆ ಹಾರಿ ಹೊರಟುಹೋದನು (೩೫–೩೭). ಅಲ್ಲಿ ಶ್ರೀರಾಮ, ಲಕ್ಷ್ಮಣ, ಸುಗ್ರೀವರು ಒಂದೆಡೆಯಲ್ಲಿರುವುದನ್ನು ಕಂಡು ಆಕಾಶಮಾರ್ಗವಾಗಿ ಸಮಭೂಮಿಯಲ್ಲಿಳಿದನು. ಮಹಾವೀರನಾಗಿದ್ದ ದಧಿಮುಖನು ವನಪಾಲಕರಿ ಗೆಲ್ಲಾ ಪ್ರಭುವಾಗಿದ್ದನು. ಅವನು ತನ್ನ ಭೃತ್ಯರೊಡನೆ ತಲೆಯಮೇಲೆ ಕೈಜೋಡಿಸಿಕೊಂಡು ದೈನ್ಯಭಾವದಿಂದ ಮುಂದೆ ಬಂದು ಸುಗ್ರೀವನ ಪಾದ ಗಳನ್ನು ಮುಟ್ಟಿ ನಮಸ್ಕರಿಸಿದನು (೩೮–೪೦).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಅರುವತ್ತೆರಡನೆಯ ಸರ್ಗ

*

## ಸರ್ಗ ೬೩

ದಧಿಮುಖನು ಸುಗ್ರೀವನಿಗೆ ಮಧುವನದ ಭಂಗವನ್ನು ತಿಳಿಸುವುದು. ಅಂಗದಾದಿ ವಾನರರು ಸೀತಾದರ್ಶನ ಮಾಡಿ ಬಂದಿದ್ದಾರೆಂದು ಊಹಿಸಿ, ಸುಗ್ರೀವನು ಅವರೆಲ್ಲರನ್ನೂ ಬೇಗನೆ ಕಳುಹಿಸುವಂತೆ ದಧಿಮುಖನಿಗೆ ಹೇಳುವುದು.

ಹೀಗೆ ತಲೆಬಾಗಿ ಪಾದಕ್ಕೆ ಬಿದ್ದ ದಧಿಮುಖನನ್ನು ನೋಡಿ ಸುಗ್ರೀವನಿಗೆ ಕಳವಳವಾಯಿತು. "ಹೇ ವೀರಾಗ್ರಣಿ, ಏಳು ಏಳು – ನನ್ನ ಕಾಲಿಗೆ ಬೀಳುವುದೇಕೆ? ಹೆದರಬೇಡ. ಎಲ್ಲಾ ಸಂಗತಿಯನ್ನೂ ತಿಳಿಸು" ಎಂದನು (೧–೨). ಅದರಿಂದ ಕೊಂಚ ಸಮಾಧಾನಗೊಂಡ ದಧಿಮುಖನು ಎದ್ದು ನಿಂತು "ಮಹಾರಾಜ, ನಿನ್ನ ತಂದೆಯಾದ ಋಕ್ಷರಜಸ್ಸಾಗಲಿ ನೀನಾಗಲಿ ವಾಲಿಯಾಗಲಿ ಮಧುವನದಲ್ಲಿ ಯಥೇಚ್ಛವಾಗಿ ವಿಹರಿಸಬಹುದೆಂದು ಯಾರಿಗೂ ಅನುಜ್ಞೆಯನ್ನು ಕೊಟ್ಟಿರಲಿಲ್ಲ. ಅಂತಹ ತೋಟವನ್ನು ಈಗ ಕಪಿಗಳು ತಿಂದು ತೇಗಿಬಿಟ್ಟರು (೩–೪). ನಮ್ಮ ಕಾವಲುಗಾರರು ಎಷ್ಟು ತಡೆದರೂ ತಲೆಗೆ ಹಚ್ಚಿಕೊಳ್ಳದೆ, ಹಣ್ಣುಗಳನ್ನು ತಿಂದು ಮಧುವನ್ನು ಕುಡಿಯುತ್ತಲೇ ಇದ್ದಾರೆ. ಕೆಲವನ್ನು ಚೆಲ್ಲುತ್ತಾರೆ. ಕೆಲವನ್ನು ತಿನ್ನುತ್ತಾರೆ. ನಾವು ಅಡ್ಡಿಪಡಿಸಿದರೆ ಹುಬ್ಬುಗಳನ್ನು ಕುಣಿಸುತ್ತಾರೆ! (೫–೬). ಈ ವನರಕ್ಷಕರು ಕೋಪಗೊಂಡು ಅವರಮೇಲೆ ಕೈಮಾಡಿದರು. ಆಗ ಅವರೆಲ್ಲರೂ ಸೇರಿ ಇವರನ್ನೇ ಹೊಡೆದರು. ಅವರು ಬಹುಮಂದಿ ಇದ್ದಾರೆ. ಕೆಂಗಣ್ಣಿನಿಂದ ನೋಡುತ್ತ ಕಾವಲುಗಾರರನ್ನೇ ಹೊಡೆದು ಓಡಿಸಿಬಿಟ್ಟರು. ನಮ್ಮನ್ನು ಕೈಗಳಿಂದ ಗುದ್ದಿದರು. ಮಂಡಿಗಳಿಂದ ತಿವಿದರು ಸಿಕ್ಕಿದಹಾಗೆ ಎಳೆದಾಡಿ ಗುದದ್ವಾರವನ್ನು ತೋರಿಸಿ ಹಂಗಿಸಿದರು (೭–೯). ಪ್ರಭುವಾದ ನೀನಿರುವಾಗ ನಮ್ಮವರನ್ನು ಈ ರೀತಿಯಲ್ಲಿ ಹೊಡೆದು ಬಿಟ್ಟರಲ್ಲ! ಮಧುವನವನ್ನೆಲ್ಲಾ ಯಥೇಷ್ಟವಾಗಿ ತಿಂದು ತೇಗುತ್ತಿರುವರಲ್ಲ!" ಎಂದು ವಿಜ್ಞಾಪಿಸುತ್ತಿದ್ದನು. ಅಷ್ಟರಲ್ಲಿ ಮಹಾಪ್ರಾಜ್ಞನಾದ ಲಕ್ಷ್ಮಣನು ಸುಗ್ರೀವನನ್ನುದ್ದೇಶಿಸಿ "ವಾನರೇಶ್ವರ, ಈ ವನಪಾಲಕನು ಏಕೆ ಬಂದಿದ್ದಾನೆ? ದುಃಖದಿಂದ ಇವನು ಅರಿಕೆಮಾಡಿಕೊಳ್ಳುತ್ತಿರುವುದೇನು?" ಎಂದು ಕೇಳಿದನು (೧೦–೧೨). ಆಗ ವಾಗ್ವಿಶಾರದನಾದ ಸುಗ್ರೀವನು "ಆರ್ಯ–ಲಕ್ಷ್ಮಣ, ಅಂಗದ ಮೊದಲಾದ ಕಪಿವೀರರು ನಮ್ಮ ಮಧುವನಕ್ಕೆ ನುಗ್ಗಿ ಸ್ವೇಚ್ಛೆಯಾಗಿ

ಮಧುವನ್ನು ಕುಡಿಯುತ್ತಿದ್ದಾರೆಂದು ಈ ದಧಿಮುಖನು ಹೇಳುತ್ತಿದ್ದಾನೆ. ಅವರು ದಕ್ಷಿಣದಿಕ್ಕಿನಲ್ಲಿ ಸೀತಾದೇವಿಯನ್ನು ಹುಡುಕಿ ಬಂದಿದ್ದಾರೆ. ಉದ್ದೇಶಿಸಿದ ಕಾರ್ಯವನ್ನು ಅವರು ಸಾಧಿಸಿಕೊಂಡು ಬಂದಿರಬೇಕು. ಇಲ್ಲದಿದ್ದರೆ ಇಂತಹ ಕೆಲಸವನ್ನು ಎಂದಿಗೂ ಮಾಡುತ್ತಿರಲಿಲ್ಲ (೧೩–೧೫). ಅವರು ಬರುತ್ತಿರುವಾಗಲೇ ಮಧುವನವನ್ನು ಅಪ್ಪಣೆ ಇಲ್ಲದೆ ಪ್ರವೇಶಿಸಿ ಅದನ್ನು ಯಥೇಷ್ಟವಾಗಿ ಬಳಸಿಕೊಂಡಿದ್ದಾರೆ. ಮಧುವನಕ್ಕೆ ಕಪಿಗಳು ನುಗ್ಗಿದರೆಂದರೆ, ಅವರು ಕಾರ್ಯವನ್ನು ಸಾಧಿಸಿಕೊಂಡು ಬಂದಿದ್ದಾರೆಂದು ಅರ್ಥ! ದೇವಿಯನ್ನು ನೋಡಿಬಂದಿದ್ದಾರೆ. ಸಂದೇಹವೇ ಇಲ್ಲ. ಆದರಲ್ಲಿಯೂ ಹನುಮಂತನೇ ನೋಡಿರಬೇಕು (೧೬–೧೭). ಈ ಕಾರ್ಯವನ್ನು ಸಾಧಿಸುವುದಕ್ಕೆ ಹನುಮಂತನನ್ನು ಬಿಟ್ಟರೆ ಇನ್ನೊಬ್ಬನು ಇಲ್ಲ. ಕಾರ್ಯವನ್ನು ಸಾಧಿಸುವ ಸಾಮರ್ಥ್ಯ, ಬುದ್ಧಿ, ಪ್ರಯತ್ನ, ಪರಾಕ್ರಮ, ವಿದ್ಯೆ–ಇವುಗಳೆಲ್ಲವೂ ಆ ವಾನರಶ್ರೇಷ್ಠನಲ್ಲಿ ನೆಲಸಿವೆ. ಜಾಂಬವಂತ, ಅಂಗದ, ಹನುಮಂತ – ಈ ಮೂವರೂ ಸೇರಿದಲ್ಲಿ ಕಾರ್ಯವು ಫಲಿಸಿಯೇ ತೀರುತ್ತದೆ. ವಿಫಲವೆಂಬ ಮಾತೇ ಇಲ್ಲ. ಅಂಗದ ಮೊದಲಾದ ವೀರರು ಮಧುವನವನ್ನು ಹಾಳುಮಾಡಿಬಿಟ್ಟರಂತೆ (೧೮–೨೦). ಈ ವನಪಾಲಕರು ಹೋಗಿ ತಡೆದರೆ, ಇವರನ್ನು ಮಂಡಿಯಿಂದ ತಿವಿದುಬಿಟ್ಟರಂತೆ. ಇದಕ್ಕೋಸ್ಕರ ಈತನು ಬಂದಿದ್ದಾನೆ. ಇವನ ಹೆಸರು ದಧಿಮುಖ. ಸೌಮ್ಯವಾಗಿ ಮಾತನಾಡತಕ್ಕವನು. ಆದರೆ ಮಹಾಪರಾಕ್ರಮಿ. ಲಕ್ಷ್ಮಣ, ನಿಜವಾಗಿಯೂ ವಾನರರು ಸೀತಾದೇವಿಯನ್ನು ಕಂಡುಬಂದಿದ್ದಾರೆ! (೨೧–೨೨). ಆದ್ದರಿಂದಲೇ ಮಧುವನಕ್ಕೆ ಹೋಗಿ ಮಧುವನ್ನು ಕುಡಿಯುತ್ತಿದ್ದಾರೆ. ಪ್ರಖ್ಯಾತರಾದ ಆ ಕಪಿವೀರರು ವೈದೇಹಿಯನ್ನು ಕಾಣದೆ ಬಂದಿದ್ದರೆ, ಅಲ್ಲಿಗೆ ಎಂದಿಗೂ ನುಗ್ಗುತ್ತಿರಲಿಲ್ಲ. ಮಧುವನವೆಂದರೆ ದೇವತೆಗಳು ನಮಗೆ ವರವಾಗಿ ಕೊಟ್ಟಿರುವ ದಿವ್ಯವಾದ ತೋಟ" ಎಂದು ಹೇಳಿದನು (೨೩–೨೫). ಸುಗ್ರೀವನ ಬಾಯಿಂದ ಹೊರಟ ಕರ್ಣಾಮೃತಪ್ರಾಯವಾದ ಮಾತನ್ನು ಕೇಳಿ ರಾಮಲಕ್ಷ್ಮಣರಿಗೆ ಪರಮಾನಂದವಾಯಿತು. ದಧಿಮುಖನು ವಾನರರ ತುಂಟತನವನ್ನು ಹೇಳಿದರೆ, ಸುಗ್ರೀವನಿಗೆ ಸಂತೋಷವೇ ಆಯಿತು. ಅವನು ದಧಿಮುಖನಿಗೆ "ಕಾರ್ಯವನ್ನು ಸಾಧಿಸಿಕೊಂಡು ಬಂದಿರುವ ಆ ವಾನರರು ಅಲ್ಲಿ ಮಧುಪಾನ ಮಾಡಿದುದರಿಂದ ನನಗೆ ಸಂತೋಷವೇ ಸರಿ. ಅವರ ಚೇಷ್ಟೆಯನ್ನು

ನಾನು ಕ್ಷಮಿಸಿದ್ದೇನೆ. ಅದು ಕ್ಷಮಿಸಬೇಕಾದದ್ದೇ (೨೫–೨೭). ಕೃತಕೃತ್ಯರಾಗಿ ಬಂದಿರುವ ಸಿಂಹಪರಾಕ್ರಮಿಗಳಾದ ಕಪಿಶ್ರೇಷ್ಠರನ್ನೂ ಹನುಮಂತನನ್ನೂ ನಾನೂ ಶ್ರೀರಾಮಲಕ್ಷ್ಮಣರೂ ಕೂಡಲೇ ನೋಡಬೇಕಾಗಿದೆ. ಸೀತಾದೇವಿಯನ್ನು ಹುಡುಕಲು ಅವರು ಮಾಡಿದ ಪ್ರಯತ್ನವನ್ನು ಕೇಳಬೇಕಾಗಿದೆ" (ಅವರನ್ನು ಬೇಗನೆ ಕಳುಹಿಸು) ಎಂದು ಹೇಳಿದನು (೨೮). ತಮ್ಮ ಕಾರ್ಯವು ಸಿದ್ಧಿಸಿತೆಂದು ಆನಂದದಿಂದ ರಾಮಲಕ್ಷ್ಮಣರ ನೇತ್ರಗಳು ಅರಳಿದವು. ಮೈಯಲ್ಲಿ ರೋಮಾಂಚವಾಯಿತು. ವಾನರೇಂದ್ರನೂ ಅವರನ್ನು ನೋಡುತ್ತ ಪುಳಕಿತಗಾತ್ರನಾಗಿ, ಕಾರ್ಯವು ಕೈಗೂಡಿತೆಂದು ಹರ್ಷದಿಂದ ಹಿಗ್ಗಿದನು (೨೯).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಅರುವತ್ತುಮೂರನೆಯ ಸರ್ಗ

---

## ಸರ್ಗ ೬೪

ದಧಿಮುಖನು ಮಧುವನಕ್ಕೆ ಹೋಗಿ ಸುಗ್ರೀವನ ಆಜ್ಞೆಯನ್ನು ಅಂಗದನಿಗೆ ಹೇಳುವುದು. ಅಂಗದನು ವಾನರರೊಡನೆ ಸುಗ್ರೀವನ ಬಳಿಗೆ ಬರುವುದು.

ಸುಗ್ರೀವನ ಮಾತಿನಿಂದ ದಧಿಮುಖನ ಕೋಪವು ಶಾಂತವಾಯಿತು. ಅವನು ಹರ್ಷದಿಂದ ರಾಮಲಕ್ಷ್ಮಣಸುಗ್ರೀವರಿಗೆ ವಂದಿಸಿ ವನಪಾಲಕರೊಡನೆ ಅಂತರಿಕ್ಷಕ್ಕೆ ಹಾರಿ, ವೇಗದಿಂದ ಹಿಂತಿರುಗಿ ಬಂದು ಮಧುವನವನ್ನು ಪ್ರವೇಶಿಸಿದನು (೧–೨). ಅಷ್ಟರಲ್ಲಿ ಕಪಿನಾಯಕರಿಗೆ ಮಧುಪಾನದ ಮದವು ಇಳಿದಿತ್ತು. ಅವರು ಮೂತ್ರವನ್ನು ಬಿಡುತ್ತಿದ್ದರು. ದಧಿಮುಖನು ಅಂಗದನ ಬಳಿಗೆ ಹೋಗಿ ಕೈಮುಗಿದುಕೊಂಡು ಮೃದುನುಡಿಗಳಿಂದ "ಸೌಮ್ಯ! ಕಾವಲುಗಾರರು ತಿಳುವಳಿಕೆಯಿಲ್ಲದೆ ಸಿಟ್ಟಿನಿಂದ ನಿಮ್ಮನ್ನು ತಡೆದುಬಿಟ್ಟರು. ಇದಕ್ಕಾಗಿ ಕೋಪಿಸಿಕೊಳ್ಳಬಾರದು (೩–೬). ನೀನು ಯುವರಾಜ. ಈ ವನಕ್ಕೆ ಒಡೆಯ. ಅಜ್ಞಾನದಿಂದ ಆದ ತಪ್ಪನ್ನು ಕ್ಷಮಿಸಬೇಕು. ವಾನರೋತ್ತಮ, ಹಿಂದೆ ನಿನ್ನ ತಂದೆಯು ಕಪಿಗಳಿಗೆ ಅಧಿಪತಿಯಾಗಿದ್ದಂತೆ ಈಗ ಸುಗ್ರೀವನೂ ನೀನೂ ಆಗಿದ್ದೀರಿ (೭–೮). ನಾನು ಹೋಗಿ ನಿನ್ನ ಚಿಕ್ಕಪ್ಪನಿಗೆ ನೀವೆಲ್ಲರೂ ಇಲ್ಲಿಗೆ

ಬಂದಿರುವ ಸಂಗತಿಯನ್ನು ತಿಳಿಸಿದೆನು. ನೀವು ಮಧುವನವನ್ನು ಆಕ್ರಮಿಸಿ ನುಗ್ಗಿದ ಸುದ್ದಿಯನ್ನು ಕೇಳಿ ಸುಗ್ರೀವನು ಸಂತೋಷಪಟ್ಟನೇ ಹೊರತು ಕೋಪಗೊಳ್ಳಲಿಲ್ಲ (೯-೧೦). ನಿನ್ನ ಚಿಕ್ಕಪ್ಪನಾದ ಸುಗ್ರೀವ ಮಹಾರಾಜನು ಹರ್ಷದಿಂದ ನಿಮ್ಮೆಲ್ಲರನ್ನೂ ಬೇಗನೆ ಅಲ್ಲಿಗೆ ಕಳಿಸುವಂತ ನನಗೆ ಹೇಳಿದ್ದಾನೆ" ಎಂದನು. ಇದನ್ನು ಕೇಳಿ ಅಂಗದನು ಅಲ್ಲಿದ್ದ ವಾನರರನ್ನು ಕುರಿತು "ಎಲೈ ಕಪಿವೀರರೆ, ನಾವು ಇಲ್ಲಿಗೆ ಬಂದಿರುವ ವೃತ್ತಾಂತವು ಶ್ರೀರಾಮನ ಕಿವಿಗೆ ಮುಟ್ಟಿದಂತಿದೆ. ಕೆಲಸವಾದಮೇಲೆ ನಾವು ಇಲ್ಲಿರುವುದು ಸರಿಯಲ್ಲ (೧೧-೧೩). ನೀವೆಲ್ಲರೂ ಸ್ವೇಚ್ಛೆಯಾಗಿ ಮಧುವನ್ನು ಕುಡಿದು ವಿಶ್ರಮಿಸಿದ್ದೀರಿ. ಇನ್ನು ನಮಗೆ ಕೆಲಸವೇನು? ಪ್ರಭುವಾದ ಸುಗ್ರೀವನ ಬಳಿಗೆ ಹೋಗು ವುದೊಂದೇ ಉಳಿದಿದೆ. ನೀವೆಲ್ಲರೂ ಹೇಳಿದಂತೆ ನಾನು ಮಾಡತಕ್ಕವನು. ನಾನು ನಿಮಗೆ ಅಧೀನ. ಯುವರಾಜನಾಗಿದ್ದರೂ ನಾನು ನಿಮಗೆ ಆಜ್ಞೆ ಮಾಡಲಾರೆ. ಕಾರ್ಯಸಾಧನೆಯನ್ನು ಮಾಡಿಕೊಂಡು ಬಂದಿದ್ದೀರಿ. ನಿಮ್ಮನ್ನು ನಾನು ಬಲಾತ್ಕರಿಸಬಾರದು" ಎಂದನು (೧೪-೧೬). ಅಂಗದನ ನುಡಿಯನ್ನು ಕೇಳಿ ವಾನರನಾಯಕರಿಗೆ ಹರ್ಷವಾಯಿತು. ಅವರು "ಯುವರಾಜ, ಯಾವ ಪ್ರಭುವು ಹೀಗೆ ಹೇಳುತ್ತಾನೆ? ಅಧಿಕಾರದ ಮದದಿಂದ ಮೈಮರೆತು ಪ್ರತಿಯೊಬ್ಬನೂ ನಾನೇ ಹೆಚ್ಚು ಎಂದು ಅಹಂಕಾರಪಡುತ್ತಾನೆ (೧೭-೧೮). ಇಂತಹ ವಿನಯಪೂರ್ಣವಾದ ವಚನವು ನಿನಗೆ ಒಪ್ಪುತ್ತದೆ. ಈ ವಿನಯವೇ ನಿನಗೆ ಮುಂದೆ ಬರುವ ಶ್ರೇಯಸ್ಸನ್ನು ಸೂಚಿಸುತ್ತದೆ. ನಾವೆಲ್ಲರೂ ಪ್ರಭು ವಾದ ಸುಗ್ರೀವನಿರುವಲ್ಲಿಗೆ ಹೋಗಲು ಸಿದ್ಧರಾಗಿದ್ದೇವೆ (೧೯-೨೦). ನಿನ್ನ ಅಪ್ಪಣೆಯಿಲ್ಲದೆ ಒಂದು ಹೆಜ್ಜೆ ಆಚೆ ಹೋಗಲೂ ನಮ್ಮಿಂದ ಸಾಧ್ಯವಿಲ್ಲ. ಇದು ಸತ್ಯವಾದ ಮಾತು" ಎಂದು ನುಡಿದರು. ಅವರು ಹಾಗೆ ಹೇಳುತ್ತಿರುವಾಗಲೇ ಅಂಗದನು 'ಸರಿ, ಹಾಗಾದರೆ ಹೊರಡೋಣ' ಎಂದು ನುಡಿದು ನೆಲದಿಂದ ಹಾರಿದನು (೨೧-೨೨). ಕೂಡಲೇ ಅವನ ಹಿಂದೆ ಕಪಿಗಳೆಲ್ಲರೂ ಯಂತ್ರ ದಿಂದ ಹಾರಿಸಿದ ಬೆಟ್ಟಗಳಂತೆ, ಛಂಗನೆ ಆಕಾಶಕ್ಕೆ ನೆಗೆದು ಬಿರುಗಾಳಿಯು ತಳ್ಳಿಕೊಂಡು ಹೋಗುವ ಮಹಾಮೇಘದಂತೆ ಅಬ್ಬರಿಸುತ್ತ ನಾಗಿದರು (೨೩-೨೪). ಇತ್ತಲಾಗಿ ಅಂಗದನು ಬಂದಿಳಿಯುವುದಕ್ಕೆ ಮೊದಲು ಸುಗ್ರೀವನು ವಿರಹದುಃಖಿತನಾದ ಶ್ರೀರಾಮನನ್ನು ಕುರಿತು "ರಾಮ, ಇನ್ನು ಸಮಾಧಾನ

ದಿಂದಿರು. ನಿನಗೆ ಮಂಗಳವಾಗಲಿ. ವಾನರರು ದೇವಿಯನ್ನು ಸಂದರ್ಶಿಸಿದ್ದಾರೆ. ಇದು ನಿಶ್ಚಯ. ಇಲ್ಲದಿದ್ದರೆ ಈ ವಾನರರು ನಾವು ಗೊತ್ತುಮಾಡಿದ ಸಮಯ ವನ್ನು ಮೀರಿ ಎಂದಿಗೂ ಬರುತ್ತಿರಲಿಲ್ಲ (೨೫–೨೬). ಅದರಲ್ಲಿಯೂ ಯುವ ರಾಜನಾದ ಅಂಗದನು, ತಾನು ಹೋದ ಕೆಲಸವು ನೆರವೇರದ ಪಕ್ಷದಲ್ಲಿ ನನ್ನ ಬಳಿಗೆ ಬರುತ್ತಲೇ ಇರಲಿಲ್ಲ. ಒಂದುವೇಳೆ ಕಪಿಗಳು ಕಾರ್ಯವನ್ನು ಸಾಧಿಸದೆ ಮಧುವನದಲ್ಲಿ ಹಾವಳಿಯನ್ನು ನಡೆಸಿದ್ದರೆ, ಅಂಗದನ ಮುಖವು ಬಾಡಿ ಏನೂ ತೋರದೆ ದಿಗ್ಭ್ರಾಂತನಾಗಿಬಿಡುತ್ತಿದ್ದನು(೨೭–೨೮). ನಮ್ಮ ತಂದೆ ತಾತಂದಿರ ಕಾಲದಿಂದ ಮಧುವನವು ನಮಗೆ ಸೇರಿದೆ. ಹಿರಿಯರು ಕಷ್ಟಪಟ್ಟು ಅದನ್ನು ರಕ್ಷಿಸಿಕೊಂಡು ಬಂದಿದ್ದಾರೆ. ಯುವರಾಜನು ಆನಂದಪರವಶನಾಗದೆ ಇದ್ದರೆ ಮಧುವನವನ್ನು ಹಾಳುಮಾಡುತ್ತಿರಲಿಲ್ಲ (೨೯). ರಾಮ, ನಿನ್ನನ್ನು ಪಡೆದ ಕೌಸಲ್ಯಾದೇವಿಯು ಧನ್ಯಳು. ಸಮಾಧಾನಮಾಡಿಕೊ. ಸೀತಾದೇವಿಯನ್ನು ನೋಡಿಬಂದುದರಲ್ಲಿ ಸಂದೇಹವೇ ಇಲ್ಲ. ನೋಡಿದವನು ಹನುಮಂತನಲ್ಲದೆ ಇನ್ನೊಬ್ಬನಲ್ಲ! (೩೦). ಹನುಮಂತನಲ್ಲದೆ ಇನ್ನೊಬ್ಬನು ಈ ಕಾರ್ಯವನ್ನು ಸಾಧಿಸಲಾರನು. ಸೂರ್ಯನಲ್ಲಿ ತೇಜಸ್ಸು ನೆಲಸಿರುವಂತೆ, ಹನುಮಂತನಲ್ಲಿ ಕಾರ್ಯಸಿದ್ಧಿ, ಬುದ್ಧಿ, ಉದ್ಯೋಗ, ಪರಾಕ್ರಮಗಳು ಸದಾ ನೆಲಸಿರುತ್ತವೆ. ಅಂಗದನು ಅಧಿಪತಿಯಾಗಿ, ಜಾಂಬವಂತನು ಮಾರ್ಗದರ್ಶಿಯಾಗಿ, ಹನುಮಂತನು ಕಾರ್ಯಸಾಧಕನಾಗಿ ನಿಂತಿರುವಾಗ, ಆ ಕಾರ್ಯವು ಸಿದ್ಧಿಸದೆ ಎಂದಿಗೂ ಇರಲಾರದು. ಹೇ ವೀರಾಗ್ರಣಿ, ಚಿಂತಿಸಬೇಡ" ಎಂದು ನುಡಿದನು (೩೧–೩೩). ಅಷ್ಟರಲ್ಲಿ ಕಪಿಗಳ ಕಿಲಕಿಲಧ್ವನಿಯು ಆಕಾಶದಲ್ಲಿ ಕೇಳಬಂದಿತು. ಹನುಮಂತನ ಕಾರ್ಯಸಾಧನೆಯಿಂದ ಹೆಮ್ಮೆಗೊಂಡ ವಾನರಸೈನ್ಯವು ಕಿಷ್ಕಿಂಧೆಯ ಕಡೆಗೆ ಧಾವಿಸಿ ಬರುತ್ತಿದ್ದಿತು. ಕಾರ್ಯಸಿದ್ಧಿಯಾಯಿತೆಂದು ದೂರದಿಂದಲೇ ಕೂಗಿ ಹೇಳುವಂತೆ ವಾನರರು ಗರ್ಜಿಸುತ್ತಿದ್ದರು. ಗದ್ದಲವನ್ನು ಕೇಳಿ ಸುಗ್ರೀವನು ಹರ್ಷದಿಂದ ತನ್ನ ಬಾಲವನ್ನು ಉದ್ದಕ್ಕೆ ಬೀಸಿ ಅಲ್ಲಾಡಿಸ ತೊಡಗಿದನು! (೩೪–೩೫). ಕಪಿಗಳು ಶ್ರೀರಾಮನನ್ನು ನೋಡುವುದಕ್ಕಾಗಿ ಆನಂದದಿಂದ ಹಿಗ್ಗುತ್ತ ಬರುತ್ತಿದ್ದರು. ಅವರ ಮುಂದುಗಡೆ ಅಂಗದನೂ ಆಂಜನೇಯನೂ ಬರುತ್ತಿದ್ದರು (೩೬–೩೭). ಅವರೆಲ್ಲರೂ ಶ್ರೀರಾಮಸುಗ್ರೀವರ ಸಮೀಪದಲ್ಲಿ ನೆಲದಮೇಲೆ ಇಳಿದರು. ಹನುಮಂತನು ಶ್ರೀರಾಮನಿಗೆ

ತಲೆಬಾಗಿ "ದೇವಿಯು ನಿಯಮಶೀಲೆಯಾಗಿ ಕುಶಲದಿಂದ ಇದ್ದಾಳೆ" ಎಂದು ನಿವೇದಿಸಿದನು. ಹನುಮಂತನೇ ಈ ಕಾರ್ಯವನ್ನು ಸಾಧಿಸಿದ್ದಾನೆಂದು ಸುಗ್ರೀವನಿಗೆ ನಿಶ್ಚಯವಾಯಿತು (೩೮-೩೯). ಲಕ್ಷ್ಮಣನು ಸಂಪ್ರೀತನಾಗಿ ಆದರದಿಂದ ಹನುಮಂತನನ್ನೇ ನೋಡುತ್ತ ನಿಂತನು. ಶ್ರೀರಾಮಚಂದ್ರನು ಸಂತುಷ್ಟನಾಗಿ ಗೌರವಬುದ್ಧಿಯಿಂದ ಹನುಮಂತನನ್ನು ನೋಡಿದನು (೪೦).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಅರುವತ್ತುನಾಲ್ಕನೆಯ ಸರ್ಗ

---

## ಸರ್ಗ ೬೫

ಹನುಮಂತನು ಶ್ರೀರಾಮನಿಗೆ ಸೀತಾವೃತ್ತಾಂತವನ್ನೂ, ಸೀತೆಯ ಸಂದೇಶವನ್ನೂ ತಿಳಿಸಿ, ಚೂಡಾಮಣಿಯನ್ನು ಅರ್ಪಿಸುವುದು.

ಹೀಗೆ ಆ ವಾನರರು ಅಂಗದನನ್ನು ಮುಂದಿಟ್ಟುಕೊಂಡು ವಿಚಿತ್ರವನಗಳಿಂದ ತುಂಬಿದ ಪ್ರಸ್ರವಣಪರ್ವತಕ್ಕೆ ಬಂದು, ರಾಮಲಕ್ಷ್ಮಣಸುಗ್ರೀವರಿಗೆ ಅಭಿವಂದಿಸಿ ಸೀತಾವೃತ್ತಾಂತವನ್ನು ಹೇಳಲುಪಕ್ರಮಿಸಿದರು(೧-೨). ಅವರೆಲ್ಲರೂ 'ಸೀತಾದೇವಿಯು ರಾವಣನ ಅಂತಃಪುರದಲ್ಲಿ ಬಂದಿಯಾಗಿದ್ದಾಳೆ. ರಾಕ್ಷಸಿಯರು ಆಕೆಯನ್ನು ಹೆದರಿಸುತ್ತಿದ್ದಾರೆ. ಸೀತೆಯು ರಾಮನಲ್ಲಿಯೇ ಅನುರಾಗವನ್ನು ಇಟ್ಟಿದ್ದಾಳೆ. ರಾವಣನು ಆಕೆಗೆ ಇನ್ನು ಎರಡು ತಿಂಗಳು ಮಾತ್ರ ಅವಧಿಯನ್ನು ಕೊಟ್ಟಿದ್ದಾನೆ' ಎಂಬ ವಿಷಯವನ್ನು ತಿಳಿಸಿದರು (೩). ಶ್ರೀರಾಮನು ಮುಖ್ಯವಾಗಿ ಸೀತೆಯು ಯಾವ ಅಪಾಯವೂ ಇಲ್ಲದೆ ಜೀವಿಸಿದ್ದಾಳೆಂಬುದನ್ನರಿತು "ಎಲೈ ವಾನರರೆ, ಸೀತಾದೇವಿಯು ಎಲ್ಲಿದ್ದಾಳೆ? ನನ್ನ ವಿಷಯದಲ್ಲಿ ಅವಳ ಮನಸ್ಸು ಹೇಗಿದೆ? ಸೀತೆಯ ವೃತ್ತಾಂತವೆಲ್ಲವನ್ನೂ ವಿಶದವಾಗಿ ತಿಳಿಸಿರಿ" ಎಂದು ಕೇಳಿದನು (೪-೫). ಆಗ ವಾನರರು ಸೀತಾವೃತ್ತಾಂತವನ್ನು ಚೆನ್ನಾಗಿ ಬಲ್ಲ ಹನುಮಂತನನ್ನು ನೋಡಿ "ಹನುಮಂತ, ಶ್ರೀರಾಮನಿಗೆ ಎಲ್ಲವನ್ನೂ ತಿಳಿಸು!" ಎಂದರು. ಅನಂತರ ಆಂಜನೇಯನು ಸೀತೆಯಿದ್ದ ದಿಕ್ಕಿಗೆ ತಿರುಗಿ ಅವಳಿಗೆ ತಲೆಬಾಗಿ ವಂದಿಸಿ, ಸೀತೆಯನ್ನು ಕಂಡುಬಂದ ಸಂಗತಿ

ಯನ್ನು ಹೇಳಲಾರಂಭಿಸಿದನು. ಆಂಜನೇಯನು ಮಾತನಾಡುವ ಕಲೆಯಲ್ಲಿ ಪ್ರವೀಣ (೬–೭) "ದೇವ, ನಾನು ಸೀತಾದೇವಿಯನ್ನು ಹುಡುಕುವುದಕ್ಕಾಗಿ ನೂರುಯೋಜನ ವಿಸ್ತಾರವಾದ ಸಮುದ್ರವನ್ನು ದಾಟಿಹೋದೆನು. ಅಲ್ಲಿ ಲಂಕೆ ಎಂಬ ಹೆಸರಿನ ಒಂದು ನಗರವಿದೆ. ಅದು ದುರಾತ್ಮನಾದ ರಾವಣನ ರಾಜಧಾನಿ. ಅದು ದಕ್ಷಿಣ ಸಮುದ್ರದ ಆಚೆಯ ದಡದಲ್ಲಿದೆ. ರಾವಣನ ಆ ನಗರದಲ್ಲಿ ನಾನು ಸಾಧ್ವಿಯಾದ ಸೀತಾದೇವಿಯನ್ನು ಕಂಡೆನು (೮–೧೦). ಶ್ರೀರಾಮ, ಅವಳು ಮುಂದಿನ ಆಸೆಯನ್ನೆಲ್ಲಾ ನಿನಗೊಪ್ಪಿಸಿ ನಿನ್ನನ್ನೇ ನಂಬಿ ಜೀವವನ್ನು ಹಿಡಿದು ಕೊಂಡಿರುವಳು. ರಾಕ್ಷಸಿಯರು ಅವಳನ್ನು ಸುತ್ತುಗಟ್ಟಿ ಪದೇ ಪದೇ ಹೆದರಿಸು ವುದನ್ನು ನಾನು ನೋಡಿದೆ. ವಿಕಾರರೂಪಿನ ರಾಕ್ಷಸಿಯರು ಉದ್ಯಾನವನದಲ್ಲಿ ಅವಳನ್ನು ಕಾಯುತ್ತಿದ್ದಾರೆ. ಸೀತಾದೇವಿಯು ಅತ್ಯಂತ ದುಃಖದಲ್ಲಿದ್ದಾಳೆ. ಆ ಸಾಧ್ವಿಗೆ ಅಂತಹ ಕಷ್ಟ ಬರಬಾರದು (೧೧–೧೨). ರಾವಣನ ನಗರದಲ್ಲಿ ಸೆರೆಯಾಗಿಬಿಟ್ಟಿದ್ದಾಳೆ. ರಾಕ್ಷಸಿಯರು ಬಹುಎಚ್ಚರಿಕೆಯಿಂದ ಕಾಯುತ್ತಿದ್ದಾರೆ. ದೇವಿಯು ಒಂಟಿ ಜಡೆಯನ್ನು ಬಿಟ್ಟು ದೈನ್ಯದಿಂದ ನಿನ್ನನ್ನೇ ಧ್ಯಾನಿಸುತ್ತಿದ್ದಾಳೆ. ನೆಲದಮೇಲೆ ಮಲಗುತ್ತಾಳೆ. ಕಂದಿಹೋಗಿದ್ದಾಳೆ. ಚಳಿಗಾಲದ ತಾವರೆಯ ಬಳ್ಳಿಯಂತೆ ಆಗಿಬಿಟ್ಟಿದ್ದಾಳೆ. ರಾವಣನಿಂದ ಉಳಿಗಾಲವಿಲ್ಲವೆಂದು ಭಾವಿಸಿ, ತಾನು ಆತ್ಮಹತ್ಯೆಮಾಡಿಕೊಳ್ಳಬೇಕೆಂದು ನಿರ್ಧರಿಸಿಕೊಂಡಿದ್ದಾಳೆ(೧೩–೧೪). ಶ್ರೀರಾಮ, ನಿನ್ನನ್ನೇ ಧ್ಯಾನಿಸುತ್ತಿರುವ ದೇವಿಯನ್ನು ನಾನು ಹೇಗೋ ಪ್ರಯತ್ನಪಟ್ಟು ಹುಡುಕಿದೆನು. ನಾನು ಮೊದಲು ನಿನ್ನ ಇಕ್ಷ್ವಾಕುವಂಶದ ಖ್ಯಾತಿಯನ್ನು ಹೊಗಳುತ್ತ, ಅವಳಿಗೆ ನನ್ನಲ್ಲಿ ನಂಬಿಕೆಯುಂಟಾಗುವಂತೆ ಮಾಡಿಕೊಂಡೆನು. ಅನಂತರ ಅವಳೊಡನೆ ಸಂಭಾಷಣೆಯನ್ನಾರಂಭಿಸಿ ಸಮಸ್ತ ವಿಷಯವನ್ನೂ ತಿಳಿಸಿದೆನು (೧೫–೧೬). ನಿನಗೂ ಸುಗ್ರೀವನಿಗೂ ಸ್ನೇಹ ವಾಗಿದೆ ಎಂಬುದನ್ನು ಕೇಳಿ, ಬಹಳ ಸಂತೋಷಪಟ್ಟಳು. ಸೀತಾದೇವಿಯು ಪರಿಶುದ್ಧವಾದ ನಡತೆಯನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡಿದ್ದಾಳೆ. ನಿನ್ನಲ್ಲಿ ದೃಢವಾದ ಭಕ್ತಿಯನ್ನು ಇಟ್ಟಿದ್ದಾಳೆ (೧೭). ಹೇ ಪುರುಷೋತ್ತಮ, ಈ ರೀತಿ ಯಲ್ಲಿ ನಾನು ಮಹಾತ್ಮಳಾದ ಜಾನಕಿಯನ್ನು ನೋಡಿದೆನು. ಅವಳು ಪಾತಿವ್ರತ್ಯವೆಂಬ ಉಗ್ರವಾದ ತಪಸ್ಸನ್ನಾಚರಿಸುತ್ತ ನಿನ್ನಲ್ಲಿ ಭಕ್ತಿಯಿಂದಿರು ವಳು (೧೮). ಚಿತ್ರಕೂಟದಲ್ಲಿದ್ದಾಗ ನಡೆದ ವಾಯಸವೃತ್ತಾಂತವೊಂದನ್ನು

ನಿನಗೆ ಗುರುತಿಗಾಗಿ ನನ್ನೊಡನೆ ಹೇಳಿದಳು. ಸೀತಾದೇವಿಯು 'ವಾಯುಪುತ್ರ, ನೀನು ಇಲ್ಲಿ ಕಣ್ಣಾರೆ ನೋಡಿದ ಎಲ್ಲಾ ಸಂಗತಿಯನ್ನೂ ಶ್ರೀರಾಮನಿಗೆ ತಿಳಿಸು (೧೯–೨೦). ಸುಗ್ರೀವನು ಸಮೀಪದಲ್ಲಿ ಕೇಳುತ್ತಿರುವಾಗಲೇ ಇದೆಲ್ಲವನ್ನೂ ತಿಳಿಸಿ, ನಾನು ರಕ್ಷಿಸಿಕೊಂಡು ಬಂದಿರುವ ಈ ವಸ್ತುವನ್ನು ಶ್ರೀರಾಮನಿಗೆ ಕೊಡು' ಎಂದು ಹೇಳಿದಳು. ಅನಂತರ 'ಶ್ರೀರಾಮನಿಗೆ ಇದನ್ನು ಕೊಡುವಾಗ ನಾನು ಹೀಗೆ ನುಡಿದೆನೆಂದು ಹೇಳು : ಇದು ಬಹುಪ್ರಯಾಸದಿಂದ ನಾನು ಕಾಪಾಡಿಕೊಂಡು ಬಂದಿರುವ ಚೂಡಾಮಣಿ. ಒಂದುಸಲ ನನ್ನ ತಿಲಕವು ಅಳಿಸಿಹೋಗಿರಲು ನೀನು ಮಣಿಶಿಲೆಯಿಂದ ನನ್ನ ಕಪೋಲದಮೇಲೆ ಒಂದು ಬೊಟ್ಟನ್ನು ಇಟ್ಟೆ. ಅದನ್ನು ನೆನಪುಮಾಡಿಕೊ (೨೧–೨೨). 'ನಾನು ರಕ್ಷಿಸಿಕೊಂಡು ಬಂದಿದ್ದ ಈ ದಿವ್ಯಚೂಡಾಮಣಿಯನ್ನು ಈಗ ಕಳುಹಿಸಿಬಿಟ್ಟಿದ್ದೇನೆ. ಶೋಕವು ಉಕ್ಕಿಬಂದಾಗ ಈ ಚೂಡಾಮಣಿಯನ್ನು ನೋಡಿದರೆ ನಿನ್ನನ್ನೇ ನೋಡಿದಂತೆ ಮನಸ್ಸಿಗೆ ಹರ್ಷವಾಗುತ್ತಿತ್ತು. ದಶರಥಪುತ್ರ, ಇನ್ನು ಒಂದು ತಿಂಗಳು ಹೇಗಾದರೂ ಪ್ರಾಣವನ್ನು ಹಿಡಿದುಕೊಳ್ಳುವೆನು. ತಿಂಗಳು ಕಳೆದ ಮೇಲೆ ಸರ್ವಥಾ ನಾನು ಬದುಕುವುದಿಲ್ಲ. ರಾಕ್ಷಸರ ಕೈಗೆ ಸಿಕ್ಕಿಹೋಗಿದ್ದೇನೆ' ಎಂದು ವಿಜ್ಞಾಪಿಸಬೇಕೆಂದು ಆ ಕೃಶಾಂಗಿಯು ನುಡಿದಳು (೨೩–೨೫). ರಘುನಾಥ, ರಾವಣಾಂತಃಪುರದಲ್ಲಿ ದೇವಿಯು ಸೆರೆಯಾಗಿದ್ದಾಳೆ. ಹೆಣ್ಣುಜಿಂಕೆಯಂತೆ ಕಣ್ಣನ್ನು ಅರಳಿಸಿಕೊಂಡು ಈ ಮಾತನ್ನು ನನಗೆ ಹೇಳಿದಳು. ಅವಳು ಹೇಳಿದ ಮಾತನ್ನೇ ನಾನು ನಿನಗೆ ತಿಳಿಸಿದ್ದೇನೆ. ಈಗ ಸಮುದ್ರವನ್ನು ದಾಟಲು ತಕ್ಕ ಪ್ರಯತ್ನವನ್ನು ಮಾಡಬೇಕು" ಎಂದನು (೨೬) ಹೀಗೆ ವಾಯುಪುತ್ರನಾದ ಆಂಜನೇಯನು ರಾಮಲಕ್ಷ್ಮಣರಿಗೆ ಸೀತಾವೃತ್ತಾಂತವನ್ನು ಹೇಳಿ ಧೈರ್ಯವನ್ನುಂಟುಮಾಡಿದನು ಸೀತಾದೇವಿಯು ಹೇಳಿಕಳುಹಿಸಿದ ಸಂದೇಶವೆಲ್ಲವನ್ನೂ ಯಥಾವತ್ತಾಗಿ ತಿಳಿಸಿ, ಶ್ರೀರಾಮನಿಗೆ ಚೂಡಾಮಣಿಯನ್ನು ಅರ್ಪಿಸಿದನು (೨೭).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಅರುವತ್ತೈದನೆಯ ಸರ್ಗ

## ಸರ್ಗ ೬೬

### ಶ್ರೀರಾಮನು ಚೂಡಾಮಣಿಯನ್ನು ನೋಡಿ ದುಃಖಿಸುತ್ತ, ಸೀತಾಸಂದೇಶವನ್ನು ಇನ್ನೂ ಹೇಳುವಂತೆ ಹನುಮಂತನನ್ನು ಕೇಳುವುದು

ಶ್ರೀರಾಮನು ಆ ಚೂಡಾಮಣಿಯನ್ನು ಎದೆಗೆ ಒತ್ತಿಕೊಂಡು ಗಳಗಳನೆ ಅತ್ತುಬಿಟ್ಟನು. ಲಕ್ಷ್ಮಣನೂ ಅಳತೊಡಗಿದನು. ಶ್ರೀರಾಮನು ಕಣ್ಣೀರು ತುಂಬಿಕೊಂಡು ಚೂಡಾಮಣಿಯನ್ನು ನೋಡುತ್ತ ಸುಗ್ರೀವನನ್ನು ಕುರಿತು "ಮಿತ್ರ–ಸುಗ್ರೀವ, ಹಸು ತನ್ನ ಕರುವನ್ನು ಕಂಡಾಗ ಪ್ರೀತಿಯಿಂದ ಕೆಚ್ಚಲು ಸ್ರವಿಸುವಂತೆ, ಈ ಮಣಿರತ್ನವನ್ನು ಕಂಡು ನನ್ನ ಹೃದಯವು ಕರಗಿಹೋಗುತ್ತಿದೆ (೧–೩). ನನ್ನ ಮಾವನು ಈ ರತ್ನವನ್ನು ಸೀತೆಗೆ ಮದುವೆಯ ಕಾಲದಲ್ಲಿ ಕೊಟ್ಟಿದ್ದನು. ಅವಳು ಮದುವಣಗಿತ್ತಿಯಾಗಿದ್ದಾಗ ಇದು ಅವಳ ತಲೆಯಲ್ಲಿ ಬಹಳ ಚೆನ್ನಾಗಿ ಒಪ್ಪುತ್ತಿತ್ತು. ಇದು ಸಮುದ್ರದಲ್ಲಿ ಹುಟ್ಟಿದ ಅಪೂರ್ವರತ್ನ. ಬಲ್ಲವರು ಇದನ್ನು ಬಹಳ ಗೌರವದಿಂದ ಕಾಣುತ್ತ ಬಂದಿದ್ದಾರೆ. ಜನಕಮಹಾರಾಜನು ಒಂದು ಯಜ್ಞವನ್ನು ನಡೆಸಿದಾಗ ದೇವೇಂದ್ರನು ಸಂತುಷ್ಟನಾಗಿ ಇದನ್ನು ಆತನಿಗೆ ಕೊಟ್ಟನು (೪–೫). ಸೌಮ್ಯ, ಈ ಚೂಡಾಮಣಿಯನ್ನು ನೋಡಿದರೆ ನನ್ನ ತಂದೆಯೂ ಜನಕಮಹಾರಾಜನೂ ಕಣ್ಣಿಗೆ ಕಟ್ಟಿದಂತಾಗುವರು. ಈ ರತ್ನವು ನನ್ನ ಪ್ರಿಯಳ ತಲೆಗೆ ಬಹಳ ಚೆನ್ನಾಗಿ ಒಪ್ಪುತ್ತದೆ. ಈಗ ನನ್ನ ಪ್ರಿಯಳೇ ಎದುರಿಗೆ ಬಂದು ನಿಂತಂತೆ ತೋರುತ್ತದೆ" ಎಂದು ಹೇಳಿದನು (೬–೭). ಪುನಃ ಹನುಮಂತನ ಕಡೆಗೆ ತಿರುಗಿ "ಸೌಮ್ಯ–ಹನುಮಂತ, ಸೀತೆ ಏನೇನು ಹೇಳಿದಳು? ಮತ್ತೆ ಮತ್ತೆ ಹೇಳು. ಅವಳ ಸಂದೇಶವು ನನಗೆ, ಬಾಯಾರಿದವನಿಗೆ ನೀರು ಕೊಟ್ಟಂತೆ ಆಗುವುದು. ಅವಳು ನನಗೇನು ಹೇಳಿಕಳುಹಿಸಿದ್ದಾಳೆ? ಲಕ್ಷ್ಮಣ, ಇದಕ್ಕಿಂತಲೂ ದುಃಖ ಇನ್ನಾವುದು? ಚೂಡಾಮಣಿಯು ಮಾತ್ರ ಕಾಣುತ್ತಿದೆ. ಸೀತೆ ಇಲ್ಲ (೮–೯). ಇನ್ನು ಒಂದು ತಿಂಗಳು ಸೀತೆಯು ಬದುಕುವುದಾದರೆ, ಚಿರಂಜೀವಿಯೇ ಸರಿ. ನಾನು ಮಾತ್ರ ಆ ನೀಲನೇತ್ರೆಯನ್ನು ಬಿಟ್ಟು ಇನ್ನು ಒಂದು ಕ್ಷಣವೂ ಬದುಕಲಾರೆ. ಹನುಮಂತ, ನನ್ನ ಪ್ರಿಯಳಿರುವ ಸ್ಥಳಕ್ಕೆ ನನ್ನನ್ನು ಕರೆದುಕೊಂಡು ಹೋಗು. ಅವಳ ಸುದ್ದಿ ಗೊತ್ತಾದಮೇಲೆ ಇನ್ನು ಒಂದು ನಿಮಿಷವೂ ಇಲ್ಲಿರ

ಲಾರೆನು (೧೦-೧೧). ಆ ನನ್ನ ಕಾಂತೆ-ಆ ಸಾಧ್ವಿ, ಘೋರರಾಕ್ಷಸರ ನಡುವೆ ಹೆದರುತ್ತ ಹೆದರುತ್ತ ಹೇಗೆ ಇದ್ದಿರಬಹುದು? ರಾಕ್ಷಸರ ಮಧ್ಯದಲ್ಲಿ ಅವಳ ಮುದ್ದುಮುಖವು ಎಂದಿಗೂ ಶೋಭಿಸಲಾರದು. ಶರತ್ಕಾಲದ ರಾತ್ರಿಯಲ್ಲಿ ಬೆಳಗುವ ಚಂದ್ರನಿಗೆ ಮೋಡ ಮುಸುಕಿದಂತೆ, ಅವಳ ಮುಖವು ನಿಶ್ಚಯವಾಗಿಯೂ ಮಾಸಿಹೋಗಿರಬೇಕು (೧೨-೧೩). ಹನುಮಂತ, ನನ್ನ ಸೀತೆ ಏನೇನು ಹೇಳಿದ್ದಾಳೆ—ಎಲ್ಲವನ್ನೂ ಹೇಳಿಬಿಡು. ಔಷಧದಿಂದ ರೋಗಿಯು ಉಳಿದುಕೊಳ್ಳುವಂತೆ, ಅವಳ ಮಾತಿನಿಂದಲೇ ನಾನು ಜೀವವನ್ನು ಹಿಡಿದುಕೊಳ್ಳುವೆನು (೧೪). ಅಪ್ಪಾ-ಹನುಮಂತ, ಮಧುರಸ್ವಭಾವದ ನನ್ನ ಪ್ರಿಯಳು ಮಧುರವಾಗಿ ಮಾತನಾಡತಕ್ಕವಳು ಅವಳು ಏನು ಹೇಳಿದಳು? ನನ್ನನ್ನು ಅಗಲಿರುವ ಆ ಸುಂದರಿ ಏನು ಹೇಳಿದಳು? ನನಗೆ ಹೇಳು" ಎಂದು ನುಡಿದನು (೧೫).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಅರುವತ್ತಾರನೆಯ ಸರ್ಗ

---

## ಸರ್ಗ ೬೭

ಹನುಮಂತನು ರಾಮನಿಗೆ ಸೀತಾಸಂದೇಶವನ್ನು ವಿಸ್ತಾರವಾಗಿ ಹೇಳುವುದು.

ಆಗ ಹನುಮಂತನು ಸೀತಾದೇವಿಯಾಡಿದ ಮಾತುಗಳೆಲ್ಲವನ್ನೂ ವಿಸ್ತಾರವಾಗಿ ನಿವೇದಿಸಲಾರಂಭಿಸಿದನು: "ಹೇ ಪುರುಷೋತ್ತಮ, ಜಾನಕೀದೇವಿಯು ಚಿತ್ರಕೂಟದಲ್ಲಿ ನಡೆದ ವೃತ್ತಾಂತವನ್ನು ಗುರುತಿಗಾಗಿ ಹೇಳಿದಳು (೧-೨). ಅಲ್ಲಿ ಜಾನಕಿಯು ಒಂದು ದಿನ ನಿನ್ನೊಡನೆ ಮಲಗಿ ಸುಖವಾಗಿ ನಿದ್ರಿಸುತ್ತಿರಲು ಅವಳಿಗೆ ಮೊದಲು ಎಚ್ಚರವಾಯಿತಂತೆ. ಆಗ ಒಂದು ಕಾಗೆಯು ತಟ್ಟನೆ ಹಾರಿಬಂದು ಅವಳ ಎದೆಯನ್ನು ಕುಕ್ಕಿತು. ಆ ಸಮಯದಲ್ಲಿ ನೀನು ದೇವಿಯ ತೊಡೆಯಮೇಲೆ ತಲೆ ಇಟ್ಟು ನಿದ್ರೆಮಾಡುತ್ತಿದ್ದೆ. ಕಾಗೆಯು ಪುನಃಪುನಃ ಹಾರಿಬಂದು ದೇವಿಗೆ ತೊಂದರೆಯನ್ನು ಕೊಡುತ್ತಲೇ ಇತ್ತು (೩-೪). ಅವಳ ಎದೆಯನ್ನು ಕುಕ್ಕುತ್ತಲೇ ಇದ್ದಿತಂತೆ. ಆಗ ರಕ್ತವು ಮೈಮೇಲೆ ಸುರಿಯಲು ನಿನಗೆ ಎಚ್ಚರವಾಯಿತು. ಕಾಗೆಯ ಹಿಂಸೆಯನ್ನು ತಡೆಯಲಾರದೆ ಸೀತಾದೇವಿಯು

ಸುಖವಾಗಿ ನಿದ್ರಿಸುತ್ತಿದ್ದ ನಿನ್ನನ್ನು ಎಚ್ಚರಗೊಳಿಸಿದಳಂತೆ (೫–೬). ನೀನು ಎದ್ದು ಆಕೆಯ ಮೈಮೇಲೆ ಆದ ಗಾಯವನ್ನು ಕಂಡು ಕ್ರೋಧದಿಂದ ಸರ್ಪದಂತೆ ನಿಟ್ಟುಸಿರು ಬಿಡುತ್ತಾ ದೇವಿಯನ್ನು ಕುರಿತು 'ಭೀರು, ನಿನ್ನ ಎದೆಯನ್ನು ಉಗುರುಗಳಿಂದ ಗೀರಿ ಹೀಗೆ ಗಾಯಗೊಳಿಸಿದವನಾರು? ಕ್ರುದ್ಧನಾದ ಐದು ಹೆಡೆಯ ಮಹಾಸರ್ಪದೊಡನೆ ಆಟವಾಡುತ್ತಿರುವವನಾರು?' (೭–೮) ಎಂದು ಕೇಳುತ್ತ ಸುತ್ತಲೂ ನೋಡಲಾಗಿ ಆ ವಾಯಸವು ನಿನಗೆ ಕಾಣಿಸಿತು. ಅದರ ಹರಿತವಾದ ಉಗುರುಗಳು ರಕ್ತದಿಂದ ಒದ್ದೆಯಾಗಿದ್ದವು. ಅದು ದೇವಿಯನ್ನು ನೋಡುತ್ತ ಎದುರಿಗೆ ಕುಳಿತಿತ್ತು (೯). ಇಂದ್ರನ ಮಗನು ಆ ವಾಯಸದ ವೇಷದಲ್ಲಿ ಬಂದಿದ್ದನಂತೆ. ಅದು ವೇಗದಲ್ಲಿ ವಾಯುವಿಗೆ ಸಮಾನವಾಗಿದ್ದು ತಿರುಗಾಡುತ್ತ ಭೂಲೋಕಕ್ಕೆ ಬಂದಿತ್ತು. ವೀರಾಗ್ರಣಿ, ನೀನು ಕೋಪದಿಂದ ಕಣ್ಣನ್ನು ತಿರುಗಿಸುತ್ತ ಮನಸ್ಸನ್ನು ಕ್ರೂರವಾಗಿ ಮಾಡಿಕೊಂಡೆ (೧೦–೧೧). ಕೂಡಲೇ ಚಾಪೆಯಿಂದ ಒಂದು ದರ್ಭೆಯನ್ನು ಕಿತ್ತು ಅದನ್ನು ಬ್ರಹ್ಮಾಸ್ತ್ರದ ಮಂತ್ರದಿಂದ ಅಭಿಮಂತ್ರಿಸಿದೆ. ಅದು ಕಾಗೆಯ ಎದುರಿಗೆ ಕಾಲಾಗ್ನಿಯಂತೆ ಜ್ವಲಿಸಲಾರಂಭಿಸಿತು. ನೀನು ಆ ದರ್ಭೆಯನ್ನು ಕಾಗೆಯಮೇಲೆ ಪ್ರಯೋಗಿಸಿದೆ. ಅದು ಕಾಗೆಯನ್ನು ಬೆನ್ನಟ್ಟಿತು (೧೨–೧೩). ಶರಣಾರ್ಥಿಯಾದ ಆ ವಾಯಸವನ್ನು ರಕ್ಷಿಸಲಾರದೆ ತಂದೆಯಾದ ಇಂದ್ರನೂ ದೇವತೆಗಳೂ ಮಹರ್ಷಿಗಳೂ ಕೈಬಿಟ್ಟರು. ಮೂರು ಲೋಕಗಳನ್ನು ಸುತ್ತಿದರೂ ವಾಯಸವನ್ನು ರಕ್ಷಿಸತಕ್ಕವರೊಬ್ಬರೂ ಸಿಗದೆಹೋದರು. ಕಂಗಾಲಾಗಿದ್ದ ವಾಯಸವು ಕಡೆಗೆ ನಿನಗೆ ಶರಣುಬಂದು ನೆಲದಮೇಲೆ ಅಡ್ಡಬಿದ್ದಿತು (೧೪–೧೫). ರಘುನಾಥ, ಶರಣಾಗತರಕ್ಷಕನಾದ ನೀನು ಆ ಕಾಗೆಯನ್ನು ವಧಾರ್ಹವಾಗಿದ್ದರೂ ಕೃಪೆಯಿಂದ ಕಾಪಾಡಿದೆ. ಆದರೆ ಬ್ರಹ್ಮಾಸ್ತ್ರವು ವ್ಯರ್ಥವಾಗಲು ಸಾಧ್ಯವಿಲ್ಲವೆಂದು ನೀನು ಕಾಗೆಯ ಬಲಗಣ್ಣನ್ನು ಊನಗೊಳಿಸಿದೆಯಂತೆ. ಶ್ರೀರಾಮ, ಅನಂತರ ಕಾಗೆಯು ನಿನಗೂ ದಶರಥಮಹಾರಾಜನಿಗೂ ವಂದನೆಗಳನ್ನರ್ಪಿಸಿ ತನ್ನ ನಿವಾಸಕ್ಕೆ ಹೋಯಿತಂತೆ (೧೬–೧೭). ದೇವಿಯು ಈ ವೃತ್ತಾಂತವನ್ನು ಹೇಳಿ ಹೀಗೆ ನುಡಿದಳು: 'ರಾಘವನು ಈ ರೀತಿಯಲ್ಲಿ ಅಸ್ತ್ರವಿದ್ಯಾವಿಶಾರದನೂ ಪರಾಕ್ರಮಿಯೂ ಶೀಲವಂತನೂ ಆಗಿದ್ದರೂ ಈಗ ರಾಕ್ಷಸರಮೇಲೆ ಅಸ್ತ್ರವನ್ನು ಏಕೆ ಪ್ರಯೋಗಿಸುವುದಿಲ್ಲ? ಶ್ರೀರಾಮನನ್ನು ಯುದ್ಧದಲ್ಲಿ ಎದುರಿಸಲು ನಾಗ,

ಗಂಧರ್ವ, ಅಸುರ, ಮರುತ್ತುಗಳಲ್ಲಿ ಯಾರಿಗೂ ಶಕ್ಯವಿಲ್ಲ (೧೮–೧೯). ಆ ವೀರನಿಗೆ ನನ್ನ ವಿಷಯದಲ್ಲಿ ಏನಾದರೂ ಮರುಕವಿದ್ದರೆ, ತನ್ನ ತೀಕ್ಷ್ಣಾಸ್ತ್ರಗಳಿಂದ ಕೂಡಲೇ ರಾವಣನನ್ನು ಕೊಲ್ಲಲಿ! ವೀರನಾದ ಲಕ್ಷ್ಮಣನಾದರೂ ಅಣ್ಣನ ಅಪ್ಪಣೆಯನ್ನು ಪಡೆದು ಈ ಕಾರ್ಯವನ್ನು ಮಾಡಲಿ! (೨೦–೨೧). ಪುರುಷಶ್ರೇಷ್ಠನಾದ ರಾಘವನು ನನ್ನನ್ನು ರಕ್ಷಿಸದೆ ಏಕೆ ಬಿಟ್ಟಿದ್ದಾನೆ? ಆ ಪುರುಷಸಿಂಹರಿಬ್ಬರೂ ಅಗ್ನಿವಾಯುಗಳು ಸೇರಿದಂತೆ ಮಹಾತೇಜಸ್ವಿಗಳಾಗಿದ್ದಾರೆ. ಮಹಾವೀರರು. ದೇವತೆಗಳೂ ಅವರನ್ನು ಎದುರಿಸಲು ಸಾಧ್ಯವಿಲ್ಲ. ಹೀಗಿದ್ದರೂ ನನ್ನನ್ನೇಕೆ ಉಪೇಕ್ಷಿಸಿದ್ದಾರೆ? ನಾನೇ ಯಾವುದೋ ದೊಡ್ಡ ಪಾಪವನ್ನು ಮಾಡಿದ್ದೇನೆ ಸಂದೇಹವಿಲ್ಲ (೨೨–೨೩). ಆದ್ದರಿಂದಲೇ ಅವರೀರ್ವರೂ ಸಮರ್ಥರಾಗಿದ್ದರೂ ನನ್ನನ್ನು ಉಪೇಕ್ಷೆಮಾಡಿದ್ದಾರೆ!' ಹೀಗೆ ದೇವಿಯು ಕಣ್ಣೀರು ಸುರಿಸುತ್ತಾ ದೈನ್ಯದಿಂದ ಮಾತನಾಡುವುದನ್ನು ಕೇಳಿ ನಾನು ಹೇಳಿದೆನು: 'ಅಮ್ಮಾ, ಶ್ರೀರಾಮನು ನಿನ್ನ ವಿರಹಶೋಕದಿಂದ ಏನೂ ತೋರದವನಾಗಿದ್ದಾನೆ. ಸತ್ಯದ ಆಣೆಯಾಗಿ ಈ ಮಾತನ್ನು ಹೇಳುತ್ತಿದ್ದೇನೆ (೨೪–೨೫). ಶ್ರೀರಾಮನು ದುಃಖಿತನಾಗಿರಲು ಲಕ್ಷ್ಮಣನೂ ಅವನನ್ನು ನೋಡಿ ದುಃಖಿಸುವನು. ಹೇಗಾದರೂ ನಿನ್ನನ್ನು ನೋಡಿದ್ದಾಯಿತು ಇದು ಶೋಕಿಸುವ ಕಾಲವಲ್ಲ. ಸ್ವಲ್ಪಕಾಲದಲ್ಲಿಯೇ ನಿನ್ನ ದುಃಖವು ಕೊನೆಗೊಳ್ಳುವುದು ಆ ರಾಜಕುಮಾರರಿಬ್ಬರೂ ಪುರುಷಶ್ರೇಷ್ಠರು (೨೬–೨೭). ಅವರು ನಿನ್ನನ್ನು ಕಾಣುವ ಉತ್ಸಾಹದಲ್ಲಿದ್ದಾರೆ. ಈ ಲಂಕೆಯನ್ನು ಬೂದಿಮಾಡಿಬಿಡುತ್ತಾರೆ. ರಾಘವನು ಯುದ್ಧದಲ್ಲಿ ರಾವಣನನ್ನು ಬಂಧುಸಮೇತನಾಗಿ ಸಂಹರಿಸಿ, ನಿನ್ನನ್ನು ಅಯೋಧ್ಯಾನಗರಕ್ಕೆ ಕರೆದೊಯ್ಯುವನು. ಇದು ನಿಶ್ಚಯ. ದೇವಿ, ಶ್ರೀರಾಮನಿಗೆ ಸಂತೋಷವನ್ನುಂಟುಮಾಡುವ ಒಂದು ಅಭಿಜ್ಞಾನವನ್ನು ಕೊಡು' ಎಂದು ಹೇಳಿದೆನು (೨೮–೨೯). ರಘುನಾಥ, ಆಗ ದೇವಿಯು ಸುತ್ತಲೂ ತಿರುಗಿನೋಡಿ ತನ್ನ ಸೆರಗಿನಲ್ಲಿ ಕಟ್ಟಿದ್ದ ಈ ಚೂಡಾಮಣಿಯನ್ನು ಬಿಚ್ಚಿ ನನಗೆ ಕೊಟ್ಟಳು. ನಾನು ನಿನಗೋಸ್ಕರ ಈ ದಿವ್ಯರತ್ನವನ್ನು ತೆಗೆದುಕೊಂಡೆನು (೩೦–೩೧). ಅನಂತರ ನಾನು ಸೀತಾದೇವಿಗೆ ತಲೆಬಾಗಿ ವಂದಿಸಿ ಹಿಂದಿರುಗಿಬರಲು ಸಿದ್ಧನಾಗಿ, ದೇಹವನ್ನು ಬೆಳೆಯಿಸಿಕೊಳ್ಳತೊಡಗಿದೆನು. ನಾನು ಹೊರಟುಬಿಡುವೆನೆಂಬ ವ್ಯಥೆಯಿಂದ ದುಃಖದ ವೇಗವನ್ನು ತಡೆದು

ಕೊಳ್ಳಲಾರದೆ, ಜನಕಪುತ್ರಿಗೆ ಕಣ್ಣೀರು ಉಕ್ಕಿಹರಿಯಿತು. ಆಕೆಯು ದೀನ ವದನೆಯಾಗಿ ತೊದಲುತ್ತ 'ಹನುಮಂತ, ಪುರುಷಸಿಂಹರಾದ ರಾಮಲಕ್ಷ್ಮಣ ರಿಗೆ ನಾನು ಕುಶಲವನ್ನು ವಿಚಾರಿಸಿದ್ದೇನೆಂದು ಹೇಳು (೩೨–೩೪). ಸುಗ್ರೀವ ನಿಗೂ ಅವನ ಮಂತ್ರಿಗಳಿಗೂ ಎಲ್ಲಾ ವಾನರರಿಗೂ ನಾನು ಕುಶಲವನ್ನು ವಿಚಾರಿಸಿದ್ದೇನೆಂದು ಹೇಳು' ಎಂದು ನುಡಿದಳು. ಮತ್ತೆ ನನ್ನನ್ನು ಕುರಿತು 'ವಾನರೋತ್ತಮ, ಆಜಾನುಬಾಹುವೂ ಕಮಲನೇತ್ರನೂ ಆದ ಶ್ರೀರಾಮ ಚಂದ್ರನನ್ನು ಕಣ್ಣಾರೆ ನೋಡತಕ್ಕ ನೀನೇ ಭಾಗ್ಯಶಾಲಿ. ನನ್ನ ಮೈದುನನೂ ಕೀರ್ತಿಶಾಲಿಯೂ ಮಹಾಬಾಹುವೂ ಆದ ಲಕ್ಷ್ಮಣನನ್ನು ಕಣ್ಣಾರೆ ನೋಡತಕ್ಕ ನೀನೇ ಭಾಗ್ಯಶಾಲಿ' ಎಂದಳು (೩೫–೩೬). ಆಗ ನಾನು "ದೇವಿ–ಮಿಥಿಲ ರಾಜತನಯೆ, ನನ್ನ ಬೆನ್ನಿನಮೇಲೆ ಹತ್ತಿ ಕುಳಿತುಕೊ. ನಿನ್ನನ್ನು ಈಗಲೇ ಕರೆ ದೊಯ್ದು ಸುಗ್ರೀವಲಕ್ಷ್ಮಣಸಮೇತನಾದ ಶ್ರೀರಾಮನ ದರ್ಶನವನ್ನು ಮಾಡಿಸಿ ಬಿಡುತ್ತೇನೆ!' ಎಂದೆನು (೩೭–೩೮). ಆಗ ದೇವಿಯು 'ವಾನರೋತ್ತಮ, ಇದು ಧರ್ಮವಲ್ಲ. ನಾನಾಗಿ ನಿನ್ನ ಬೆನ್ನನ್ನು ಮುಟ್ಟುವುದು ಸರಿಯಲ್ಲ. ಹಿಂದೆ ರಾಕ್ಷಸನು ನನ್ನನ್ನು ಕದ್ದು ತರುವಾಗ ಬಲಾತ್ಕಾರದಿಂದ ನನ್ನನ್ನು ಮುಟ್ಟಿದರೆ ನಾನೇನು ಮಾಡಲಿ? ಕಾಲಗತಿಯಿಂದ ನನಗೆ ಹಾಗಾಯಿತು (೩೯–೪೦). ಆ ರಾಜಪುತ್ರರಿರುವ ಸ್ಥಳಕ್ಕೆ ನೀನು ಹೋಗು' ಎಂದಳು. ಪುನಃ 'ಶ್ರೀರಾಮನು ಈ ದುಃಖಸಮುದ್ರದಿಂದ ನನ್ನನ್ನು ಪಾರುಮಾಡುವಂತೆ ನೀನು ಪ್ರಯತ್ನಿಸಬೇಕು. ಶ್ರೀರಾಮನ ಬಳಿಗೆ ಹೋಗಿ ನನಗೆ ಎಂತಹ ಅಪಾರವಾದ ಕಷ್ಟ ಒದಗಿದೆ ಎಂದುದನ್ನೂ ರಾಕ್ಷಸರು ಹೇಗೆ ನನ್ನನ್ನು ಹೆದರಿಸುತ್ತಿದ್ದಾರೆ ಎಂಬುದನ್ನೂ ತಿಳಿಸು. ವಾನರೋತ್ತಮ, ನಿನಗೆ ಸುಖಪ್ರಯಾಣವಾಗಲಿ' ಎಂದು ಹೇಳಿದಳು (೪೧–೪೩). ಶ್ರೀರಾಮ, ಸೀತಾದೇವಿಯು ಶೋಕಿಸುತ್ತ ಈ ರೀತಿಯಾಗಿ ನಿನಗೆ ಹೇಳಿಕಳುಹಿಸಿದ್ದಾಳೆ. ನನ್ನ ಮಾತನ್ನು ನಂಬು. ದೇವಿಯು ಕುಶಲದಿಂದ ಇದ್ದಾಳೆ" ಎಂದು ನುಡಿದನು (೪೪).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಅರುವತ್ತೇಳನೆಯ ಸರ್ಗ

## ಸರ್ಗ ೬೮

ತಾನು ಸೀತಾದೇವಿಗೆ ಹೇಳಿದ ಇನ್ನೂ ಕೆಲವು ಸಮಾಧಾನಗಳನ್ನು ಹನುಮಂತನು ಶ್ರೀರಾಮನಿಗೆ ತಿಳಿಸುವುದು.

ಹನುಮಂತನು ಶ್ರೀರಾಮನನ್ನುದ್ದೇಶಿಸಿ "ಅನಂತರ ನಾನು ಹೊರಡಲು ಸಿದ್ಧನಾಗಿರುವುದನ್ನು ಕಂಡು ಸೀತಾದೇವಿಯು ಪ್ರೀತಿವಿಶ್ವಾಸಗಳಿಂದ ಪುನಃ ಹೀಗೆಂದಳು: "ಹನುಮಂತ, ನಿನಗೆ ಸಮ್ಮತವಾದರೆ ಒಂದು ದಿನದವಟ್ಟಿಗೆ ಎಲ್ಲಾದರೂ ರಹಸ್ಯವಾದ ಸ್ಥಳದಲ್ಲಿ ವಿಶ್ರಮಿಸಿಕೊಂಡಿರು. ನಾಳೆ ನೀನು ಹೋಗಬಹುದು (೧–೩). ನೀನು ಸಮೀಪದಲ್ಲಿದ್ದರೆ ಮಂದಭಾಗ್ಯಳಾದ ನನಗೆ ಸ್ವಲ್ಪ ಕಾಲವಾದರೂ ಶೋಕವು ಕುಗ್ಗಿ ಮನಸ್ಸಿಗೆ ಸಮಾಧಾನವಾಗುತ್ತದೆ. ನೀನು ಹೊರಟುಹೋದಮೇಲೆ, ಪುನಃ ನೀನು ಬರತಕ್ಕವನಾದರೂ ಅಲ್ಲಿಯ ವರೆಗೆ ನಾನು ಬದುಕಿರುತ್ತೇನೋ ಇಲ್ಲವೋ! (೪–೫). ಕಷ್ಟದಿಂದ ಕಷ್ಟಕ್ಕೆ ಸಿಕ್ಕಿಹೋಗಿರುವ ದುರ್ಭಾಗ್ಯಳು ನಾನು. ನೀನು ಕಾಣಿಸದೆಹೋದರೆ ದುಃಖ ದಿಂದ ನನ್ನ ಸಂಕಟವು ಹೆಚ್ಚುತ್ತದೆ. ವಾನರೋತ್ತಮ, ನಿನಗೆ ಸಹಾಯಕ ರಾದ ವಾನರಭಲ್ಲೂಕಗಳ ವಿಷಯದಲ್ಲಿ ನನಗೆ ಒಂದು ದೊಡ್ಡ ಸಂದೇಹ ಇದ್ದೇ ಇದೆ (೬–೭). ಅವರು ಈ ಅಪಾರವಾದ ಮಹಾಸಾಗರವನ್ನು ಹೇಗೆ ದಾಟಿ ಬರುತ್ತಾರೆ? ರಾಮಲಕ್ಷ್ಮಣರೂ ದಾಟುವುದು ಹೇಗೆ? ಮಹಾಸಾಗರವನ್ನು ಲಂಘಿಸಲು ಮೂವರಿಗೆಮಾತ್ರ ಸಾಧ್ಯ—ಒಬ್ಬ ಗರುಡ, ಒಬ್ಬ ವಾಯುದೇವ, ಇನ್ನೊಬ್ಬ ನೀನು (೮–೯). ಪರಿಸ್ಥಿತಿಯು ಇಷ್ಟು ಕಠಿಣವಾಗಿರುವಾಗ ನಿನ್ನ ಸಮಾಧಾನವೇನು? ಕಾರ್ಯಸಾಧನೆಯನ್ನು ನೀನೇ ಬಲ್ಲೆ. ಹೇ ವೀರಾಗ್ರಣಿ, ನನ್ನನ್ನು ಬಿಡಿಸಿಕೊಂಡು ಹೋಗುವ ಕೆಲಸವನ್ನು ನೀನೊಬ್ಬನೇ ನಿರ್ವಹಿಸಬಲ್ಲೆ ಯೆಂಬುದೇನೋ ಹೌದು. ನಿನ್ನ ಸಾಮರ್ಥ್ಯವು ಯಶಸ್ವಿಯಾಗಿ ಫಲಿಸಬಲ್ಲದು (೧೦–೧೧). ಆದರೆ ಶ್ರೀರಾಮನು ತನ್ನ ಬಲವನ್ನೆಲ್ಲಾ ವಿನಿಯೋಗಿಸಿ ಯುದ್ಧ ದಲ್ಲಿ ರಾವಣನನ್ನು ಸಂಹಾರಮಾಡಿ ವಿಜಯಿಯಾಗಿ, ನನ್ನನ್ನು ಅಯೋಧ್ಯೆಗೆ ಕರೆದುಕೊಂಡು ಹೋದರೆ ಅವನಿಗೆ ಕೀರ್ತಿ ಲಭಿಸುತ್ತದೆ. ಆ ವೀರನಿಗೆ ಭಯ ಪಟ್ಟು ಅವನಿಗೆ ತಿಳಿಯದಂತೆ ಈ ರಾಕ್ಷಸನು ಮೋಸದಿಂದ ನನ್ನನ್ನು ಅಪಹರಿಸಿ ತಂದಿದ್ದಾನೆ. ಹಾಗೆಯೇ ರಾಘವನೂ ರಾವಣನಿಗೆ ತಿಳಿಯದಂತೆ ನನ್ನನ್ನು

ಬಿಡಿಸಿಕೊಂಡು ಹೋಗುವುದು ಸರಿಯಲ್ಲ (೧೨–೧೩). ಶತ್ರುಧ್ವಂಸಕನಾದ ಶ್ರೀರಾಮನು ಸೈನ್ಯಸಮೇತನಾಗಿ ಬಂದು ಲಂಕಾಪಟ್ಟಣದಮೇಲೆ ಧಾಳಿಯಿಟ್ಟು, ನನ್ನನ್ನು ಬಿಡಿಸಿಕೊಂಡು ಹೋಗುವುದು ಅವನ ಕೀರ್ತಿಗೆ ಯೋಗ್ಯವಾದ ಕೃತ್ಯ. ರಣಧೀರನಾದ ಆ ಮಹಾತ್ಮನು ತನಗೆ ಅನುರೂಪವಾದ ಪರಾಕ್ರಮವನ್ನು ತೋರಿಸಲು ಅನುಕೂಲವಾಗುವಂತೆ ನೀನು ಏರ್ಪಡಿಸು" (೧೪–೧೫). ಹೀಗೆ ಸೀತಾದೇವಿಯು ಸ್ನೇಹದಿಂದ ಅರ್ಥಗರ್ಭಿತವಾಗಿಯೂ ಯುಕ್ತಿಯುಕ್ತವಾಗಿಯೂ ಮಾತನಾಡಿದಳು. ಆಗ ನಾನು "ದೇವಿ, ವಾನರಭಲ್ಲೂಕಗಳಿಗೆ ಅಧಿಪತಿಯಾದ ವೀರಸುಗ್ರೀವನು ನಿನಗೋಸ್ಕರ ದೃಢನಿಶ್ಚಯವನ್ನು ಮಾಡಿದ್ದಾನೆ. ಆತನ ವಶದಲ್ಲಿ ಮನೋವೇಗದಿಂದ ಸಂಚರಿಸಬಲ್ಲ ಮಹಾಪರಾಕ್ರಮಿಗಳಾದ ವಾನರರಿದ್ದಾರೆ (೧೬–೧೮). ಅವರು ಮೇಲೆ ಅಡ್ಡಲಾಗಿ ಎಲ್ಲೆಲ್ಲಿಯೂ ನಿರಾತಂಕವಾಗಿ ಸಂಚರಿಸಬಲ್ಲರು ಅವರು ಮಹಾತೇಜಸ್ವಿಗಳು. ಎಂತಹ ದೊಡ್ಡ ಕೆಲಸವನ್ನು ಸಾಧಿಸುವುದಕ್ಕೂ ಹಿಂಜರಿಯತಕ್ಕವರಲ್ಲ. ಬಲದಿಂದ ಕೊಬ್ಬಿರುವ ಆ ವಾನರರು ಆಕಾಶಮಾರ್ಗದಲ್ಲಿ ಈ ಪ್ರಪಂಚವನ್ನು ಎಷ್ಟೋಸಲ ಸುತ್ತಿಬಿಟ್ಟಿದ್ದಾರೆ (೧೯–೨೦). ಅವರು ನನಗಿಂತಲೂ ಬಲಶಾಲಿಗಳು. ಕೆಲವರು ನನಗೆ ಸಮಾನರು. ನನಗಿಂತ ಕಡಿಮೆಯಾದವನೊಬ್ಬನೂ ಸುಗ್ರೀವನ ಹತ್ತಿರವೇ ಇಲ್ಲ! ನಾನೇ ಸಮುದ್ರವನ್ನು ದಾಟಿ ಇಲ್ಲಿಗೆ ಬಂದಿದ್ದೇನೆ. ಇನ್ನು ಆ ಮಹಾಬಲಾಢ್ಯರ ವಿಷಯದಲ್ಲಿ ಹೇಳುವುದೇನು? ಸಾಮಾನ್ಯರನ್ನು ಇಂತಹ ದೂತಕಾರ್ಯಕ್ಕೆ ಕಳುಹಿಸುತ್ತಾರೆಯೇ ಹೊರತು ಶ್ರೇಷ್ಠರಾದ ವೀರರನ್ನು ಕಳಿಸುವುದಿಲ್ಲ (೨೧–೨೨). ಆದ್ದರಿಂದ ದೇವಿ, ದುಃಖಿಸಬೇಡ; ವ್ಯಥೆಪಡಬೇಡ. ಕಪಿವೀರರು ಒಂದೇ ನೆಗೆತಕ್ಕೆ ಲಂಕೆಗೆ ಬಂದು ಸೇರುವರು. ಪುರುಷಸಿಂಹರಾದ ರಾಮಲಕ್ಷ್ಮಣರು ನನ್ನ ಹೆಗಲನ್ನೇರಿ, ಉದಯಿಸಿದ ಸೂರ್ಯಚಂದ್ರರಂತೆ ಬೆಳಗುತ್ತ ನಿನ್ನ ಸಮೀಪಕ್ಕೆ ಬಂದು ಸೇರುವರು (೨೩–೨೪). ಶತ್ರುಗಳನ್ನು ಸಂಹರಿಸುತ್ತ ಸಿಂಹದಂತೆ ಬರುತ್ತಿರುವ ಶ್ರೀರಾಮನನ್ನು ಸದ್ಯದಲ್ಲಿಯೇ ನೋಡುತ್ತೀಯೆ. ಧನುರ್ಧಾರಿಯಾಗಿ ಲಂಕೆಯ ಹೆಬ್ಬಾಗಿಲಿನಲ್ಲಿ ಬಂದು ನಿಂತ ವೀರಲಕ್ಷ್ಮಣನನ್ನು ನೋಡುತ್ತೀಯೆ. ಸಿಂಹಶಾರ್ದೂಲಗಳಂತೆ ಉಗುರುಗಳಿಂದಲೂ ಕೋರೆಹಲ್ಲುಗಳಿಂದಲೂ ಹೋರಾಡುವ ವಾನರವೀರರು ಮತ್ತಮಾತಂಗಗಳಂತೆ ನುಗ್ಗಿಬರುವುದನ್ನು ಶೀಘ್ರದಲ್ಲಿಯೇ ನೋಡುತ್ತೀಯೆ

(೨೫–೨೬). ಈ ಲಂಕೆಯ ಸುತ್ತಲಿರುವ ಪರ್ವತಪ್ರದೇಶಗಳಲ್ಲಿ ಬೆಟ್ಟಗಳ ಹಾಗೆ—ಮೇಘಗಳ ಹಾಗೆ ಕಂಗೊಳಿಸುತ್ತ ಕಪಿನಾಯಕರು ಗರ್ಜಿಸುವುದನ್ನು ಸ್ವಲ್ಪ ಕಾಲದಲ್ಲಿಯೇ ಕೇಳುತ್ತೀಯೆ ರಘುನಾಥನು ಶತ್ರುವನ್ನು ಸಂಹಾರ ಮಾಡಿ, ಅರಣ್ಯವಾಸವನ್ನು ಮುಗಿಸಿ, ನಿನ್ನನ್ನು ಕರೆದುಕೊಂಡು ಅಯೋಧ್ಯೆಗೆ ಹೋಗಿ ಪಟ್ಟಾಭಿಷಿಕ್ತನಾಗುವುದನ್ನು ಶೀಘ್ರದಲ್ಲಿಯೇ ನೀನು ನೋಡುತ್ತೀಯೆ" ಎಂದು ಹೇಳಿದೆನು (೨೭–೨೮). ಶ್ರೀರಾಮ, ಜಾನಕೀದೇವಿಯು ನಿನ್ನ ವಿಯೋಗದುಃಖದಿಂದ ನರಳುತ್ತಿದ್ದಳು. ಈ ರೀತಿಯಲ್ಲಿ ನಾನು ಉತ್ಸಾಹದಾಯಕವಾದ ವೀರವಾಣಿಯಿಂದ ಸಮಾಧಾನವನ್ನು ಹೇಳಿದೆನು. ಆಗ ದೇವಿಯ ಮನಸ್ಸಿಗೆ ಶಾಂತಿಯು ಲಭಿಸಿತು" ಎಂದನು (೨೯).

ಇಲ್ಲಿಗೆ ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಅರುವತ್ತೆಂಟನೆಯ ಸರ್ಗ

**ಸುಂದರಕಾಂಡವು ಸಂಪೂರ್ಣವಾಯಿತು.**



# ಅನುಬಂಧ

## ೧

## ತ್ರಾತುಮರ್ಹಸಿ ವೀರ ತ್ವಂ ಪಾತಾಲಾದಿವ ಕೌಶಿಕೀಮ್

ಕೌಶಿಕನೆಂದರೆ ಇಂದ್ರ. ಅವನ ರಾಜ್ಯಲಕ್ಷ್ಮಿ ಕೌಶಿಕೀ. ಬ್ರಹ್ಮಪುರಾಣದಲ್ಲಿ ಈ ಕಥೆ ಇದೆ: ವೃತ್ರನನ್ನು ವಧಿಸಿದ್ದರಿಂದ ಇಂದ್ರನು ಶ್ರೀರಹಿತನಾದನು. ಅವನ ರಾಜ್ಯಲಕ್ಷ್ಮಿಯು ಇಂದ್ರನನ್ನು ತ್ಯಜಿಸಿ ಗವಾಕ್ಷತೀರ್ಥದಲ್ಲಿ ನೆಲೆಸಿದಳು. ಅವಳನ್ನು ಕರೆತರಲು ಮಹಾವಿಷ್ಣುವೂ ದೇವತೆಗಳೂ ಅಲ್ಲಿಗೆ ಹೋದರು. ಆಗ ಲಕ್ಷ್ಮಿಯು ಪಾತಾಳವನ್ನು ಸೇರಿದಳು. ಅಲ್ಲಿಗೆ ಹೋಗಲು ದೇವತೆಗಳಿಗೆ ಸಾಧ್ಯವಾಗಲಿಲ್ಲ. ಸರ್ವಲಕ್ಷಣಸಂಪನ್ನನಾದ ಪುರುಷೋತ್ತಮನು ಮಾತ್ರ ಪಾತಾಳಕ್ಕೆ ಹೋಗಿ ಇಂದ್ರನ ಲಕ್ಷ್ಮಿಯನ್ನು ಕರೆತರಲು ಸಾಧ್ಯವೆಂದು ಅಶರೀರವಾಣಿ ನುಡಿಯಿತು. ಆಗ ದೇವತೆಗಳ ಪ್ರಾರ್ಥನೆಯಂತೆ ಮಹಾವಿಷ್ಣುವು ಪಾತಾಳಕ್ಕೆ ಹೋಗಿ ಲಕ್ಷ್ಮಿಯನ್ನು ತಂದು ಇಂದ್ರನಿಗೆ ಒಪ್ಪಿಸಿದನು.

ಕೌಶಿಕಿಯೆಂದರೆ ಭೂದೇವಿಯೆಂದು ತಿಲಕವ್ಯಾಖ್ಯಾನದಲ್ಲಿ ಬರೆದಿದೆ. ವರಾಹಾವತಾರದಲ್ಲಿ ಮಹಾವಿಷ್ಣುವು ಭೂಮಿಯನ್ನು ಪಾತಾಳದಿಂದ ತಂದ ಕಥೆಯನ್ನು ಸ್ಮರಿಸಿಕೊಳ್ಳಬಹುದು.

ಉತಥ್ಯನ ಭಾರ್ಯೆಯಾದ ಭದ್ರೆಯೆಂಬವಳನ್ನು ವರುಣನು ಪಾತಾಳಕ್ಕೆ ಅಪಹರಿಸಿಕೊಂಡು ಹೋದನೆಂದೂ ಆಗ ಉತಥ್ಯನು ಸಮುದ್ರವನ್ನು ಕುಡಿದು ಶೋಷಿಸಿ ಭದ್ರೆಯನ್ನು ಪಡೆದನೆಂದೂ ಮಹಾಭಾರತದ ಅನುಶಾಸನಪರ್ವದಲ್ಲಿ ಒಂದು ಕಥೆ ಇದೆ. ಭದ್ರೆಯೇ ಕೌಶಿಕಿಯೆಂದು ಕೆಲವರು ಹೇಳುತ್ತಾರೆ.

## ೨

## ನ ವೀರ ಸೇನಾ ಗಣಶೋ ಚ್ಯವಂತಿ

ಕೆಲವು ಪಾಠಗಳಲ್ಲಿ ಈ ಶ್ಲೋಕವು ಕಂಡುಬರುವುದಿಲ್ಲ. ಒಗಟಿನಂತೆ ಕ್ಲಿಷ್ಟವೂ ಅರ್ಥಪುಷ್ಟಿಯಿಲ್ಲದೆಯೂ ಇರುವ ಈ ಶ್ಲೋಕವು ಪ್ರಕ್ಷಿಪ್ತವಿರ

ಬಹುದು. ಈ ಶ್ಲೋಕದ ಅರ್ಥವನ್ನು ಎರಡು ಬಗೆಯಲ್ಲಿ ವ್ಯಾಖ್ಯಾನಕಾರರು ಹೇಳಿದ್ದಾರೆ. ಸೌಕರ್ಯಕ್ಕಾಗಿ ಪ್ರತಿಪದಾರ್ಥವನ್ನು ಇಲ್ಲಿ ಬರೆಯಲಾಗಿದೆ:

೧. ವೀರ=ವೀರನಾದ ಮೇಘನಾದನೆ, ಗಣಶೋಚಿ=ರಾಕ್ಷಸಗಣಗಳನ್ನೇ ನಾಶಮಾಡಬಲ್ಲ ಹನುಮಂತನು ಇರುವಾಗ, ಸೇನಾಃ=ರಾಕ್ಷಸಸೇನೆಗಳು, ನ ಅವಂತಿ=ನಮ್ಮನ್ನು ರಕ್ಷಿಸಲಾರವು. ಅಲಸಾರಂ=ಜೀರ್ಣವಾದ ಸಾರವುಳ್ಳ, ವಜ್ರಂ=ವಜ್ರಾಯುಧವನ್ನು, ಆದಾಯ=ತೆಗೆದುಕೊಂಡು, ನ ವಿಶ=ಅವನ ಬಳಿಗೆ ಹೋಗಬೇಡ. ಅಸ್ಯ=ಈ ಹನುಮಂತನ, ಗತಿಪ್ರಮಾಣಂ=ಗತಿವೇಗದ ಪ್ರಮಾಣವು, ಮಾರುತಸ್ಯ ನ - ವಾಯುವಿಗೂ ಇಲ್ಲ. ಅಗ್ನಿಕಲ್ಪಃ=ಅಗ್ನಿಸದೃಶನಾದ ಆತನು, ಕರಣೇನ=ಯಾವ ಸಾಧನದಿಂದಲೂ, ಹಂತುಂ=ಕೊಲ್ಲಲು, ನ=ಶಕ್ಯನಲ್ಲ.

೨. ವೀರ=ವೀರನಾದ ಮೇಘನಾದನೆ, ಸೇನಾಃ ನ=ಸೇನೆಗಳು ಹನುಮಂತನನ್ನು ಗೆಲ್ಲಲಾರವು. ಏಕೆಂದರೆ, ಗಣಶಃ=ಗುಂಪುಗುಂಪಾಗಿ, ಚ್ಯವಂತಿ=ಚದರಿಹೋಗುತ್ತವೆ. ವಿಶಾಲಸಾರಮ್=ತೀಕ್ಷ್ಣವಾದ ಸಾರವುಳ್ಳ, ವಜ್ರಂ=ವಜ್ರಾಯುಧವನ್ನು, ಆದಾಯ=ತೆಗೆದುಕೊಂಡುಹೋದರೂ, ನ=ಗೆಲ್ಲಲು ಸಾಧ್ಯವಿಲ್ಲ. ಮಾರುತಸ್ಯ ಅಸ್ಯ=ವಾಯುಪುತ್ರನಾದ ಈತನ, ಗತಿಪ್ರಮಾಣಂ=ಗತಿವೇಗದ ಪರಿಚ್ಛೇದವು, ನ=ಇಲ್ಲ. ಅಗ್ನಿಕಲ್ಪಃ=ಅಗ್ನಿಸದೃಶನಾದ ಆತನು, ಕರಣೇನ=ಯಾವ ಸಾಧನದಿಂದಲೂ, ಹಂತುಂ=ಕೊಲ್ಲಲು, ನ=ಶಕ್ಯನಲ್ಲ.

ನಮ್ಮ ಅನುವಾದವು ಎರಡನೆಯ ವ್ಯಾಖ್ಯಾನವನ್ನನುಸರಿಸಿದೆ. ಆದರೆ ಮಾರುತಶಬ್ದಕ್ಕೆ ಒಂದನೆಯ ವ್ಯಾಖ್ಯಾನದಲ್ಲಿ ಹೇಳಿದಂತೆ ವಾಯುವೆಂಬ ಅರ್ಥವನ್ನಿಟ್ಟುಕೊಳ್ಳಲಾಗಿದೆ. 'ಗಣಶೋ ಚ್ಯವಂತಿ' ಎಂಬಲ್ಲಿ ಸಂಧಿ ಆರ್ಷ.

